# ಕರ್ನಾಟಕತ್ವದ ವಿಕಾಸ



ಗ್ರಂಥಕರ್ತರು :
**ಶ್ರೀ. ಆಲೂರ ವೆಂಕಟರಾಯರು,** ಬಿ.ಎ., ಎಲ್‌ಎಲ್.ಬಿ.
ಧಾರವಾಡ



" ಅಪ್ರಿಯಸ್ಯ ಚ ಪಥ್ಯಸ್ಯ ವಕ್ತಾ ಶ್ರೋತಾ ಚ ದುರ್ಲಭಃ ! "
ಅಪ್ರಿಯವಾದರೂ ಹಿತವನ್ನೇ ನುಡಿಯುವವರು ವಿರಳ !
ಹೇಳುವವರು ಸಿಕ್ಕರೂ ಸಿಗಬಹುದು; ಕೇಳುವವರು ಸಿಗುವುದು ಅತಿ ದುರ್ಲಭ !

**ಬೆಲೆ : ರೂ. ೨·೫೦**

ನವಜೀವನ ಗ್ರಂಥಭಾಂಡಾರ, ಧಾರವಾಡ

## ಸ ಮ ರ್ಪ ಣ



ಕರ್ನಾಟಕಾಂತರ್ಯಾಮಿಯಾದ ಭಾರತೀದೇವಿಗೆ

ಭಾರತಾಂತರ್ಯಾಮಿಯಾದ ಭೂದೇವಿಗೆ

ಭಕ್ತಿಪೂರ್ವಕ

**ಸ ಮ ರ್ಪ ಣ**

**ಕರ್ನಾಟಕದ 'ಸುದಾಮ' — ಆಲೂರ ವೆಂಕಟರಾಯ**

## ಕರ್ನಾಟಕತ್ವದ ವಿಕಾಸ

# ಮುನ್ನುಡಿ

ಆತ್ಮರತಿ–ಆತ್ಮತೃಪ್ತಿ–ಆತ್ಮಸಂತುಷ್ಟಿ — ಗೀತಾ

ಈ ಗ್ರಂಥ ಬರೆಯುವದಕ್ಕೆ ಕಾರಣ—ಕರ್ನಾಟಕ ರಾಜ್ಯ ನಿರ್ಮಾಣವಾದ ಕಾಲಕ್ಕೆ ಅದರ ಆದ್ಯ ಪ್ರವರ್ತಕನಾದ ನಾನು ಆ ಬಗ್ಗೆ ಲೇಖಗಳನ್ನು ಬರೆದು ಕಳಿಸಬೇಕೆಂದು ಮೈಸೂರ ಕಡೆಯ ಸಂಪಾದಕರಿಂದ ನನಗೆ ಪತ್ರಗಳು ಬಂದವು. ಅವುಗಳಲ್ಲಿ ನನ್ನ ರೆಗಳಿಯೇ ಬರುವದೆಂದು ಹೇಳಿ ಬರೆಯಲಿಲ್ಲ. ಅಲ್ಲದೆ, ಎಲ್ಲರಿಗೂ ಲೇಖಗಳನ್ನು ಬರೆದು ಕಳಿಸುವದು ಸಾಧ್ಯವೂ ಇದ್ದಿಲ್ಲ. ಮುಂದೆ ಪ್ರಸಂಗ ಬಂದಾಗ ಬರೆಯಲೂಬಹುದು, ಎಂದು ಕೆಲವರಿಗೆ ತಿಳಿಸಿಯೂ ಇದ್ದೆ. ಮೈಸೂರ ಸರಕಾರದಿಂದಲೂ ಬರೆದು ಕಳಿಸಲಿಕ್ಕೆ ನನಗೆ ಪತ್ರ ಬಂದಿತ್ತು. ಅವರಿಗೂ ಕಳಿಸಲಿಲ್ಲ. ನನ್ನ ಆ ಸಂಬಂಧದ ಚಟುವಟಿಕೆಗಳನ್ನು ಬರೆಯಲಿಕ್ಕೆ ಒಂದು ಗ್ರಂಥವೇ ಬೇಕಾಗುವದು, ಎಂಬ ಕಾರಣದಿಂದಲೂ ಬಿಟ್ಟಿದ್ದೆ. ಮುಂದೆ, ಹೊಸ ರಾಜ್ಯ ನಿರ್ಮಾಣದಲ್ಲಿ ನಿರತರಾಗಿರುವ ಕೆಲವು ದೊಡ್ಡ ಮನುಷ್ಯರು, ಇತ್ತೀಚಿನವರಿಗೆ ಕರ್ನಾಟಕತ್ವದ ಉಗಮ-ವಿಕಾಸಗಳ ಕಲ್ಪನೆಯು ವಿಶೇಷ ವಿಲ್ಲದಿರುವದರಿಂದಲೂ ಅದನ್ನು ತಿಳಿದುಕೊಳ್ಳುವದು ಅವಶ್ಯವಿರುವದರಿಂದಲೂ ನಾಂಸು ಅದನ್ನು ಬರೆಯಲೇಬೇಕೆಂದು ಸೂಚಿಸಿದರು. ಅದಕ್ಕಾಗಿ ಈ ಗ್ರಂಥವನ್ನು ಬರೆಯಲು ಕೈಕೊಂಡಿರುವೆ.

ಇದರಲ್ಲಿ ವಿಶೇಷತಃ ಕರ್ನಾಟಕತ್ವದ ಕಲ್ಪನೆಯ ಉಗಮ ಮತ್ತು ವಿಕಾಸಗಳು ನನ್ನಲ್ಲಿ ಹೇಗೆ ಉಂಟಾಗುತ್ತ ಹೋದವು ಎಂಬುದನ್ನಷ್ಟೇ ವಿಶೇಷವಾಗಿ ಹೇಳಿರುವೆ. ಆನುಷಂಗಿಕವಾಗಿ ನನ್ನೊಡನೆ ಕಾರ್ಯಮಾಡಿದ ಕೆಲವರ ಚಟುವಟಿಕೆಗಳೂ, ಆಗಿನ ಕಾಲಕ್ಕೆ ಕರ್ನಾಟಕತ್ವದ ಪ್ರಚಾರಕ್ಕಾಗಿ ಹುಟ್ಟಿದ ಸಂಸ್ಥೆಗಳ ಇತಿಹಾಸವೂ ಬಂದಿವೆ. ತಾತ್ವಿಕ ವಿಚಾರಗಳನ್ನು ತಿಳಿಸುವದೇ

ಮುಖ್ಯ ಉದ್ದೇಶ. ಹಿಂದಕ್ಕೆ ೧೯೪೦ರಲ್ಲಿ ಕರ್ನಾಟಕವು ನನ್ನ ೬೦ ವರ್ಷಗಳ ಜನ್ಮೋತ್ಸವವನ್ನು ಜರುಗಿಸಿದಾಗ, ಆಗಿನ ಜಯಕರ್ನಾಟಕದ ಸಂಪಾದಕರಾದ ಶ್ರೀ. ಬೆಳಗಾವಿ ರಾಮಚಂದ್ರರಾಯರ (ಈಗಿನ ವಿನೀತ ರಾಮಚಂದ್ರರಾಯರು) ಬಿನ್ನಹದ ಮೇರೆಗೆ ನನ್ನ ೬೦ ವರ್ಷಗಳ ಜೀವನಸ್ಮೃತಿಗಳನ್ನು ಎರಡು ಭಾಗ ಗಳಲ್ಲಿ ಮುದ್ರಿಸಿದೆ. ಅವುಗಳಲ್ಲಿ ಕರ್ನಾಟಕದ ೬೦ ವರ್ಷಗಳ ಸಾರ್ವಜನಿಕ ಜೀವನವೆಲ್ಲವೂ ೫ ವಿಭಾಗಗಳಲ್ಲಿ ಅಡಕವಾಗಿದೆ. (೧) ರಾಜಕೀಯ, (೨) ವಾಙ್ಮಯ, (೩) ಐತಿಹಾಸಿಕ, (೪) ಕರ್ನಾಟಕತ್ವ, (೫) ಧಾರ್ಮಿಕ. ಆದರೆ ಆ ಗ್ರಂಥಗಳು ಈಗ ಉಪಲಬ್ಧವಿಲ್ಲ. ಈಗ ಈ ಗ್ರಂಥವು ಒಂದೇ ವಿಶಿಷ್ಟ ಉದ್ದೇಶದಿಂದಲೇ ಬರೆದಿರುವದಾಗಿದೆ. ಆದರಲ್ಲಿಯೂ "ಕರ್ನಾಟಕ ಗತವೈಭವ"ವನ್ನು ಬರೆಯುವದಕ್ಕಿಂತ ಮುಂಚಿನ ಸಂಗತಿಗಳಿ ಗೇನೇ ನಾನು ಈ ಗ್ರಂಥದಲ್ಲಿ ಹೆಚ್ಚಿಗೆ ಮಹತ್ವವನ್ನು ಕೊಡುತ್ತ ಬಂದಿರುವೆನು. ಸಮಗ್ರ ಚಳವಳಿಯ ಇತಿಹಾಸವನ್ನು ಬರೆಯಲು ನನ್ನಲ್ಲಿ ಸಾಮರ್ಥ್ಯವೂ ಇಲ್ಲ; ಸಾಮಗ್ರಿಯೂ ಇಲ್ಲ. ನನ್ನ ಸ್ವಂತ ಜೀವನದಲ್ಲಿಯ ಸಂಗತಿಗಳು ಸಹ ಮರೆತು ಹೋಗಿರುತ್ತವೆ. ಈ ಗ್ರಂಥವನ್ನು ಬರೆಯುವದರಲ್ಲಿ ಕೂಡ ಎಷ್ಟೋ ಹೆಸರುಗಳನ್ನು, ಸಂಗತಿಗಳನ್ನು ಬಿಟ್ಟಿರಬಹುದು, ಆ ಬಗ್ಗೆ ನನ್ನನ್ನು ಕ್ಷಮಿಸ ಬೇಕು. ಈ ಗ್ರಂಥದಲ್ಲಿ ಜಯಕರ್ನಾಟಕ ಯುಗದ ಅಂದರೆ, ೧೯೨೨ರಿಂದ ಇತ್ತೀಚಿನ ವಿವರಗಳನ್ನೂ ಕೊಡಹೋಗಿಲ್ಲ. ಜಯಕರ್ನಾಟಕದ ಸಂಪುಟ ಗಳು ಅನೇಕ ಕಡೆಗೆ ದೊರೆಯುತ್ತವೆ. ಆ ವಿವರಗಳನ್ನು ಕೊಡಲು ಹೋದರೆ ಸಂಕಲ್ಪಕ್ಕಿಂತ ಈ ಗ್ರಂಥವು ಮಿತಿಮೀರಿ ಬೆಳೆಯುವಂತಿದೆ.

ಮೊಟ್ಟಮೊದಲು ಒಂದು ಮಾತನ್ನು ಸ್ಪಷ್ಟಪಡಿಸುವೆ. ಅದೆಂದರೆ, ಕರ್ನಾಟಕ ಚಳವಳಿಯೆಂದರೂ ನಾನೇ, ನಾನು ಎಂದರೇನೇ ಕರ್ನಾಟಕ ಚಳವಳಿ ಎಂಬುವಷ್ಟು ಅವೆರಡರಲ್ಲಿ ತಾದಾತ್ಮ್ಯವಿದೆ ಎಂದು ಜನರು ತಿಳಿದಿ ರುವರು. ಅದರಲ್ಲಿ ಸ್ವಲ್ಪಮಟ್ಟಿಗೆ ಸತ್ಯಾಂಶವಿದೆ. ಅದಕ್ಕೆ ಕಾರಣವೆಂದರೆ, ಇಡೀ ಆಯುಷ್ಯದಲ್ಲಿ ಕರ್ನಾಟಕವೊಂದನ್ನೇ ಮುಖ್ಯ ಧ್ಯೇಯವನ್ನಾಗಿಟ್ಟು ಕೊಂಡು ಅದರ ಸಿದ್ಧಿಗಾಗಿ ನನ್ನ ಅಲ್ಪ ಯೋಗ್ಯತೆಗೆ ಮತ್ತು ಶಕ್ತಿಗೆ ತಕ್ಕಂತೆ ೫೦-೬೦ ವರ್ಷ ದುಡಿದವನೂ ಕೊನೆಗೆ ಅದರ ಸಿದ್ಧಿಯನ್ನು ಕಂಡವನೂ ನಾನೊಬ್ಬನೇ. ಕನ್ನಡ ನುಡಿಗಾಗಿ ನಾನು ಬಹುಶಃ ಇಂಗ್ಲೀಷಿನಲ್ಲಿ ಪತ್ರ

ಗಳನ್ನು ಕೂಡ ಬರೆಯುವದನ್ನು ಬಿಟ್ಟಿದ್ದೆ. ಕರ್ನಾಟಕೈಕ್ಯಕ್ಕಾಗಿ ಇಡೀ ಜೀವನವನ್ನು ಮುಡುಪಾಗಿಟ್ಟುಕೊಂಡದ್ದರಿಂದ ಜನತೆ ಆ ಬಗ್ಗೆ ನನ್ನ ವಿಚಾರಗಳೇನಿದ್ದವೆಂಬುದನ್ನು ತಿಳಿದುಕೊಳ್ಳಲಿಚ್ಛಿಸುವದು ಸ್ವಾಭಾವಿಕವು. ಮತ್ತು ನನ್ನ ವಿಚಾರಗಳು ಏನಿದ್ದವೆಂಬುದನ್ನು ಹೇಳುವದು ನನ್ನ ಕರ್ತವ್ಯವೆಂದು ಭಾವಿಸುತ್ತೇನೆ. ಆದ ಕಾರಣವೇ, ಆತ್ಮಪೌರುಷದ ಆರೋಪವನ್ನು ಸ್ವೀಕರಿಸಿಯೂ ನಾನು ಈ ಗ್ರಂಥವನ್ನು ಬರೆಯಲುದ್ಯುಕ್ತನಾಗಿರುವೆ. ಈ ಗ್ರಂಥವನ್ನು ಓದಿದ ಬಳಿಕ, ಇದೇನು ಆತ್ಮಪೌರುಷದ ಕಥೆಯೋ, ಆತ್ಮದೌರ್ಬಲ್ಯದ ಕಥೆಯೋ ಎಂಬುದನ್ನು ನಿರ್ಣಯಿಸಲು ನಾನು ವಾಚಕರಿಗೆ ಬಿಟ್ಟುಕೊಡುವೆ.

ನಾನೇನು ವಿದ್ಯಾರಣ್ಯನಲ್ಲ, ಅಲೌಕಿಕ ಪುರುಷನಲ್ಲ, ವಿಲಕ್ಷಣ ಮುತ್ಸದ್ದಿಯಲ್ಲ, ಗರ್ಭಶ್ರೀಮಂತನಲ್ಲ; ಸಾದಾ ಮಧ್ಯಮ ವರ್ಗದ ಮಧ್ಯಮ ಬುದ್ಧಿಯ ಮನುಷ್ಯನು ನಾನು. ಜನರು, ನನ್ನನ್ನು ಕಾರಣಪುರುಷನೆಂದು ತಿಳಿದಿರುವದು ಪೂರ್ಣ ಸತ್ಯವಲ್ಲ. ನಿಜವಾಗಿ ಹೇಳಬೇಕಾದರೆ ನಾನು ಸಂಕಲ್ಪ ಮಾಡಿದ್ದು ಗುಡ್ಡದಷ್ಟು, ಸ್ವತಃ ನೆರವೇರಿಸಿದುದು ಸಣ್ಣ ಹರಳಿನಷ್ಟು. ಅನೇಕ ಸಂಸ್ಥೆಗಳನ್ನೇನೋ ತೆಗೆದೆ, ತೆಗೆಯಿಸಿದೆ. ಆದರೆ ಅವುಗಳಲ್ಲಿ ಒಂದನ್ನೂ ಕೂಡ ಊರ್ಜಿತ ಸ್ಥಿತಿಗೆ ತರಲು ಶಕ್ತನಾಗಲಿಲ್ಲ. ಒಂದು ರಾಷ್ಟ್ರವನ್ನು ಕಟ್ಟುವದು ಸಾಮಾನ್ಯ ಕೆಲಸವಲ್ಲ. ಆದರಲ್ಲಿಯೂ ೪೦೦ ವರ್ಷಗಳಿಂದಲೂ ಛಿನ್ನವಿಚ್ಛಿನ್ನವಾಗಿ ಲಿಕಿಲಿಕಿಯಾಗಿ ಹೋಗಿರುವ ಕರ್ನಾಟಕವನ್ನು ಅಖಂಡ ಕರ್ನಾಟಕವನ್ನಾಗಿ ಕಟ್ಟುವದು ಅತ್ಯಂತ ಬಿಕ್ಕಟ್ಟಿನ ಕೆಲಸ. ಆ ಕಾರ್ಯವನ್ನು ಯಾವನೊಬ್ಬನು, ತಾನೊಬ್ಬನೇ ಮಾಡಿದೆನೆಂದು ಹೇಳಿದರೆ ಅವನಂಥ ಮೂರ್ಖನು ಆವನೇ. ಅಂಥ ರಾಜ್ಯವನ್ನು ಕಟ್ಟುವದಕ್ಕೆ ನೂರಾರು ಮುಖಂಡರು ದುಡಿಯಲೇಬೇಕು. ಜನಸಾಮಾನ್ಯರಲ್ಲಿ ಮುಂಚೆ ಚೈತನ್ಯವನ್ನು ತುಂಬಬೇಕು. ತತ್ವಜ್ಞರೂ ದೂರದರ್ಶಿಗಳೂ ಆ ರಾಜ್ಯದ ತಳಹದಿಯ ತತ್ವಗಳ ರೂಪರೇಷೆಗಳನ್ನು ನಿಶ್ಚಯಿಸಬೇಕು. ಇತಿಹಾಸಜ್ಞರು ಅದರ ಪೂರ್ವ ವೈಭವವನ್ನು ಶೋಧಿಸಿ, ನೆನಪು ಕೊಟ್ಟು ಜನತೆಯ ರೋಮರೋಮಾಂಚಗಳಲ್ಲಿ ಅಭಿಮಾನವನ್ನೂ, ಸ್ಫೂರ್ತಿಯನ್ನೂ ತುಂಬಬೇಕು. ದಾರ್ಶನಿಕ ಕವಿಗಳು ಅದರ ಬಗ್ಗೆ ಮೈಮರೆತು ಹಾಡಬೇಕು, ಕುಣಿಯಬೇಕು, ಕುಣಿಸಬೇಕು. ಉದ್ದಾಮ ಸಾಹಿತಿಗಳು ಗ್ರಂಥಗಳಿಂದಲೂ, ಭಾಷಣಗಳಿಂದಲೂ ಅಖಂಡ ಕರ್ನಾಟಕ

ತ್ವದ ಕಲ್ಪನೆಗೆ ಮೂರ್ತಸ್ವರೂಪವನ್ನು ಕೊಡಬೇಕು; ಧನಿಕರು ಧನತ್ಯಾಗ ಮಾಡಬೇಕು; ಶ್ರಮಜೀವಿಗಳೆಲ್ಲರೂ ಶ್ರಮವನ್ನು ಸಲ್ಲಿಸಬೇಕು; ಕೀರ್ತನಕಾರರು ಹೃದಯ ಕರಗಿಸಬೇಕು. ಆದ ಕಾರಣ ಈ ಪ್ರಸಂಗದಲ್ಲಿ ಅಂಥವರೆಲ್ಲರೂ ಮುಂದೆ ಬಂದು, ಅಖಂಡ ಕರ್ನಾಟಕವನ್ನು ಕಟ್ಟುವದಕ್ಕೆ ತಮ್ಮ ತಮ್ಮ ಪರಿಯಾಗಿ ಸೇವೆಯನ್ನು ಸಲ್ಲಿಸಿದ್ದರಿಂದಲೇ ಅಖಂಡ ಕರ್ನಾಟಕ ರಾಜ್ಯವು ನಿರ್ಮಾಣವಾಯಿತು.

ನನ್ನ ಆಯುಷ್ಯದ ಮುಖ್ಯ ಧ್ಯೇಯಗಳು ಮೂರು. (೧) ಸ್ವಾತಂತ್ರ್ಯ, (೨) ಅಖಂಡ ಕರ್ನಾಟಕ, (೩) ಅಧ್ಯಾತ್ಮ ಸಾಧನೆ. ಇವುಗಳಲ್ಲಿ ಮೊದಲಿನ ಎರಡನ್ನು ಕಾಣುವ ಸುಯೋಗವು ನನ್ನ ಜೀವಮಾನದಲ್ಲಿಯೇ ಪ್ರಾಪ್ತವಾದುದು ನನ್ನ ಮೇಲಿನ ದೇವರ ಕೃಪೆಯೆನ್ನಬೇಕು. ಮೂರನೆಯ ಧ್ಯೇಯವಾದ ಅಧ್ಯಾತ್ಮ ಸಾಧನೆಯನ್ನು ಮೊದಲಿನಿಂದ ಪ್ರಾರಂಭಿಸಿದ್ದರೂ ಇತ್ತೀಚೆಗೆ ೨೦-೨೫ ವರ್ಷಗಳಿಂದ ಅದರಲ್ಲಿ ಹೆಚ್ಚಿಗೆ ತೊಡಗಿರುವೆ. ಆ ಧ್ಯೇಯವು ಪೂರ್ಣವಾಗುವದು ನನ್ನ ಒಂದು ಜನ್ಮದಲ್ಲಲ್ಲ. ಎಷ್ಟು ಜನ್ಮಗಳು ಬೇಕೋ ದೇವರಿಗೇ ಗೊತ್ತು. ಇರಲಿ, ಪ್ರಕೃತ, ಈ ಗ್ರಂಥದಲ್ಲಿ ನಾನು ಕರ್ನಾಟಕತ್ವದ ಕಲ್ಪನೆಯ ವಿಕಾಸವು ನನ್ನಲ್ಲಿ ಮುಖ್ಯತಃ ಹೇಗೆ ಆಯಿತೆಂಬದನ್ನಷ್ಟೇ ಬರೆದಿರುವೆ. ಆದರೆ ಅಷ್ಟರಿಂದ ಅದನ್ನೆಲ್ಲ ನಾನೇ ಮಾಡಿದೆನೆಂದು ಯಾರೂ ತಿಳಿಯಕೂಡದು. ಅದು ಎಂಥೆಂಥವರಿಗೂ ಶಕ್ಯವಿಲ್ಲ. ಅಂದಬಳಿಕ ನನ್ನಂಥ ಒಬ್ಬ ತೀರ ಸಾಮಾನ್ಯ ಮನುಷ್ಯನ ಪಾಡೇನು? ಆದರೂ, ದೇವರಿಗೆ ಯಾವದೊಂದು ಮಹತ್ಕಾರ್ಯವನ್ನು ಮಾಡಬೇಕೆಂದು ಮನಸ್ಸಾದಾಗ ಆತನು ಯಾವನೊಬ್ಬನನ್ನು ನಿಮಿತ್ತ ಮಾತ್ರನನ್ನಾಗಿ ಮುಂದೆ ತಂದು ನಿಲ್ಲಿಸುತ್ತಾನೆ. ಹಾಗೆ, ಆತನು ನನ್ನಂಥ ಯಃಕಶ್ಚಿತ ಮನುಷ್ಯನನ್ನು ತಂದು ನಿಲ್ಲಿಸಿದನು. ಪರಮಾತ್ಮನ ಇಚ್ಛೆಗೆ ಬಂದರೆ ಹೆಳವನೂ ಕೂಡ ಹೆಬ್ಬೆಟ್ಟವನ್ನು ಹಾರಿ ಹೋಗಬಲ್ಲನಂತೆ! ಆ ಮಾತಿಗೆ ನಾನೇ ಸಾಕ್ಷಿ. ೧೯೦೫ನೆಯ ಇಸವಿಯಲ್ಲಿ ನಾನು ಸ್ವಾತಂತ್ರ್ಯ ಚಳವಳಿಯಲ್ಲಿ ಧುಮುಕುವದಕ್ಕೂ ಅದೇ ವರ್ಷ ನನ್ನಲ್ಲಿ ಹಂಪಿ ಆನೆಗೊಂದಿಯ ದರ್ಶನಗಳಿಂದ ಕರ್ನಾಟಕತ್ವದ ಕಲ್ಪನೆ ಒಡಮೂಡುವದಕ್ಕೂ ಮೇಳುಗೂಡಿತು. ಆದ ಕಾರಣ ದೇವರು ನನ್ನನ್ನೇ ನಿಮಿತ್ತನನ್ನಾಗಿ ಮಾಡಿ ತನ್ನ ಸಂಕಲ್ಪವನ್ನು ಸಾಧಿಸಿಕೊಂಡನು ಇಷ್ಟೇ! ಇರಲಿ, ಇದು ಕೇವಲ

ಆತ್ಮಸ್ತುತಿಯೆಂದು ಕಾಣಿಸುವದು ಸಹಜವು. ಆದರೆ ಈಗ ನಾನು ವೃದ್ಧನಾಗಿರುವದರಿಂದಲೂ ಗೀತೆಯಲ್ಲಿ ಕೃಷ್ಣನು ಹೇಳಿದಂತೆ— "ನಾನವಾಪ್ತವ್ಯಂ ಅವಾಪ್ತವ್ಯಂ" ಎಂಬಂತೆ ನನ್ನ ಈಗಿನ ಸ್ಥಿತಿಯಿದೆ. ನನಗೆ ಇನ್ನು ಹೊಸದಾಗಿ ಗಳಿಸಬೇಕಾದುದೇನೂ ಇಲ್ಲ. ನನ್ನ ಮೇಲಿನ ಪ್ರೇಮಾದರಗಳ ಮೂಲಕ ಕರ್ನಾಟಕ ಜನತೆ ಈಗಾಗಲೆ ನನ್ನ ಯೋಗ್ಯತೆ ಮೀರಿ ನನ್ನನ್ನು ಸಂಬೋಧಿಸಹತ್ತಿದೆ! ಅದಕ್ಕಿಂತ ಹೆಚ್ಚಿಗೆ ಏನು ಬೇಕು? ಹೆಚ್ಚಿಗೆ ಯಾರು ಏನು ಕೊಡಬಲ್ಲರು! ಆದ ಕಾರಣ ನಾನು ಆತ್ಮಸ್ತುತಿ ಮಾಡಿಕೊಂಡರೂ ನನ್ನ ಮೇಲೆ ಯಾರೂ ಉದ್ದೇಶವನ್ನು ಆರೋಪಿಸಲಾರರು. ನಿಜವಾಗಿ, ಮೊದಲಿನಿಂದಲೂ ನನ್ನ ಗೆಲವುಗಳಿಗಿಂತ ನನ್ನ ಸೋಲುಗಳ ಅರಿವೇ ನನಗೆ ಹೆಚ್ಚಿಗೆಯಿದೆ. ಆದರೆ ಒಂದು ವಿಶ್ವಾಸ ಮಾತ್ರ ನನ್ನಲ್ಲಿ ಇತ್ತು. ಅದೆಂದರೆ, ಕೊನೆಗೆ ನನ್ನ ದೃಢ ಸಂಕಲ್ಪ ಈಡೇರಿಯೇ ಈಡೇರುವದೆಂದು. ಫ್ರೀ ಪ್ರೆಸ್ ಜರ್ನಲ್ ಮುಂಬಯಿ ಇದರ ಸಂಪಾದಕರಿಗೆ ನಾನು ೭–೫–೧೯೫೨ನೆಯ ಇಸವಿ ದಿವಸ ಬರೆದ ಪತ್ರದಲ್ಲಿ ಹೀಗೆಂದು ಬರೆದಿರುವೆ.

"I believe my defeats will conquer in the long run. My work was, always, rather in the kitchen room, than in the drawing room; now it is in my study room and prayer room."

ನನ್ನ ಸ್ವಭಾವ ಗಂಭೀರ, ಸಾಹಿತ್ಯವೂ ಗಂಭೀರ. ನಾನೇ ಬರೆದ ಅಥವಾ ಬರೆಯಿಸಿದ ಲಘುಪುಸ್ತಕ ಮಾಲೆ, ಮಧ್ಯಮಪುಸ್ತಕ ಮಾಲೆ ಮತ್ತು ಪ್ರೌಢಗ್ರಂಥಮಾಲೆಗಳೆಲ್ಲವೂ ನಿಂತುಹೋಗಿವೆ. ವಿದ್ಯಾರಣ್ಯಚರಿತೆ, ಸ್ವರಾಜ್ಯದ ಹೊತ್ತಿಗೆಗಳೂ ಬರೆಯಿಸಿದ ವಿದ್ಯಾರಣ್ಯ ಕೀರ್ತನ, ಶ್ರೀಕೃಷ್ಣದಾನಾಮೃತ ಕೀರ್ತನ ಮತ್ತು ಕಪಿಧ್ವಜ ನಾಟಕ ಇವಿಷ್ಟೇ ಮುದ್ರಿತವಾದವು. ಮಧ್ಯಮ ಪುಸ್ತಕ ಮಾಲೆಯಲ್ಲಿ ಬರೆದ ಗತವೈಭವ, ವೀರರತ್ನಗಳು, ನನ್ನ ಜೀವನಸ್ಮೃತಿಗಳು, ಬರೆಯಿಸಿದ ದಾನಧರ್ಮ ಪದ್ಧತಿ ಇವೂ ಮುಂದುವರಿದಿಲ್ಲ. ಪ್ರೌಢಗ್ರಂಥ ಮಾಲೆಯಲ್ಲಿ ಬರೆದ ಶಿಕ್ಷಣ ಮೀಮಾಂಸೆ, ಬರೆಯಿಸಿದ ಸಂಸಾರಸುಖ, ಇವು ಇಷ್ಟಕ್ಕೇ ಮುಕ್ತಾಯಗೊಂಡವು. "ಸುಖವೂ ಶಾಂತಿಯೂ" ಎಂಬ ನನ್ನ ಪುಸ್ತಕದ ಅಲ್ಪಭಾಗ ಮಾತ್ರ ಮುದ್ರಿತವಾಗಿದೆ. ನಾನು ಬರೆದ 'ಮಿಲ್ಲ'

ಇವರ ಸ್ವಾತಂತ್ರ್ಯದ ಹಸ್ತಲಿಖಿತ ಪ್ರತಿ "ಸಂಘ"ದಲ್ಲಿ ಉಳಿಯಿತು.
ಹಾಗೆಯೇ, ಅಧ್ಯಾತ್ಮ ಮಾಲೆಯಲ್ಲಿಯ ಗೀತಾ ಕುಸುಮಮಂಜರಿಯ ೫ ಗ್ರಂಥ
ಗಳೂ, ಮಾಧ್ವಗ್ರಂಥಗಳೂ, ವೇದವ್ಯಾಸಗ್ರಂಥವೂ ಮುಂದುವರಿಯಬೇಕಾ
ಗಿದೆ. ನವಜೀವನ ಗ್ರಂಥಭಾಂಡಾರದಲ್ಲಿ ಕನಿಷ್ಠ ೩೦ ಗ್ರಂಥಗಳನ್ನು ಪ್ರಸಿದ್ಧಿಸ
ಬೇಕೆಂದು ಸಂಕಲ್ಪ ಮಾಡಿ, ಗ್ರಂಥಕರ್ತರ ಹೆಸರುಗಳನ್ನೂ ಗ್ರಂಥಗಳ ಹೆಸರು
ಗಳ ಪಟ್ಟಿಯನ್ನೂ ಪ್ರಕಟಿಸಿದೆ. ಆರೇ ಗ್ರಂಥಗಳನ್ನು ಮುದ್ರಿಸಿದೆ. ಅಷ್ಟ
ರಲ್ಲಿ, ಸೆರೆಹಿಡಿಯಲ್ಪಟ್ಟ ಕಾರಣ ಅದೂ ಅಲ್ಲಿಗೇ ಉಳಿಯಿತು. ಒಟ್ಟಿಗೆ ನನ್ನ
ದೆಲ್ಲವೂ ಅರಗಚ್ಚಿ (ಅರ್ಧಕಚ್ಚಿದ) ಕೆಲಸ. ಆದರೆ, ಆ ಅರ್ಧಕಚ್ಚಿದ ಕಸುಕು
ಬೋರೇ ಹಣ್ಣುಗಳನ್ನೇ ನಾನು ಭಕ್ತಿಭಾವದಿಂದ ನನ್ನ ಅಂತರ್ಯಾಮಿಯಾದ
ಶ್ರೀ ರಾಮುನಿಗೆ ಸಮರ್ಪಿಸುವೆ "ಫಲಂ ವಾ ಮೂಲಂ ವಾ" ಎಂಬಂತೆ. ನನ್ನ
ವೆಲ್ಲವೂ ಕನ್ನಡಿಗರಿಗೆ ಪರಾಧೀನಗಳಲ್ಲ. ಅವುಗಳ ಮುದ್ರಣದ ಹಕ್ಕನ್ನು ಬೇಡಿ
ದವರಿಗೆ ಕೊಟ್ಟುಬಿಡುವೆ, ಕೆಲವುಗಳನ್ನು ಕೊಟ್ಟುಬಿಟ್ಟಿರುವೆ.

ಇರಲಿ. "ನಾಹಂ ಕರ್ತಾ ಹರಿಃ ಕರ್ತಾ ತತ್ಪೂಜಾ ಕರ್ಮ ಚಾಖಿಲಂ"
"ಸಕಲವೆಲ್ಲವೂ ಹರಿಸೇವೆಯೆನ್ನಿ" "ಮಾಡುವವ ನಾನಲ್ಲಯ್ಯ" ಎಂಬು
ದನ್ನು ಸ್ಮರಿಸುತ್ತ ಕಾರ್ಯ ಮಾಡುತ್ತ ಬಂದಿರುವೆ. ನಾನು ಎಷ್ಟು ಮಾಡಿ
ರುವೆನೆಂಬುದು ಜನತೆಗೆ ಗೊತ್ತೇ ಅದೆ. ಏನೂ ಮಾಡಿಲ್ಲ ಎಂಬುದು ಮಾತ್ರ
ನನಗೆ ಗೊತ್ತಿದೆ. ನಾನು ಈ ಶುಭ ಪ್ರಸಂಗದಲ್ಲಿ ಕೇವಲ ನನ್ನ ಆಯುಷ್ಯದ
ರಗಳೆಯನ್ನೇ ಹೇಳಿದ್ದರೂ ಕರ್ನಾಟಕಸ್ಥರಿಗೆ ಪದೆಪದೆ ನನ್ನ ಸಂದೇಶವನ್ನು
ಕೊಡುತ್ತ ಬಂದಿರುವದನ್ನೇ ಈಗಲೂ ಕೊಡುತ್ತೇನೆ. ಅದೆಂದರೆ, "**ನನ್ನನ್ನು
ಪೂರಾ ಮರೆಯಿರಿ, ಕರ್ನಾಟಕವನ್ನು ಸದಾ ಸ್ಮರಿಸಿರಿ**" ಎಂದು. ಆದರೆ,
ಈಗ ಗತವೈಭವವನ್ನು ಕೂಡ ಕೇವಲ ಸ್ಮರಿಸಿಬಿಟ್ಟು, ಭಾವೀ ವೈಭವವನ್ನು
ಪಡೆಯುವದಕ್ಕೆ ಉದ್ಯುಕ್ತರಾಗಬೇಕೆಂದು ಬೇಡಿಕೊಳ್ಳುತ್ತೇನೆ. ಈ ಗ್ರಂಥ ಬರೆದು
ದರ ಮುಖ್ಯ ಉದ್ದೇಶ, ಕರ್ನಾಟಕತ್ವದ ಸಂಪೂರ್ಣ ಕಲ್ಪನೆಯನ್ನು ಈಗಿನ ಪೀಳಿಗೆ
ಯವರಿಗೆ ಮಾಡಿಕೊಡುವುದೇ ಆಗಿದೆ. ಇದಕ್ಕೆ "ಕರ್ನಾಟಕತ್ವದ ಮೀಮಾಂಸೆ"
ಯೆಂದೇ ಹೆಸರಿಡಬೇಕೆಂದು ಮಾಡಿದ್ದೆ. ಆದರೆ, ಅದು ಬಿಗಿ ಹೆಸರು ಆಗ
ಬಹುದೆಂದು ತಿಳಿದು "ಕರ್ನಾಟಕತ್ವದ ವಿಕಾಸ" ಇಷ್ಟೇ ಇಟ್ಟಿರುವೆ. ಕರ್ನಾ
ಟಕ ಗತವೈಭವವು ಅಖಂಡ ಕರ್ನಾಟಕಕ್ಕೆ ತಳಹದಿಯಾದಂತೆ, ಇದು ಭಾವೀ

ವೈಭವಕ್ಕೆ ತಳಹದಿಯಾಗಬಹುದೆಂದು ಆಶೆ. ಭಾವೀ ವೈಭವವನ್ನು ಪಡೆಯು ವುದು ಹತ್ತು ಪಟ್ಟು, ನೂರು ಪಟ್ಟು ಹೆಚ್ಚಿನ ಕಾರ್ಯ. ಕಟ್ಟುವದಕ್ಕಿಂತ ಕಾಪಾಡುವುದು ಕಠಿಣ ಕೆಲಸ; ಭವ್ಯವಾದ ವೈಭವವನ್ನು ಪಡೆಯುವುದು ಅದ ಕ್ಕಿಂತ ಕಠಿಣ ಕೆಲಸ. ಕರ್ನಾಟಕದ ಭಾವೀ ವೈಭವ ಕಟ್ಟುವುದೆಂದರೆ ಹಂಪೀ ವಿರೂಪಾಕ್ಷ ದೇವಾಲಯದ ಗೋಪುರ ಕಟ್ಟಿದಂತೆ! ಆ ಗೋಪುರ, ಅನೇಕ ಸಲ, ಬಿದ್ದು ಬಿದ್ದು ಹೋಗಹತ್ತಿತಂತೆ! ಕೊನೆಗೆ ಒಬ್ಬ ಹೆಣ್ಣು ಮಗಳು, ತನ್ನನ್ನು ಬಲಿ ಕೊಟ್ಟುಕೊಂಡಾಗ ಮಾತ್ರ ನಿಂತಿತಂತೆ! ಅದರ ಮರ್ಮವೇನೆಂದರೆ, ಜನತೆ ಸಂಪೂರ್ಣ ತ್ಯಾಗಕ್ಕೆ ಸಿದ್ಧವಾದಾಗಲೇ ಅದು ಸಾಧ್ಯ. ಹಾಗೆ, ಕರ್ನಾಟಕದ ಭಾವೀ ವೈಭವದ ಗೋಪುರವು ಕಟ್ಟಲ್ಪಟ್ಟು, ಅದು ಮಿಕ್ಕವರಿಗೆಲ್ಲರಿಗೂ, ನಮ್ಮ ಸಂಸ್ಕೃತಿಯ ದಿವ್ಯ ದೀಪಸ್ತಂಭ ವಾಗಲಿ.

ಈ ಸಂದರ್ಭದಲ್ಲಿ, ಭಾರತದ ಸುಪ್ರಸಿದ್ಧ ಇಂಗ್ಲಿಷ ಲೇಖಕಿಯರಾದ ಕುಂ|| ಸೌ|| ಶಾಂತಾ ರಂಗಾಚಾರ, ಎಂ.ಎ. ಇವರನ್ನು ವಿಶೇಷವಾಗಿ ಸ್ಮರಿಸು ವದು ಅಗತ್ಯ. ಅವರು ಕನ್ನಡಿಗರಲ್ಲದಿದ್ದರೂ ಕರ್ನಾಟಕತ್ವದ ಕಲ್ಪನೆ ಮುಂಚೆ ಇಲ್ಲದಿದ್ದರೂ ನನ್ನಿಂದ ಕೆಲಮಟ್ಟಿಗೆ ತಿಳಕೊಂಡು, ಅನ್ಯರಿಂದ ಓದಿಸಿಕೊಂಡು, ನನ್ನ ಜೀವನದ ಕರ್ನಾಟಕತ್ವದ ಮತ್ತು ನಿಜವಾದ ಮಹತ್ವವನ್ನೂ, ಮರ್ಮವನ್ನೂ ಆಕಲನ ಮಾಡಿಕೊಂಡು, ಕನ್ನಡಿಗರಿಗಿಂತ ಹೆಚ್ಚಾಗಿ ನನ್ನ ಜೀವನದ ರಹ ಸ್ಯದ ಬಗ್ಗೆ ಇಂಗ್ಲಿಷಿನಲ್ಲಿ ಸುಂದರವಾದ ಲೇಖ ಬರೆದು, ಅದನ್ನು ಕರ್ನಾಟಕ ರಾಜ್ಯ ನಿರ್ಮಾಣದ ದಿನವೇ ಬೆಂಗಳೂರಿನ "Daily Herald" ಪತ್ರಿಕೆ ಯಲ್ಲಿ ಪ್ರಸಿದ್ಧಿಸಿರುವರು. ಕರ್ನಾಟಕತ್ವದ ರಹಸ್ಯವನ್ನು ಅರಿಯುವುದಕ್ಕೆ ಅದು ಸಹಾಯವಾಗಬಹುದೆಂದು ತಿಳಿದು ಅದನ್ನೂ, ಹಿಂದಕ್ಕೆ ಮುಂಬಯಿ ಫ್ರೀ ಪ್ರೆಸ್ ಜರ್ನಲಿನಲ್ಲಿ ನನ್ನ ಬಗ್ಗೆ ಪ್ರಸಿದ್ಧವಾದ ಶ್ರೀ. ಶ್ರೀಧರ ತೇಲಕರ ಇವರ ಲೇಖವನ್ನೂ ಮತ್ತೆ ಕೆಲವನ್ನೂ ಅನುಬಂಧಗಳಲ್ಲಿ ಮುದ್ರಿಸಿರುವೆ.

ಇದೇ ಕಾಲಕ್ಕೆ ಮತ್ತೂ ಒಬ್ಬ ಮಹಾವ್ಯಕ್ತಿಯನ್ನು ಸ್ಮರಿಸುವುದು ಅವಶ್ಯ. ಶ್ರೀ. ನಿಜಲಿಂಗಪ್ಪನವರು ನನಗೆ ವಿಶೇಷ ಪರಿಚಯಸ್ಥರಲ್ಲದಿದ್ದರೂ (ಅವರನ್ನು ಒಂದೇ ಸಲ, ಆಕಸ್ಮಿಕವಾಗಿ ಉಗೆ ಬಂಡೆಯಲ್ಲಿ ಕುಳಿತಾಗ ಕಂಡದ್ದು.) ನನ್ನ ಬಗ್ಗೆ, ಅನೇಕ ಕಡೆಗೆ, ಆದರಯುಕ್ತ ಉದ್ಗಾರಗಳನ್ನು ತೆಗೆ

ದಿರುವರೆಂದು ಕೇಳಿದೆ. ಮೊನ್ನೆ ಮೊನ್ನಿನ ಸಾಹಿತ್ಯ ಸಮ್ಮೇಲನದಲ್ಲಂತೂ, ಅವರು ನನ್ನನ್ನು ಅತ್ಯಂತ ಗೌರವಯುಕ್ತವಾಗಿ ನಮಸ್ಕರಿಸಿಯೇ ತಮ್ಮ ಉದ್ಘಾಟನ ಭಾಷಣ ಮಾಡಿದರು! ಅದಕ್ಕಾಗಿ ನಾನು ಅವರಿಗೆ ವಿಶೇಷ ಕೃತಜ್ಞನು. ಹಾಗೆ ಮಾಡಿದುದು, ಅರ್ಥಾತ್, ನನ್ನ ಯೋಗ್ಯತೆಯ ನಿದರ್ಶನಕ್ಕಿಂತಲೂ ಅವರ ಸೌಜನ್ಯ ಸ್ವಭಾವದ ಮತ್ತು ದೊಡ್ಡಸ್ತಿಕೆಯ ದ್ಯೋತಕ!

ಇರಲಿ, ಈ ಸುದಾಮಃಭಕ್ತನು, ತಾನೇ ನೇಗಿಲ ಹೊಡೆದು, ಹರಗಿ ಬಿತ್ತಿ, ಬೆಳೆಸಿದ ಈ ಹಿಡಿ, ವಿವಿಧ ಕಾಳುಗಳಿಂದ, ಕರ್ನಾಟಕದೇವಿಯ ಉಡೀ ತುಂಬುತ್ತೇನೆ. ಕರ್ನಾಟಕದ ಭಾವೀ ಕಾರ್ಯಕರ್ತರು, ಅವಳಿಂದ ಆ ಬೀಜಕಾಳುಗಳನ್ನು ಪ್ರಸಾದವಾಗಿ ಸ್ವೀಕರಿಸಿ, ರಾಜಕಾರಣ, ಸಾಹಿತ್ಯ, ಕಲೆ, ವ್ಯಾಪಾರ ಮುಂತಾದ ವಿವಿಧ ಕ್ಷೇತ್ರಗಳಲ್ಲಿ ಅವನ್ನು ಬಿತ್ತಿ, ಬೆಳೆ ತಕ್ಕೊಂಡು, ಭಾವೀ ಕರ್ನಾಟಕವೈಭವದ ಕಣಜವನ್ನು ತುಂಬಬೇಕೆಂಬುದೇ ಈ ದರಿದ್ರ ಭಕ್ತನ ಹಾರೈಕೆ.

ಕೊನೆಯದಾದರೂ ಕಡಿಮೆಯಲ್ಲದ ಕೆಲಸವೆಂದರೆ ಆಭಾರಮನ್ನಣೆ. ಈ ಗ್ರಂಥವನ್ನು ಬರೆಯಲೇಬೇಕೆಂದು ಪ್ರತ್ಯಕ್ಷವಾಗಿಯೂ ಅಪ್ರತ್ಯಕ್ಷವಾಗಿಯೂ ಪ್ರೋತ್ಸಾಹಿಸಿದವರನ್ನು ಸ್ಮರಿಸುವೆ. ಮುದ್ರಣ ವೆಚ್ಚದ ಭಾರಹೊತ್ತಿರುವ ವ್ಯಕ್ತಿಯನ್ನು ನೆನೆಯುವೆ. ಹಸ್ತಪ್ರತಿಯನ್ನು ತಯಾರಿಸಿ ಕೊಟ್ಟ ಶ್ರೀ. ಗುಡ್ಡೋಜೀವಾಜಿ ಕುಲಕರ್ಣಿ ಇವರನ್ನೂ ಈ ಪುಸ್ತಕವನ್ನು ಅಂದವಾಗಿ ಮುದ್ರಿಸಿ ಕೊಟ್ಟ ಶ್ರೀ. ಭಾಲಚಂದ್ರ ಘಾಣೇಕರರನ್ನೂ, ಕಡಪಾ ಮತ್ತು ಮುದವೇಡೆಕರರ ಬ್ಲಾಕು ಕೊಟ್ಟ 'ಸಂಯುಕ್ತ ಕರ್ನಾಟಕ' ಸಂಪಾದಕರನ್ನೂ ಸ್ಮರಿಸುವೆ. ಅಲ್ಲದೆ, ಮೈಸೂರಿನ ಸುಪ್ರಸಿದ್ಧ ಕಲಾವಿದರಾದ ಶ್ರೀ. ಎಸ್. ಎನ್. ಸ್ವಾಮಿ ಇವರು ಕೇವಲ ನನ್ನ ಮೇಲಿನ ಅಭಿಮಾನದಿಂದ ತಯಾರಿಸಿ ಕೊಟ್ಟ ಸುಂದರವಾದ ಎರಡು ಚಿತ್ರಗಳಿಗಾಗಿ ಅವರಿಗೆ ಕೃತಜ್ಞನು.

ಗೀತಾಭವನ, ಸಾಧನಕೇರಿ
ಧಾರವಾಡ
೨-೭-೧೯೫೭
(ಆಷಾಢ ಶು॥ ಪಂಚಮಿ)

ಆಲೂರ ವೆಂಕಟರಾಯ

# ಕರ್ನಾಟಕ ಕುಲಪುರೋಹಿತ ಶ್ರೀ. ಆಲೂರ ವೆಂಕಟರಾಯರ ಸಂದೇಶ

( ೧—೧೧—೫೬ ರಾಜ್ಯನಿರ್ಮಾಣ ದಿನ )

—" ಈಗ ಮೈಸೂರ ರಾಜ್ಯ"ವೆಂದು ತಪ್ಪಾಗಿ ಹೆಸರಿಡಲ್ಪಟ್ಟ "ಕರ್ನಾಟಕ ರಾಜ್ಯವು " ಆಯುಷ್ಮಂತವಾಗಲಿ, ಆರೋಗ್ಯವಂತವಾಗಲಿ ಮತ್ತು ಭಾಗ್ಯವಂತವಾಗಲಿ ಎಂದು ಹಿರಿಯನಾದ ನಾನು ಹರಸುತ್ತೇನೆ.

—ಈ ರಾಜ್ಯವನ್ನು ಜನತೆ ಯಾವಾಗಲೂ ತನಗೆ ಅನೇಕ ವರುಷಗಳಿಂದಲೂ ಅತ್ಯಂತ ಪ್ರಿಯವಾಗಿರುವ ' ಕರ್ನಾಟಕ 'ವೆಂಬ ರೂಢನಾಮದಿಂದಲೇ ಕರೆಯುವದು; ಕರೆಯಬೇಕು ಎಂಬುದನ್ನು ಯಾರೂ ಮರೆಯದಿರಲಿ ಮತ್ತು ನಾಡನುಡಿಗಳೆರಡೂ ದೃಷ್ಟಿಯಿಂದ ಯೋಗ್ಯವಾದ ಕರ್ನಾಟಕವೆಂಬ ಹೆಸರನ್ನು ಪುನಃ ಇಡಲಿಕ್ಕೆ ಎಲ್ಲರಿಗೂ ದೇವರು ಬುದ್ಧಿಯನ್ನು ಕೊಡಲಿ, ಮತ್ತು ಅನ್ಯಾಯದಿಂದ ಕಳೆದುಕೊಂಡ ಪ್ರದೇಶಗಳನ್ನು ತೀವ್ರ ಪಡೆಯಲಿ.

—ನಿಜವಾಗಿ ಹೇಳುವದಾದಲ್ಲಿ—

ಸರ್ವ ದೇಶವು ಪುಣ್ಯ ದೇಶವು ।
ಸರ್ವ ಕಾಲವು ಪರ್ವಕಾಲವು ।
ಸರ್ವ ಜೀವರು ದಾನಪಾತ್ರರು ಮೂರು ಲೋಕದೊಳು ॥
........ವಿಮಲಮೂರ್ತಿ ಧ್ಯಾನವುಳ್ಳವಗೆ ॥

ಆವ ಕುಲದವನಾದೊಡೇನಿ- ।
ನ್ನಾವ ದೇಶದೊಳಿರ್ದಡೇನಿ- ।
ನ್ನಾವ ಕರ್ಮವ ಮಾಡಲೇನಿನ್ನಾವ ಕಾಲದಲಿ ॥

ಶ್ರೀವರನ ಸರ್ವತ್ರದಲಿ ಸಂ- ।
ಭಾವಿಸುತ ಪೂಜಿಸುತ ಮೋದಿಪ ।
ಕೋವಿದರಿಗುಂಟೇನೊ ಭಯ-ದುಃಖಾದಿ ದೋಷಗಳು ॥

—ಇಂಥ ವ್ಯಾಪ್ತ್ಯೋಪಾಸಕತ್ವವನ್ನು ಸಂಪಾದಿಸುವದೇ ಸಾಧಕನ ಕೊನೆಯ ಧ್ಯೇಯ. ವ್ಯಕ್ತಿ, ಸಮಾಜ, ಜನಾಂಗ, ರಾಷ್ಟ್ರ, ಜಾತಿ, ಮತ, ಪಂಥ, ಪಕ್ಷ ಇವೇ ಮುಂತಾದವುಗಳೆಲ್ಲ ಸರ್ವಭೂತಹಿತದ ತತ್ವಕ್ಕೆ ಸಾಧನ ಮಾತ್ರಗಳು. ಋಷಿಗಳು ಧ್ಯೇಯದರ್ಶಕರು. ಸರಕಾರವು— ಅದು ಪ್ರಜಾಪ್ರಭುತ್ವ ರಾಜ್ಯವೆ ಇರಲಿ ಇಲ್ಲವೆ ಯಾವದೇ ಇರಲಿ— ಅದು ಧ್ಯೇಯರಕ್ಷಕವು.

—ಭಾರತೀದೇವಿಯು ಭುವನೇಶ್ವರಿಯ ಪ್ರತಿಮೆ. ಕರ್ನಾಟಕದೇವಿಯು

ಭಾರತಾಂಬೆಯ ಪ್ರತಿಮೆ. ಭಾರತೀದೇವಿ ವಿಶಿಷ್ಟ ದೇವತೆ; ಕರ್ನಾಟಕದೇವಿ ಇಷ್ಟ ದೇವತೆ. ಆದ ಕಾರಣ, ರಾಸಕ್ರೀಡೆಯಲ್ಲಿ ಗೋಪಿಕಾ ಸ್ತ್ರೀಯರು ಕೋಲಾಟವಾಡುವಾಗ ಹೇಗೆ ಒಬ್ಬನೇ ಕೃಷ್ಣನನ್ನು ತಮ್ಮ ತಮ್ಮ ಹತ್ತಿರವೇ ಕಾಣುತ್ತಿದ್ದರೋ ಹಾಗೆ ರಾಷ್ಟ್ರೀಯತ್ವವನ್ನು ಹೊಸ ರಾಜ್ಯಗಳು ಸದಾ ತಮ್ಮ ಹತ್ತಿರವೇ ಕಾಣುತ್ತಿರಬೇಕು.

—ಸರ್ವತಂತ್ರತ್ವವು ಭಾರತಕ್ಕೇನೇ. ದತ್ತಸ್ವಾತಂತ್ರ್ಯವು ಅಂದರೆ ತದಧೀನ ತಂತ್ರವು ಮಾತ್ರವೇ ರಾಜ್ಯಗಳಿಗೆ. ಆದಕಾರಣ ಭಾರತಾಂಬೆಯ ಕಲ್ಯಾಣದಲ್ಲಿ ಕನ್ನಡ ನಾಡಿನ ಕಲ್ಯಾಣವು ಅಂತರ್ಗತವಾಗಿದೆಂಬದನ್ನು ಕನ್ನಡಿಗರು ಮರೆಯದಿರಲಿ.

—"ಕರ್ನಾಟಕ"ವೆಂಬುದೊಂದು ಶಬ್ದದಲ್ಲಿ ಎಂಥ ಮಾಂತ್ರಿಕ ಶಕ್ತಿ ತುಂಬಿರುತ್ತದೆಂಬುದು, ಆದೊಂದೇ ಶಬ್ದವು ಇಡೀ ಕನ್ನಡ ನಾಡನ್ನು ಹೊಡೆದೆಬ್ಬಿಸಿದೆಂಬುದರಿಂದ ಗೊತ್ತಾಗುತ್ತದೆ.

—ಕನ್ನಡ ನಾಡಿನ ಸರ್ವತೋಮುಖವಾದ ಅಭ್ಯುದಯಕ್ಕೆ ನಾವು ಕನ್ನಡಿಗರೆಲ್ಲರೂ ಒಂದಾಗಿ ದುಡಿಯೋಣ. ಕನ್ನಡಮ್ಮನ ಪವಿತ್ರ ಸೇವೆಯಿಂದ ಪುನೀತರಾಗೋಣ.

—ಹೊಸ ರಾಜ್ಯವು ಕೇವಲ ಅರ್ಥ ಕಾಮಗಳೆಂಬ ಎರಡೇ ಪುರುಷಾರ್ಥಗಳಿಗಾಗಿ ಹೆಣಗದೆ ಚತುರ್ವಿಧ ಪುರುಷಾರ್ಥಗಳನ್ನೂ ಪ್ರಜೆಗಳು ಪಡೆಯುವದಕ್ಕೆ ಸಾಧನವಾಗಲಿ.

—ನಮ್ಮ ನಾಡಿನಲ್ಲಿ ಧರ್ಮದ್ವೇಷಕ್ಕೆ ಜಾತಿದ್ವೇಷಕ್ಕೆ ಇಲ್ಲವೆ ಪಕ್ಷದ್ವೇಷಕ್ಕೆ ಇಂಬಿಲ್ಲ. ಅವುಗಳಿಗೆ ಯತ್ಕಿಂಚಿತ್ತಾದರೂ ಸ್ಥಾನ ಕೊಡುವವನು ನಾಡದ್ರೋಹಿ; ರಾಷ್ಟ್ರದ್ರೋಹಿ.

—ರಾಜ್ಯವು ಸುಪ್ರಜಾ ರಾಜ್ಯವೆನಿಸುವದಕ್ಕೆ ಬಹುಸಂಖ್ಯಾಕರ ತುಷ್ಟಿಪುಷ್ಟಿಗಳಿಗಿಂತಲೂ ಅಲ್ಪಸಂಖ್ಯಾಕರ ತುಷ್ಟಿಪುಷ್ಟಿಗಳೇ ಹೆಚ್ಚಿನ ಮಾಪಕಗಳು.

ಶ್ರೀ ವಿದ್ಯಾರಣ್ಯರು ವಿಜಯನಗರ ಸಾಮ್ರಾಜ್ಯವನ್ನು ಕಟ್ಟಿ ಅದು ಪತನವಾದ ನಂತರ ಅಂದರೆ, ಸುಮಾರು ೪೦೦ ವರ್ಷಗಳ ನಂತರ ಇದೀಗ ಪ್ರಥಮತಃ ಕರ್ನಾಟಕ ರಾಜ್ಯವು ಪುನಃ ಕಟ್ಟಲ್ಪಟ್ಟಿರುತ್ತದೆಂಬುದರ ಅರಿವು ಇರಲಿ.

—ಈ ಹೊಸ ರಾಜ್ಯವು ಹಿಂದಿನ ಮೈಸೂರ ರಾಜ್ಯದಂತೆ ಭರತಖಂಡದಲ್ಲಿಯೇ ಮಾದರಿ ರಾಜ್ಯವಾಗಲಿ. "

# ಅನುಕ್ರಮಣಿಕೆ





# ಅನುಬಂಧಗಳು

ಈ ಗ್ರಂಥಕ್ಕೆ ಐದು ಅನುಬಂಧಗಳನ್ನು ಜೋಡಿಸಿರುವೆ. ಅವೂ ಕರ್ನಾಟಕತ್ವದ ಮರ್ಮವನ್ನು ತಿಳಿಸುವದಕ್ಕೆ ಅತ್ಯಂತ ಉಪಯುಕ್ತವಾದವುಗಳು. ೧ನೆಯದರಲ್ಲಿ ನಾನು ಹಿಂದಕ್ಕೆ ರಚಿಸಿದ ಕರ್ನಾಟಕತ್ವದ ಸೂತ್ರಗಳು ಬಂದಿವೆ. ೨ನೆಯದರಲ್ಲಿ ಹಿಂದಕ್ಕೆ ಫ್ರೀ ಪ್ರೆಸ್ ಜರ್ನಲಿನಲ್ಲಿ ಶ್ರೀ. ತೇಲಕರ ಇವರು ನನ್ನ ಬಗ್ಗೆ ಪ್ರಸಿದ್ಧಿಸಿದ ಲೇಖ ಬಂದಿದೆ. ಇದರಲ್ಲಿ ಅವರು ನನಗೆ ಕೇಳಿದ ಪ್ರಶ್ನೆಗಳೂ, ನಾನು ಆಗ ಕೊಟ್ಟ ಉತ್ತರಗಳೂ ಬಹಳ ಮಹತ್ವದವುಗಳಾಗಿವೆ. ೩ನೆಯದರಲ್ಲಿ ನಾನು ಸ್ಟೇಟ ರಿ-ಆರ್ಗನಿಝೇಶನ ಕಮೀಟಿಗೆ ಕೊಟ್ಟ ಮನವಿ ಬಂದಿದೆ. ನಾನು ಮುಂಚೆ ನನ್ನ ಮನವಿ ಕೊಟ್ಟಿರಲಿಲ್ಲ. ಆದರೆ ೧೯-೬-೧೯೫೪ನೆಯ ದಿನ ಸಾಯಂಕಾಲಕ್ಕೆ ಶ್ರೀ. ನಿಜಲಿಂಗಪ್ಪನವರಿಂದ ಕಮಿಶನದವರು ನಿಮ್ಮ ಸಾಕ್ಷಿ ತಕ್ಕೊಳ್ಳಲು ಬಯಸುತ್ತಾರೆ. ಆದ ಕಾರಣ ಮರುದಿನವೇ ಹೋಗಿ ಸಾಕ್ಷಿ ಕೊಡಬೇಕು ಎಂದು ತಂತಿ ಬಂದ ಪ್ರಕಾರ, ಅದೇ ರಾತ್ರಿ, ಅವಸರದಿಂದ ತಯಾರಿಸಿ ಕೊಟ್ಟ ನನ್ನ ಮನವಿ ಇದೆ. ೪ನೆಯದರಲ್ಲಿ ಶ್ರೀ ಕುಂ. ಸೌ. ಶಾಂತಾ ರಂಗಾಚಾರ, ಎಂ.ಎ. ಇವರು ನನ್ನ ಬಗ್ಗೆ ಕರ್ನಾಟಕ ರಾಜ್ಯ ನಿರ್ಮಾಣದ ದಿನವೇ ಬೆಂಗಳೂರಿನ ಡೆಕ್ಕನ್ ಹೆರಾಲ್ಡ ಪತ್ರಿಕೆಯಲ್ಲಿ ಮುದ್ರಿಸಿದ ಲೇಖ ಬಂದಿದೆ. ಅದು ನನ್ನ ವ್ಯಕ್ತಿವಿಷಯಕ ಲೇಖವಾದರೂ ಕರ್ನಾಟಕತ್ವದ ನಿಜವಾದ ರಹಸ್ಯವನ್ನು ತಿಳಿಸುವ ಲೇಖ. ಅದಕ್ಕಾಗಿ ಮುದ್ರಿಸಿರುವೆ. ೫ನೆಯ ಅನುಬಂಧದಲ್ಲಿ ರಾಜ್ಯನಿರ್ಮಾಣದ ದಿನ ಹಂಪಿಯಲ್ಲಾದ ಉತ್ಸವದ ವರದಿ ಬಂದಿದೆ.



ಶ್ರೀ. ಶ್ರೀಧರ ತೇಲಕರ ಎಂಬ ಫ್ರೀ ಪ್ರೆಸ್ ಜರ್ನಲದ ಸುದ್ದಿಗಾರರು ೧೯೫೨ರಲ್ಲಿ ನನ್ನ ಕಡೆಗೆ ಬಂದು, ಕರ್ನಾಟಕ

ತ್ವದ ಬಗ್ಗೆ ಅನೇಕ ತೊಡಕಿನ ಪ್ರಶ್ನೆಗಳನ್ನು ಕೇಳಿದವುಗಳಿಗೆ ನಾನು ಕೊಟ್ಟ ಉತ್ತರಗಳು.

ಅನುಬಂಧ ೩— Statement submitted to tha state re-organisation committee 22–28

ಅನುಬಂಧ ೩— ರಾಜ್ಯ ಪುನರ್ಘಟನಾ ಆಯೋಗದವರಿಗೆ ನಾನು ೨೦-೬-೫೪ನೆಯ ದಿವಸ ಅರ್ಪಿಸಿದ ಮನವಿ. ನಾನಾಗಿಯೇ ಆಯೋಗದ ಮುಂದೆ ಸಾಕ್ಷಿಗೆ ಹೋಗಿರಲಿಲ್ಲ, ಮನವಿಯನ್ನೂ ಕಳಿಸಿರಲಿಲ್ಲ. ಆದರೆ, ಆಯೋಗದವರು ಧಾರವಾಡಕ್ಕೆ ಬಂದ ಹಿಂದಿನ ದಿನವೇ ಸಾಯಂಕಾಲ ಅಂದರೆ, ೧೯–೬–೧೯೫೪ನೆಯ ದಿನ ಸಾಯಂಕಾಲಕ್ಕೆ ಶ್ರೀ. ನಿಜಲಿಂಗಪ್ಪ (ಆಗ ಕಾಂಗ್ರೆಸ್ ಕಮಿಟಿಯ ಅಧ್ಯಕ್ಷರು) ಇವರಿಂದ ನನಗೆ ಒಂದು ತಂತಿ ಬಂದಿತು. ಅದರಲ್ಲಿ, ಆಯೋಗದವರು ಈ ಸಂಬಂಧದಲ್ಲಿ ನಿಮ್ಮನ್ನು ಕಾಣಲಿಚ್ಛಿಸುತ್ತಾರೆ. ಆದ ಕಾರಣ, ನೀವು ನಾಳೆ ೧೦ ಗಂಟೆಗೆ ಹೋಗಿ, ಸಾಕ್ಷಿ ಕೊಡಬೇಕು ಎಂದು ಬರೆದಿತ್ತು. ಅದಕ್ಕನುಸಾರವಾಗಿ ರಾತ್ರಿಯೇ ಅವಸರದಲ್ಲಿ ನನ್ನ ಮನವಿಯನ್ನು ತಯಾರಿಸಿ, ಟಾಯಿಪ ಮಾಡಿಸಿ, ಅದನ್ನು ಒಪ್ಪಿಸಿ ಸಾಕ್ಷೀ ಕೊಟ್ಟಿರುವೆ. ಅದನ್ನು, ವಾಚಕರ ಅವಗಾಹನೆಗಾಗಿ ಕೊಟ್ಟಿರುವೆ.

ಅನುಬಂಧ ೪— Alur Venkatrao by Shrimati Rangachary, M.A. 29–36

ಶ್ರೀಮತಿ ಶಾಂತಾ ರಂಗಾಚಾರ, ಎಂ. ಎ. ಎಂಬೊಬ್ಬ ಪ್ರಸಿದ್ಧ ವಿದುಷಿಯರು ನನ್ನ ಬಗ್ಗೆ, ಮತ್ತು ಕರ್ನಾಟಕತ್ವದ ಮಹತ್ವದ ಬಗ್ಗೆ ಬೆಂಗಳೂರಿನ Daily Herald ದಿನ ಪತ್ರಿಕೆಯಲ್ಲಿ ಕರ್ನಾಟಕ ರಾಜ್ಯ ನಿರ್ಮಾಣದ ಅಂದರೆ, ೧–೧೧–೫೬ನೆಯ ಸಂಚಿಕೆಯಲ್ಲಿ ಕೊಟ್ಟ ಲೇಖ.

---

## ಭಾವಚಿತ್ರಗಳು

# ಕರ್ನಾಟಕತ್ವದ ವಿಕಾಸ

## ೧ನೆಯ ಪ್ರಕರಣ

### ಈಗಿನ ಕರ್ನಾಟಕ ರಾಜ್ಯದ ವೈಶಿಷ್ಟ್ಯ

ಸುಮಾರು ೪೦೦ ವರ್ಷಗಳನಂತರ ಅಖಂಡ ಕರ್ನಾಟಕವು ನಿರ್ಮಾಣವಾಗಿದೆ. ಈ ರಾಜ್ಯನಿರ್ಮಾಣಕ್ಕೂ ಹಿಂದೆ ಕನ್ನಡಿಗರು ಕಟ್ಟಿದ ರಾಜ್ಯಗಳಿಗೂ ಕೆಲವು ಭೇದಗಳಿವೆ. ಕರ್ನಾಟಕಸ್ಥರು ಹಿಂದಕ್ಕೆ ಚಾಲುಕ್ಯ, ರಾಷ್ಟ್ರಕೂಟ, ಪಶ್ಚಿಮಚಾಲುಕ್ಯ, ಕಲಚೂರ್ಯ, ವಿಜಯನಗರ ಮುಂತಾದ ದೊಡ್ಡದೊಡ್ಡ ಸಾಮ್ರಾಜ್ಯ ಕಟ್ಟಿದರು. ಆ ಮಾನದಿಂದ ಈಗ ಕಟ್ಟಿದ ಈ ರಾಜ್ಯವು ಚಿಕ್ಕದು. ಹಿಂದಿನ ಸಾಮ್ರಾಜ್ಯಗಳನ್ನು ಕಟ್ಟಿದವರೆಲ್ಲರೂ ಶೂರರೂ ಧೀರರೂ ಆಗಿದ್ದರು. ಶ್ರೀ ವಿದ್ಯಾರಣ್ಯರ ಆಧ್ಯಾತ್ಮಿಕ ಪ್ರಭಾವದ ಮೂಲಕ ವಿಜಯನಗರ ಸಾಮ್ರಾಜ್ಯವು ಅಸ್ತಿತ್ವದಲ್ಲಿ ಬಂದಿತು. ಹಿಂದಿನ ರಾಜ್ಯಗಳು ಭಾರತ ಸಾಮ್ರಾಜ್ಯದ ಅಂತರ್ಗತಗಳಲ್ಲ; ಸ್ವತಂತ್ರ ಸಾಮ್ರಾಜ್ಯಗಳಾಗಿದ್ದವು. ಆದರೆ ಈಗ ಕರ್ನಾಟಕಸ್ಥರು ಕಟ್ಟಿದ ಈ ರಾಜ್ಯಕ್ಕೆ ಮತ್ತೊಂದು ರೀತಿಯಿಂದ ಹಿಂದಿನ ರಾಜ್ಯಗಳಿಗಿಂತ ಹೆಚ್ಚಿನ ಮಹತ್ವವಿದೆ. ಹಿಂದಿನವೆಲ್ಲವು, ಜನತೆಯು ಜನತೆಗಾಗಿ ಕಟ್ಟಿದ ಸಾಮ್ರಾಜ್ಯಗಳಲ್ಲ. ಈಗಿನದು ಕೇವಲ ಜನತೆಯು ಜನತೆಗಾಗಿ ಕಟ್ಟಿದ ರಾಜ್ಯವು. ಹಿಂದಿನ ರಾಜ್ಯಗಳನ್ನು ಕಟ್ಟಿದವರು ಅಲೌಕಿಕ ಪುರುಷರು. ಈಗಿನ ರಾಜ್ಯಕಟ್ಟಿದವರು ಸಾಮಾನ್ಯ ಪುರುಷರು. ಹಿಂದಿನ ಸಾಮ್ರಾಜ್ಯಗಳು ಯುದ್ಧಗಳಲ್ಲಿಯ ಹಿಂಸಾತ್ಮಕ ವಿಜಯಗಳ ಮೂಲಕ ಕಟ್ಟಲ್ಪಟ್ಟವುಗಳು. ಇದು ಹಾಗಲ್ಲ. ಇದು ಅಹಿಂಸಾತ್ಮಕವಾಗಿ, ಕಟ್ಟಲ್ಪಟ್ಟದ್ದು.

ಸೋಲುಗಳ ಮೂಲಕ ಕಟ್ಟಲ್ಪಟ್ಟ ರಾಜ್ಯವನ್ನು ಯಾರಾದರೂ ಕೇಳಿರುವಿರೋ? ಇದು ಹಾಗೆ ಸೋಲುಗಳ ಮೂಲಕ ಕಟ್ಟಲ್ಪಟ್ಟ ರಾಜ್ಯವು! ಜನತೆಯು ಕೇವಲ ತನ್ನ ಕಲ್ಪನಾವಿಕಾಸದಿಂದ ಕಟ್ಟಿದ ರಾಜ್ಯವಿದು! ನಿರಾಶೆಯ ವಾತಾವರಣದ ಮೂಲಕ ಹುಟ್ಟಿದ ಆಶಾವಾತಾವರಣದಲ್ಲಿ ಕಟ್ಟಲ್ಪಟ್ಟ ರಾಜ್ಯವಿದು! ಕರ್ನಾಟಕದ ಈ ತುಂಡುಗಳು ಒಟ್ಟುಗೂಡುವವೆಂಬ ಆಸೆ ಮುಂಚೆ ದೊಡ್ಡ ದೊಡ್ಡವರಿಗೂ ಇರಲಿಲ್ಲ. ಕರ್ನಾಟಕತ್ವವು ನಿರಾಶೆಯ ವಾತಾವರಣದಲ್ಲಿ ಹುಟ್ಟಿ ನಿರಾಶೆಯ ವಾತಾವರಣದಲ್ಲೇ ಬೆಳೆಯಿತು. ಅದರ ಪುರಸ್ಕರ್ತರಲ್ಲಿ ಒಂದೇ ಒಂದು ಬಗೆಯ ಆತ್ಮವಿಶ್ವಾಸವಿತ್ತು. ಅದೆಂದರೆ ಎಂಥ ವಿರುದ್ಧ ಪರಿಸ್ಥಿತಿಯಿದ್ದರೂ ಅದು ಕೊನೆಯವರೆಗೆ ಉಳಿಯಲಾರದೆಂದೂ ಅಖಂಡ ಕರ್ನಾಟಕ ಹುಟ್ಟದಿದ್ದರೆ, ಕರ್ನಾಟಕಕ್ಕೆ ಅನ್ಯ ಗತಿಯೇ ಇಲ್ಲವೆಂದೂ ಅನಿಸಿದ್ದರಿಂದ ಆ ಅನನ್ಯಗತಿಕತ್ವವೇ ಅವರನ್ನು ಮತ್ತಿಷ್ಟು ದೃಢನಿರ್ಧಾರಕ್ಕೆ ಹಚ್ಚಿತು. ಆಗತಿಕಾಗತಿಯಿಂದಾದರೂ ಬ್ರಿಟಿಶರೇ ಆಗಲಿ ಕಾಂಗ್ರೆಸ್ಸಿಗರೇ ಆಗಲಿ ಕೊಟ್ಟೇ ಕೊಡಬೇಕಾಗುತ್ತದೆಂದು ಪುರಸ್ಕರ್ತರಿಗೆ ಅನಿಸಿತ್ತು. ಆ ದೃಢವಿಶ್ವಾಸವೇ ಅವರನ್ನು ದೃಢನಿರ್ಧಾರಕ್ಕೆ ನೂಕಿತು. ಅಂತೇ ಎಂಥ ವಿಪರೀತ ಸ್ಥಿತಿಯಲ್ಲಿಯೂ ಧೈರ್ಯಗೆಡಲಿಲ್ಲ; ಧೈರ್ಯಬಿಡಲಿಲ್ಲ. ನಮ್ಮವರಲ್ಲದವರ ವಿರೋಧವು ಅಥವಾ ಉದಾಸೀನತೆಯು ಬಂದಿತ್ತಲ್ಲದೆ ನಮ್ಮವರದೇ ವಿರೋಧವೂ ಬಂದಿತ್ತು. ಕೆಲ ಬ್ರಾಹ್ಮಣೇತರರು ಅನೇಕ ವರ್ಷಗಳವರೆಗೆ ವಿರೋಧಿಸಿದರು. ಮೈಸೂರಿನವರೂ ಮಿಕ್ಕವರೂ ಉದಾಸೀನರಾಗಿದ್ದರು. ಮೈಸೂರಿಗೆ ಆಗ 'ಸ್ವತಂತ್ರ!' ಸರಕಾರದ ಸುಖಾಸನ! ಅವರಿಗೆ ಕರ್ನಾಟಕತ್ವದ ಕಲ್ಪನೆ ಮುಂಚೆ ಸ್ವಾಭಾವಿಕವಾಗಿಯೇ ಬರಲಿಲ್ಲ. ದೂರದರ್ಶಿಗಳಾದ ಮೈಸೂರಿನ ತರುಣರಿಗೆ ಅನಿಸಿದ್ದರೂ ಅಂಥವರು ಆಗ ಬಹಳ ಕಡಿಮೆ ಜನರಿದ್ದರು. ಹೈದರಾಬಾದಿನವರಂತೂ ಅಸಹಾಯಕರೇ ಆಗಿದ್ದರು. ಒಂದು ಭಾಗದವರ ಪರಿಚಯ ಎರಡನೆಯ ಭಾಗದವರಿಗೆ ಇದ್ದಿಲ್ಲ. ಜಾತಿ ಜಾತಿಗಳ ವೈಮನಸ್ಸು, ಪ್ರಾಂತ ಪ್ರಾಂತೆಗಳ ವೈಮನಸ್ಸು, ಸುತ್ತಲಿನವರ ದಾಳಿ, ಹೀಗೆ ಎಲ್ಲವೂ ವಿಪರೀತ ಪರಿಸ್ಥಿತಿ! ಇವೆಲ್ಲವುಗಳಿಗಿಂತಲೂ ಹೆಚ್ಚಿನ ವೈರಿಗಳೆಂದರೆ ಉದಾಸೀನತೆ ನಿರಭಿಮಾನತೆಗಳು. ಇವೆಲ್ಲ ಸಂಕಟಗಳೊಳಗಿಂದ ಈ ಚಳವಳಿಯ ರಥವನ್ನು ತೆಗ್ಗಿಗೆ ಬೀಳದಂತೆ ಎಳೆದುಕೊಂಡು ಹೋಗಬೇಕಾಗಿತ್ತು. ಇದಲ್ಲದೆ ನಮ್ಮಲ್ಲಿ ಕೆಲಸಗಾರರ ಕೊರತೆ!

ಸಂಪರ್ಕಗಳ ಅಭಾವ ! ಹಣದ ಅಭಾವ ! ಅಲ್ಲದೆ ಕೆಲವರಿಗೇನೇ ಒಮ್ಮೊಮ್ಮೆ ಸರ್ಕಸ್ಸಿನ ಆಟಗಾರರಂತೆ ಒಂದೇ ಕಾಲಕ್ಕೆ ಎರಡು, ಮೂರು, ನಾಲ್ಕು ಕುದುರೆಗಳ ಸವಾರಿ ಮಾಡಬೇಕಾಗುತ್ತಿತ್ತು. ಸ್ವಾತಂತ್ರ್ಯಕ್ಕೆ ಉಕ್ಕು ಬಂದಾಗ ಕರ್ನಾಟಕ ಚಳವಳಿಯನ್ನು ಸ್ವಾಭಾವಿಕವಾಗಿ ಮುಖಂಡರಿಗೆ ಮುಂದೂಡಬೇಕಾಗುತ್ತಿತ್ತು. ಕರ್ನಾಟಕ ಚಳವಳಿಗೆ ಉಕ್ಕು ಬಂದಾಗ ಸ್ವಾತಂತ್ರ್ಯ ಚಳವಳಿಯ ಕಡೆಗೆ ಉದಾಸೀನತೆ. ಹೀಗೆಯೇ ಒಂದಲ್ಲ ನೂರೆಂಟು ವಿಘ್ನಗಳು ಇದ್ದರೂ, ಕರ್ನಾಟಕದೇವಿಯ ಕೃಪಾಬಲದಿಂದ ಕರ್ನಾಟಕಸ್ಥರು ಅಖಂಡ ಕರ್ನಾಟಕ ರಾಜ್ಯವನ್ನು ದೊರಕಿಸಲು ಸಮರ್ಥರಾದರು. ಇದೇ ಈ ಹೊಸ ರಾಜ್ಯದ ವೈಶಿಷ್ಟ್ಯ.



# ೨ನೆಯ ಪ್ರಕರಣ

## ರಾಷ್ಟ್ರೀಯತ್ವದ ಮೀಮಾಂಸೆ*

ಬ್ರಹ್ಮಾಂಡಸೃಷ್ಟಿಗೂ ಪಿಂಡಾಂಡಸೃಷ್ಟಿಗೂ ಸಾಮ್ಯವಿರುತ್ತದೆಂಬುದು ವೇದಾಂತದ ಸಿದ್ಧಾಂತವು. ಅದೇ ಮೇರೆಗೆ ಈ ಬ್ರಹ್ಮಾಂಡಸೃಷ್ಟಿ ಮತ್ತು ಪಿಂಡಾಂಡಸೃಷ್ಟಿಗಳಿಗೂ ರಾಷ್ಟ್ರಸೃಷ್ಟಿಗೂ ಸಾಮ್ಯವಿರುತ್ತದೆಂದು ಹೇಳಬಹುದು. ಇದೊಂದು ಬೀಜಭೂತವಾದ ವಾಕ್ಯದಿಂದ ನಾವು ನಮ್ಮ ರಾಷ್ಟ್ರೀಯತ್ವದ ವೃಕ್ಷವನ್ನು ಬೆಳಿಸುತ್ತೇವೆ. ಆದರೆ ಬ್ರಹ್ಮಾಂಡಸೃಷ್ಟಿಗೂ ರಾಷ್ಟ್ರಸೃಷ್ಟಿಗೂ ಇರುವ ಸಾಮ್ಯಗಳನ್ನೆಲ್ಲ ಇಲ್ಲಿ ಸೂಕ್ಷ್ಮವಾಗಿ ತೋರಿಸುವದು ನಮ್ಮ ವಿಚಾರ ವಲ್ಲ. ಸದ್ಯಕ್ಕೆ ಒಂದೇ ಒಂದು ಮಾತು ವಾಚಕರು ಧ್ಯಾನದಲ್ಲಿಟ್ಟರೆ ಸಾಕು. ಅದೆಂದರೆ ಪರಮಾತ್ಮನ ಪ್ರೇರಣೆಯಿಂದ ನಮ್ಮ ಜನರಲ್ಲಿ ರಾಷ್ಟ್ರನಿರ್ಮಾಣ ಮಾಡಬೇಕೆಂಬ ನಿರ್ಧಾರ ಹುಟ್ಟಿತು. ಆ ನಿರ್ಧಾರ ಮಾಡಿದನಂತರ ಪ್ರತ್ಯಕ್ಷ ವಾಗಿ ರಾಷ್ಟ್ರವು ನಿರ್ಮಾಣವಾಗುವ ಪೂರ್ವದಲ್ಲಿ ನಾವು ನಡುವೆ ಅನೇಕ ಸ್ಥಿತಿ ಗಳೊಳಗಿಂದ ಹಾಯ್ದುಹೋದೆವು. ಒಮ್ಮೆಲೆ ರಾಷ್ಟ್ರಶಿಶುವಿನ ಜನನವಾಗ ಲಿಲ್ಲ. ಪರಮಾತ್ಮನು ಪ್ರೇರಕನು; ಆತನ ಪ್ರೇರಣೆಯಿಂದ ನಮ್ಮ ಜನರಲ್ಲಿ ಕ್ರಮೇಣ ಅಹಂಕಾರತತ್ವವು ಅಂದರೆ ಅಭಿಮಾನವು ಉದಯವಾಯಿತು. ಕರ್ನಾಟಕದ ಶಾಂತಕವಿಗಳು ಹಾಡಿದಂತೆ "ನಮ್ಮದೀ ನಮ್ಮದೀ ಭರತ ಭೂಮಿ" ಎಂಬ ಅಭಿಮಾನ ನಮ್ಮ ಜನರಲ್ಲಿ ಒಡಮೂಡಿತು. ರಾಷ್ಟ್ರೀಯತ್ವ ವೆಂದರೆ ಈ ತರಹದ ಅಭಿಮಾನವೇ, ಸಾತ್ವಿಕ ಅಹಂಕಾರವೇ.

---

* "ರಾಷ್ಟ್ರೀಯತ್ವದ ಮೀಮಾಂಸೆ" ಎಂಬ ಲೇಖನಮಾಲೆಯನ್ನು ನಾನು ೧೯೨೬–೨೭ರಲ್ಲಿ ಶ್ರೀ. ದಿವಾಕರ ರಂಗರಾಯರ (ಈಗಿನ ಬಿಹಾರದ ರಾಜ್ಯಪಾಲರು) ಕರ್ಮವೀರ ಎಂಬ ವಾರಪತ್ರಿಕೆಯಲ್ಲಿ ಮುದ್ರಿಸಿ ಮುಂದೆ ಸ್ವತಂತ್ರ ಪುಸ್ತಕವಾಗಿ ಹೊರಡಿಸಿದ್ದೆ. ಅದರ ಪ್ರತಿ ತೀರಿಹೋಗಿವೆ. ಅದರಿಂದ ಕೆಲ ಭಾಗ ಆಯ್ದುಕೊಂಡು ಇಲ್ಲಿ ಹೆಚ್ಚಿಗೆ ಬರೆದಿರುವೆ.

ರಾಷ್ಟ್ರೀಯತ್ವವನ್ನು ಅಥವಾ ರಾಷ್ಟ್ರಾಭಿಮಾನ ಎಂಬ ಈ ತತ್ವವನ್ನು ನಾವು ಒಂದು ನದಿಗೆ ಹೋಲಿಸಬಹುದು. ಈ ಅಹಂಕಾರರೂಪ ನದಿಯ ಉಗಮವು ಚಿಕ್ಕದಿದ್ದು, ನಾನು, ನನ್ನ ಹೆಂಡಿರು-ಮಕ್ಕಳು, ನನ್ನ ಊರು, ನನ್ನ ಪ್ರಾಂತ, ನನ್ನ ರಾಷ್ಟ್ರ ಎಂಬದಾಗಿ ವಿಸ್ತಾರವನ್ನು ಹೊಂದುತ್ತದೆ. ಆದರೆ ರಾಷ್ಟ್ರೀಯನಾದವನು ಅದನ್ನು ಮತ್ತಿಷ್ಟು ವಿಸ್ತಾರ ಮಾಡುತ್ತ ಆ ಹೊಳೆಯನ್ನೇ ಗೀತೆಯಲ್ಲಿ ಹೇಳಿದಂತೆ "ಸರ್ವಭೂತಹಿತ"ವೆಂಬ ಸಮುದ್ರಕ್ಕೆ ಒಯ್ದು ಕೂಡಿಸಬೇಕು. ಪಾಶ್ಚಾತ್ಯ ದೇಶದಲ್ಲಿಯ ರಾಷ್ಟ್ರೀಯತ್ವದ ಸೆಲೆಯು ಸ್ವಾರ್ಥ ಹಿತದಲ್ಲಿ ಅವಸಾನಹೊಂದುತ್ತದೆ. ಅದು "ಸರ್ವಭೂತಹಿತ"ಕ್ಕೆ ಹೋಗಿ ಕೂಡುವದಿಲ್ಲ. ಇದೇ ಅವರ ರಾಷ್ಟ್ರೀಯತ್ವದ ಕಲ್ಪನೆಗೂ ನಮ್ಮ ರಾಷ್ಟ್ರೀಯತ್ವದ ಕಲ್ಪನೆಗೂ ಇರುವ ಮುಖ್ಯ ವೈಲಕ್ಷಣ್ಯ. ನಮ್ಮಲ್ಲಿ ಈಗಲೂ ಅನೇಕರು ಮೊದಲೇ ಸರ್ವಭೂತಹಿತದ ಬಗ್ಗೆ ದೊಡ್ಡ ದೊಡ್ಡ ಗುಡ್ಡದಂಥ ಮಾತುಗಳನ್ನೇನೋ ಆಡುತ್ತಿರುತ್ತಾರೆ. ಆದರೆ ನಿಜವಾಗಿ ಅವರಲ್ಲಿ ರಾಷ್ಟ್ರೀಯತ್ವದ ಕಲ್ಪನೆ ಕೂಡ ವಿಕಸಿತವಾಗಿರುವದಿಲ್ಲ. ಆ ಬಗೆಯ ನಿಜವಾದ ರಾಷ್ಟ್ರೀಯತ್ವವು ನಮ್ಮಲ್ಲಿ ಉಂಟಾಗಬೇಕಾದರೆ ನಮಗೆ ಇಡೀ ರಾಷ್ಟ್ರದ ಬಗ್ಗೆ ಸಾಕಷ್ಟು ಜ್ಞಾನವು ಮುಂಚೆ ಇರಬೇಕಾಗುತ್ತದೆ. ಹಾಗೆ ಇಡೀ ರಾಷ್ಟ್ರದ ಬಗ್ಗೆ ನಿಜವಾದ ಜ್ಞಾನ ಇದ್ದವರು ನಮ್ಮಲ್ಲಿ ಎಷ್ಟು ಮಂದಿ!

ರಾಷ್ಟ್ರವೆಂದರೇನೆಂಬುದನ್ನು ನೋಡೋಣ. ರಾಷ್ಟ್ರವೆಂದ ಕೂಡಲೆ ಒಂದು ದೇಶ, ಒಂದು ಭಾಷೆ, ಒಂದು ಧರ್ಮ, ಒಂದು ವಂಶ ಎಂದು ಚಟ್ಟನೆ ಅನೇಕರ ಉತ್ತರ. ರಾಷ್ಟ್ರವಾಗುವದಕ್ಕೆ ಒಂದು ವಂಶದ ( Race ) ಜನರ ಆವಶ್ಯಕತೆಯಿದೆ ಎಂದು ಹೇಳಬೇಕೋ? ಹಾಗೆಂದರೆ ರಶಿಯಾ ದೇಶದಲ್ಲಿ ಸುಮಾರು ೪೦ ವಂಶಗಳಿದ್ದವಲ್ಲ! ಹಾಗಿದ್ದರೂ ಅದು ಈಗ ಒಂದೇ ರಾಷ್ಟ್ರವಾಗಿಲ್ಲವೇ? ಸ್ವತಃ ಇಂಗ್ಲಂಡ ದೇಶವನ್ನೇ ನೋಡಿರಿ. ಅಲ್ಲಿರುವವರೆಲ್ಲರೂ ಒಂದೇ ವಂಶದ ಜನರಿರುವರೆಂದು ನಮ್ಮಲ್ಲಿ ಅನೇಕರ ಕಲ್ಪನೆ. ಆದರೆ ಅದು ತಪ್ಪು. ಈ ದೇಶದಲ್ಲಿ ನಾಲ್ಕಾರು ಜಾತಿಯ ಜನರಿರುತ್ತಾರೆ. ಅಲ್ಲಿ ಸ್ಕಾಚರಿರುವರು, ವೆಲಿಸ್ ಜನರಿರುವರು, ಜ್ಯೂಜಾತಿಯ ಜನರಿರುವರು, ನಾರ್ಮನ್ನರು ಇರುವರು, ಸಾಕ್ಸನ್ ಜನರಿರುವರು, ಡೆನಿಸ್ ಜನರಿರುವರು. ಸಾರಾಂಶ, ನಮ್ಮ ಕಣ್ಣಿಗೆ ಇಂದು ಒಂದೇ ಜನಾಂಗವೆಂದು ಕಾಣುವ

ಇಂಗ್ಲಂಡವು ಅನೇಕ ಭಿನ್ನ ಭಿನ್ನ ವಂಶಗಳದೊಂದು ಗಡ್ಡೆಯು. ಹಾಗಾದರೆ ಒಂದೇ ಭಾಷೆ ಇರುವದು ರಾಷ್ಟ್ರಕ್ಕೆ ಆವಶ್ಯವೆಂದು ಹೇಳೋಣವೇ? ಹಾಗೆ ಅನ್ನುವದೂ ಸರಿಯಲ್ಲ. ಕಾನಡಾ ದೇಶದಲ್ಲಿ ಕ್ವಿಬೆಕ್ ಪ್ರಾಂತದ ಜನರು ಫ್ರೆಂಚ್ ಮಾತನಾಡುವರು. ಮಿಕ್ಕವರು ಇಂಗ್ಲಿಷ ಮಾತನಾಡುತ್ತಾರೆ. ಸ್ವಿಝರ್ಲಂಡವು ಬಲು ಸಣ್ಣ ರಾಷ್ಟ್ರವಲ್ಲವೇ? ಇಂಥ ಸಣ್ಣ ಪ್ರದೇಶದಲ್ಲಿ ಸರಕಾರದ ಭಾಷೆಗಳೇ ಮೂರು ಇರುತ್ತವೆ. ಅಲ್ಲದೆ ಇನ್ನೂ ಕೆಲವು ಸಣ್ಣ ಪುಟ್ಟ ಭಾಷೆಗಳಿರುತ್ತವೆ. ರಾಷ್ಟ್ರಕ್ಕೆ ಒಂದೇ ಧರ್ಮವಿರುತ್ತದೆಂದು ತಿಳಿಯುವದೂ ತಪ್ಪು. ಇಂಗ್ಲಂಡದಲ್ಲಿ ಒಂದೇ ಧರ್ಮವಿರುವದೆಂದು ತಿಳಿದಿರುವಿರಾ? ಅಲ್ಲಿಯೂ ಅನೇಕ ಧರ್ಮಗಳಿವೆ. ಕ್ರಿಶ್ಚನ್, ಜ್ಯೂ ಮುಂತಾದ ಧರ್ಮಗಳಲ್ಲದೆ ನಾಸ್ತಿಕರದೊಂದು ದೊಡ್ಡ 'ಧರ್ಮವೇ' ಬೇರೆ ಉಂಟು. ರಶಿಯಾ ದೇಶದಲ್ಲಿ ೨-೩ ಕೋಟಿ ಮುಸಲ್ಮಾನರಿರುತ್ತಾರೆ. ಅಮೇರಿಕೆಯ ಹಣೆಯ ಬರೆಹವೂ ಇದೇ. ಇದನ್ನೆಲ್ಲ ಹೇಳುವ ಕಾರಣವೆಂದರೆ ನಮ್ಮ ಜನರ ಮನಸ್ಸಿನಲ್ಲಿ ಈ ವಿಷಯಕ್ಕೆ ಬಹಳೇ ತಪ್ಪು ಕಲ್ಪನೆಗಳಿರುತ್ತವೆ. ಹಿಂದುಸ್ತಾನದಲ್ಲಿ ನಾನಾ ಧರ್ಮಗಳಿವೆ, ಜಾತಿಗಳಿವೆ, ಪಂಥಗಳಿವೆ, ಭಾಷೆಗಳಿವೆ. ಆದಕಾರಣ ಮುಂಚೆ ಇವೆಲ್ಲವನ್ನು ಮುರಿದು ಮೂರಾಬಟ್ಟೆಯನ್ನಾಗಿ ಮಾಡುವದೇ ನಿಜವಾದ ರಾಷ್ಟ್ರೀಯತ್ವವು ಎಂಬ ಭಾವನೆ ಇನ್ನೂ ದೊಡ್ಡ ದೊಡ್ಡ ಮುತ್ಸದ್ದಿಗಳ ಮನದಲ್ಲಿ ಕೂಡ ಮನೆಮಾಡಿಕೊಂಡಿರುತ್ತದೆ. ಆ ಹುಚ್ಚು ಇನ್ನೂ ಹೋಗಿಲ್ಲ. ಅವು ತಪ್ಪು ಕಲ್ಪನೆಗಳು. ನಮ್ಮ ಪೂರ್ವಜರು "ನಮ್ಮದೀ ನಮ್ಮದೀ ಭರತ ಭೂಮಿ" ಎಂಬ ಭಾವನೆಯನ್ನು ಹುಟ್ಟಿಸಿದರಲ್ಲವೆ? ಹಿಂದಕ್ಕೆ ನಮ್ಮ ಋಷಿಗಳು ತಮ್ಮ ತಪೋಬಲದಿಂದ ಹುಟ್ಟಿಸಿದ ಈ ಭಾವನೆಯೇ, ಹಿಮಾಲಯದಿಂದ ಕನ್ಯಾಕುಮಾರಿಯ ವರೆಗಿನ ಈ ದೊಡ್ಡ ರಾಷ್ಟ್ರದೊಳಗಿರುವ ಜನರೆಲ್ಲರೂ 'ಭಾರತವು ನಮ್ಮ ರಾಷ್ಟ್ರವು' ಎಂದು ಅಭಿಮಾನ ತಾಳುವದಕ್ಕೂ ಮತ್ತು ವಾರಸಾ ಹಕ್ಕು ಹೇಳುವದಕ್ಕೂ ಜನ್ಮವೊಂದೇ ಆಧಾರವಲ್ಲವೇ? ಹಾಗಿಲ್ಲದಿದ್ದರೆ ಗೋವೆಯು ನಮ್ಮ ಪ್ರಾಂತವು, ಫ್ರೆಂಚರ ವಸಾಹತುಗಳ ಮೇಲೆ ನಮ್ಮ ವಾರಸಾ ಹಕ್ಕು ಇದೆ, ಮುಂತಾಗಿ ಹೇಳುವದಕ್ಕೆ ನಮಗೆ ಯಾವ ಅಧಿಕಾರವಿದೆ? ಆ ನಮ್ಮ ಋಷಿಗಳು ಸಂಪಾದಿಸಿಕೊಟ್ಟ ಹಕ್ಕೇ ಅದು ಅಲ್ಲವೇ? ಸಾರಾಂಶ, ನಾವು ಭಾರತೀಯರು ಸನಾತನ ಧರ್ಮ

ದವರು ಎಂದು ಮುಂತಾಗಿ ಅಭಿಮಾನ ತಾಳಿದ್ದೆ ಅಲ್ಲವೇ? ನಾವು, ಈ ರಾಷ್ಟ್ರವು ನಮ್ಮದು ಎಂಬುದಕ್ಕೆ ಮೂಲಾಧಾರವು. ಆದಕಾರಣ ರಾಷ್ಟ್ರೀಯತ್ವದ ಅಭಿಮಾನ ತಾಳುವವರು ಮುಂಚೆ ನಾವು ಭಾರತೀಯರು ಎಂದು ಕರಿಸಿಕೊಂಡುದಕ್ಕೆ ನಮ್ಮಲ್ಲಿ ಹುಟ್ಟಿದ ಯಾವ ಅಂಶಗಳು ಮತ್ತು ಯಾವ ಸಂಗತಿಗಳು ಮುಖ್ಯವಾಗಿ ಕಾರಣಗಳಾದುವೆಂಬುದನ್ನು ಮುಂಚೆ ತಿಳಿಯುವ. ಮೊದಲು ನಾವೆಲ್ಲ ಭಾರತೀಯರು 'ಹಿಂದು' ಗಳೆಂದೇ ರೂಢಿಯಾಗಿ ಅನ್ಯರಿಂದ ಸಂಬೋಧಿಸಲ್ಪಡುತ್ತಿದ್ದೆವು. ಅಂತೇ ನಮ್ಮ ಧರ್ಮಕ್ಕೆ ಹಿಂದೂಧರ್ಮವೆಂದೂ, ನಮ್ಮ ರಾಷ್ಟ್ರಕ್ಕೆ ಹಿಂದೂ ರಾಷ್ಟ್ರವೆಂದೂ (ಇಂಡಿಯಾ) ರೂಢನಾಮ ಬಂದಿತು. ಚಮತ್ಕಾರ ನೋಡಿರಿ. ಈ ಹುಟ್ಟನ್ನು ನಮ್ಮವರು ಮರೆತುಬಿಟ್ಟು, ನಾವು ಭಾರತೀಯರು, ಸನಾತನ ಧರ್ಮದವರು ಎಂದು ಎನಿಸಿಕೊಳ್ಳುವದಕ್ಕೆ ಕೂಡ ಕೆಲವು ದೊಡ್ಡ ಜನರು ನಾಚುತ್ತಾರೆ! ಇದೆಂಥ ದುರ್ದೈವ! ಹೀಗೆಂದ ಮಾತ್ರದಿಂದ ನಾವು ಮಿಕ್ಕ ಧರ್ಮದವರನ್ನು ಹೊರಗಟ್ಟಬೇಕೆನ್ನುತ್ತೇವೆ ಎಂದು ಯಾರೂ ತಿಳಿಯಲು ಕಾರಣವಿಲ್ಲ. ಏಕೆಂದರೆ ಹೀಗೆ ಸನಾತನ ಧರ್ಮವನ್ನು ಸ್ವೀಕರಿಸದಿದ್ದವರಿಗೂ ನಮ್ಮ ರಾಷ್ಟ್ರವು ಪೋಷಣೆಯನ್ನು ಕೊಡುತ್ತಲೇ ಬಂದಿದೆ. ಅವರವರನ್ನು ಅವರವರ ಧರ್ಮದಲ್ಲಿ ಇರಗೊಡುವದೂ ಸನಾತನ ಧರ್ಮದ ಒಂದು ಉದಾತ್ತ ತತ್ವವೇ ಆಗಿದೆ. ನಮ್ಮ ತಕರಾರು ಇಷ್ಟೇ. ಏನೆಂದರೆ— ನಾವು ಭಾರತೀಯರೆಂದೆನಿಸಿಕೊಂಡಿರುವದಕ್ಕೆ ನಮ್ಮ ಸನಾತನ ಸಂಸ್ಕೃತಿಯೇ ಮುಖ್ಯ ಕಾರಣವು, ಅದೇ ಆಧಾರವು. ಆ ಸನಾತನ ಸಂಸ್ಕೃತಿಗೆ ಮುಖ್ಯವಾಗಿ ಒಪ್ಪಬೇಕಾದ ಕೆಲವು ಆವಶ್ಯಕ ತತ್ವಗಳನ್ನು ನಾನು ಬೇರೊಂದು ಇಂಗ್ಲಿಷ ಗ್ರಂಥದಲ್ಲಿ ("Poorna-Brahma Philosophy of Sri Madhwacharya") ಚರ್ಚಿಸಿರುವೆ. ಅದು ಇಲ್ಲಿ ಅನವಶ್ಯಕ. ಸ್ಥೂಲವಾಗಿ ಹೇಳುವದಾದರೆ ನಮ್ಮ ಧರ್ಮವನ್ನು ಒಡಂಬಡುವವರು ಕೆಳಗಿನ ತತ್ವಗಳನ್ನು ಒಪ್ಪಿಕೊಂಡರೆ ಸಾಕು. (೧) ಸನಾತನ ಧರ್ಮದ ಸಾಮಾನ್ಯಲಕ್ಷಣ ಅಂದರೆ ಯಾವದೇ ರಾಷ್ಟ್ರದವನಿರಲಿ, ಯಾವದೇ ಧರ್ಮದವನಿರಲಿ, ಯಾವದೇ ಜನಾಂಗದವನಿರಲಿ, ಯಾವದೇ ಪ್ರಾಂತದವನಿರಲಿ ಆವರು ಅಲ್ಲಲ್ಲಿಯೇ ಇದ್ದು ನಮ್ಮ ಸನಾತನ ಧರ್ಮದ ಸಾಧನಗಳನ್ನು ಆಚರಿಸಬಹುದು. ಇಷ್ಟೇ ಅಲ್ಲ, ಆತನು ನಾಸ್ತಿಕನಾಗಿಯೇ ಇರಬಹುದು.

ಸಾರಾಂಶ, ನಮ್ಮದು **ಧರ್ಮರಾಷ್ಟ್ರ, ಧರ್ಮರಾಜ್ಯ.** ನಮ್ಮ ಸರಕಾರವು ಜಾತ್ಯತೀತ ರಾಜ್ಯ ( Secular state ) ಎಂದು ಹೇಳಿದ್ದೇನೋ ಒಂದು ರೀತಿಯಿಂದ ಸರಿಯೇ! ಆದರೆ ಜಾತ್ಯತೀತ ( Secular ) ಎಂಬುದಕ್ಕೆ ಎರಡು ಅರ್ಥಗಳಿವೆ. (೧) ಎಲ್ಲ ಧರ್ಮಗಳಿಗೂ ಪೋಷಣೆ ಕೊಟ್ಟು ಅವುಗಳಲ್ಲಿ ಕೈ ಹಾಕದಿರುವದು ಎಂದು ಒಂದು ಅರ್ಥ. (೨) ನಮ್ಮ ಸರಕಾರವು ಯಾವ ಧರ್ಮಕ್ಕೂ ಜಾತಿಗೂ ಎಡೆಯನ್ನೇ ಕೊಡುವದಿಲ್ಲ, ಅಂದರೆ ನಮ್ಮದು ಜಾತಿಬಾಹ್ಯ ಸರಕಾರ ಎಂದು ಎರಡನೆಯ ಅರ್ಥ. ಮೊದಲಿನ ಅರ್ಥದಲ್ಲಿಯೇ ನಮ್ಮ ರಾಜ್ಯವು " **ಧರ್ಮರಾಜ್ಯ** "ವಾಗಬಲ್ಲದು. ಎರಡನೆಯ ಅರ್ಥದಲ್ಲಿ ತಿಲಪ್ರಾಯವೂ ಅಲ್ಲ. ನಮ್ಮ ಘಟನಾಕಾರರು ಎರಡು ನಾಲಿಗೆಯವರು ಎನಿಸಿಕೊಳ್ಳದಿರಬೇಕಾಗಿದ್ದರೆ ಅವರು ಮೊದಲನೇ ಅರ್ಥದಲ್ಲೆ ನಮ್ಮ ಸರಕಾರವು ಜಾತ್ಯತೀತ ಸರಕಾರವೆಂದು ಯಾಕೆ ಜಾಹೀರ ಮಾಡಬಾರದು ? ನಿಷ್ಕಾರಣವಾಗಿ ದ್ವಿಮುಖ ದೋಷಕ್ಕೆ ಆಸ್ಪದ ಕೊಡುವದೇಕೆ ?

# ೩ನೆಯ ಪ್ರಕರಣ

## ಕರ್ನಾಟಕತ್ವದ ಮೀಮಾಂಸೆ

**ಕರ್ನಾಟಕತ್ವವೆಂದರೇನು ? :—** ಕರ್ನಾಟಕತ್ವವೆಂಬುದು ನನ್ನ ವಿಶಿಷ್ಟ ವಿಚಾರ. ಆ ಶಬ್ದವೂ ಕೂಡ ನನ್ನ ಟಂಕಸಾಲೆಯಲ್ಲಿ ಹುಟ್ಟಿದ್ದು. ಅದೊಂದು ಶಬ್ದದಲ್ಲಿ ರಾಜಕಾರಣ, ಧರ್ಮ, ವಾಙ್ಮಯ, ಇತಿಹಾಸ, ಕಲೆ ಮುಂತಾದ ಯಾವತ್ತೂ ವಿಷಯಗಳು ಸೇರ್ಪಡೆಯಾಗುತ್ತವೆ. ಅದರಲ್ಲಿ ಸೇರದ ವಿಷಯವಿಲ್ಲ. ನನ್ನ ಜೀವನದ ಯಾವತ್ತೂ ಚಟುವಟಿಕೆಗಳ ಅದೃಶ್ಯವಾದ ಉಗಮವು ಈ ಕರ್ನಾಟಕತ್ವದ ಕಲ್ಪನೆಯಲ್ಲಿ. ಹಿಂದಕ್ಕೆ ದೇಶಭಕ್ತ ಗಂಗಾಧರ ರಾವ ದೇಶಪಾಂಡೆ ( ಕರ್ನಾಟಕದ ಸಿಂಹ ಎಂದು ಹೆಸರು ಪಡೆದವರೂ ನನಗೆ ಹಿರಿಯರೂ ನನಗಿಂತ ವೃದ್ಧರೂ ಆದವರು ) ನನಗೆ ಉದ್ದವಾದ ಪತ್ರ ಬರೆದು " You are as experienced and seasoned a soldier as any one else. I seek your advice and guidance " ಎಂದು ಕೇಳಿದ್ದರು. ಅವರಿಗೆ ನಾನು ೧೪-೬-೧೯೨೯ನೆಯ ದಿವಸ ಬರೆದ ಉತ್ತರದಲ್ಲಿ, ಕರ್ನಾಟಕತ್ವ ಎಂಬುದಕ್ಕೆ ಉತ್ತರ ಕೊಟ್ಟಿರುವೆ.

From my experience of the public life in Karnatak and also from my experience in other fields, I have come to the conclusion that no movement political or otherwise is possible unless there is this Karnatakatwa in us. By Karnatakatwa, I mean the sum total of all our feelings and duties towards Karnatak ( like Hindutwa ). So it is that from the political field, I turned to this less ambitious but more solid work. My Karnatakatwa is somewhat different from 'Provincialism.'

ನನ್ನ ಜೀವನಸ್ಮೃತಿಗಳು ಭಾಗ ೨, ಪು. ೧೭೫-೧೭೬

ಈ ಕರ್ನಾಟಕತ್ವದ ಕಲ್ಪನೆಯನ್ನು ಕರ್ನಾಟಕದ ಮುಖಂಡರು ಸಾಕಷ್ಟು ಆಕಲನಮಾಡಿ ಅದರೊಡನೆ ತಾದಾತ್ಮ್ಯ ಹೊಂದದಿರುವದೇ ನಮ್ಮ ಎಲ್ಲ ದುಃಖಗಳಿಗೆ ಮೂಲ. ಮಿಕ್ಕ ಪ್ರಾಂತಗಳಲ್ಲಿ ಈ ಮೊದಲೇ ಜಾಗ್ರುತಿಯಾಗಿರುವದರಿಂದ ಅಲ್ಲಿಯ ಜನರಿಗೆ ಈ ಪ್ರಶ್ನೆ, ನಮ್ಮಷ್ಟು ತೀಕ್ಷ್ಣವಾಗಿರುವದಿಲ್ಲ. **ತನ್ನ ದೇಶದೊಡನೆ ತಾದಾತ್ಮ್ಯಹೊಂದದ ಪ್ರಾಂತವೆಂದರೆ ಕರ್ನಾಟಕವೊಂದೇ.** ಒಂದೊಂದು ಕ್ಷೇತ್ರದಲ್ಲಿ ಕೆಲಸ ಮಾಡುವವರು ಹಲವರಿರುತ್ತಾರೆ. ಇಡಿಯಾಗಿ ವಿಚಾರ ಮಾಡಿ ಸರ್ವ ವಿಷಯಗಳಲ್ಲಿಯೂ ಮನಸ್ಸು ಹಾಕುವವರು ತೀರ ಕಡಿಮೆ. ನನಗೆ ಬೇಕು ಇಡಿದೃಷ್ಟಿ; ಬಿಡಿದೃಷ್ಟಿ ಬೇಡ. ಅಖಂಡ ಕರ್ನಾಟಕ ನಿರ್ಮಾಣಕ್ಕೆ ಅದು ಆಗ ಅವಶ್ಯವಾಗಿತ್ತು.

**ಕರ್ನಾಟಕತ್ವಕ್ಕೂ ರಾಜಕಾರಣಕ್ಕೂ ವಿರೋಧವೇ?** :— ಇದೊಂದು ರಾಜಕಾರಣದಲ್ಲಿ ಕೆಲಸ ಮಾಡುವವರ ತಲೆಯೊಳಗಿನ ಹುಚ್ಚು. ಕರ್ನಾಟಕತ್ವದಲ್ಲಿ, ಕರ್ನಾಟಕದ ರಾಜಕಾರಣವೂ ಸೇರುತ್ತದೆಂಬದನ್ನು ಅವರು ಮರೆಯುತ್ತಾರೆ. ರಾಜಕಾರಣವನ್ನು ಕರ್ನಾಟಕದ ಸ್ಥಿತಿಗತಿಗಳಿಗೆ ಅನ್ವಯಿಸಿಕೊಳ್ಳುವದೇ ಕರ್ನಾಟಕದ ವಿಶಿಷ್ಟ ರಾಜಕಾರಣ. ಹಾಗೆ ಮಾಡುವಾಗ ಕರ್ನಾಟಕದ ರಾಜಕೀಯ ಏಕೀಕರಣದ ಪ್ರಶ್ನೆ ತಾನಾಗಿಯೇ ಉದ್ಭೂತವಾಗುತ್ತದೆ. ಅದನ್ನು ಮಹಾತ್ಮಾ ಗಾಂಧಿಯವರು ಬಿಡಿಸಬೇಕೋ, ಕರ್ನಾಟಕದ ಮುಖಂಡರು ಬಿಡಿಸಬೇಕೋ? ಕನ್ನಡ ಜಿಲ್ಹೆಯಾದ ಬಳ್ಳಾರಿಯನ್ನು ಸಂರಕ್ಷಿಸುವದು ರಾಜಕಾರಣವಲ್ಲವೋ! ಹಾಗೆ ನಮ್ಮ ರಾಜಕಾರಣಿಗಳು ಮಾಡಲಿಲ್ಲವಾದ್ದರಿಂದಲೇ ಅದರ ಮೂರು ತಾಲೂಕುಗಳು ಅಂದರೆ ಆದವಾನಿ, ಆಲೂರು, ರಾಯದುರ್ಗಗಳು ನಮ್ಮ ಕೈಬಿಟ್ಟು ಹೋದವು. ಆಗಿನಿಂದ ಪ್ರಯತ್ನ ಮಾಡಿದ್ದರೆ ಅವು ಎಂದೂ ಕೈಬಿಟ್ಟು ಹೋಗುತ್ತಿದ್ದಿಲ್ಲೆಂದು ನನ್ನ ಮತ. ಇರಲಿ, ಲಿಂಗಾಯತ ಬ್ರಾಹ್ಮಣ ವಾದವನ್ನು ಬಿಡಿಸುವದಕ್ಕೆ ಶ್ರೀ. ರಾಜೇಂದ್ರಪ್ರಸಾದರು ಬರಬೇಕೋ? ಮರಾಠಿ ಕನ್ನಡ ವಾದವೂ ಮೂಲತಃ ರಾಜಕಾರಣ ಪ್ರಶ್ನೆಯೇ. ಆ ಬಗ್ಗೆ ನನ್ನ ಕಾಲಕ್ಕೆ ಶ್ರೀ. ಕಡಪಾ ರಾಘವೇಂದ್ರರಾಯರೂ ಮತ್ತೆ ಕೆಲ ಮಿತ್ರರೂ ನಾನೂ ಪ್ರಯತ್ನ ಮಾಡಿದೆವು. ಆದರೆ ಬೆಳಗಾಂವಿಯ ವಿಷಯದಲ್ಲಿ ಆದರ ಶ್ರೇಯಸ್ಸನ್ನೆಲ್ಲ ಬೆಳಗಾಂವಿ ಜಿಲ್ಹೆಯ ನಮ್ಮ ಕಟ್ಟಾಭಿಮಾನಿಗಳಾದ ಮುಖಂಡರಿಗೇ ಸಲ್ಲಿಸಬೇಕು. ಅವರಿಗೆ ಮಿಕ್ಕ ಕರ್ನಾಟಕದವರಿಂದ

ದೊರೆಯಬೇಕಾದಷ್ಟು ಬೆಂಬಲ ದೊರೆಯಲಿಲ್ಲ. ಇರಲಿ, ಸಾರಾಂಶ, ಕರ್ನಾಟಕತ್ವವು, ರಾಜಕಾರಣದೊಳಗಿನ ಯಾವ ಪ್ರಶ್ನೆಯನ್ನೂ ಕಡಿಮೆ ಮಾಡದೆ ತಾನೇ ಹೆಚ್ಚಿನ ಭಾರವನ್ನು ಹೊರುತ್ತದೆ. ಹಾಗೆ ಮಾಡದಿದ್ದವರು ಕರ್ನಾಟಕದ ದ್ರೋಹಿಗಳೆಂದು ಮಾತ್ರ ನಿಕ್ಷುಣ್ಣವಾಗಿ ಹೇಳುತ್ತದೆ. ಆದ ಕಾರಣ ಅದು ಸ್ವಾತಂತ್ರ್ಯಕ್ಕೆ ತಿಲಪ್ರಾಯವೂ ವಿರುದ್ಧವಿಲ್ಲೆಂಬುದು ಸೂರ್ಯಪ್ರಕಾಶದಷ್ಟು ಸ್ಪಷ್ಟವಿದೆ.

**ಭಾರತೀಯ ಸಂಸ್ಕೃತಿ ಮತ್ತು ಕರ್ನಾಟಕ ಸಂಸ್ಕೃತಿ :—** ಕಾಂಗ್ರೆಸ್ಸು—ಕರ್ನಾಟಕತ್ವವು ಎಂಬ ಪ್ರಶ್ನೆಯಂತೆಯೇ ಈ ಪ್ರಶ್ನೆಗೂ ಮಹತ್ವವಿದೆ. ಕರ್ನಾಟಕ ಸಂಸ್ಕೃತಿಯೆಂಬುದು ಬೇರೆ ಸಂಸ್ಕೃತಿಯೇ ಇಲ್ಲ. ಇಡೀ ಭಾರತಕ್ಕೆಲ್ಲ ಒಂದೇ ಸಂಸ್ಕೃತಿ ಅದೆ. ಅದೆಂದರೆ ಅಧ್ಯಾತ್ಮ ಸಂಸ್ಕೃತಿ ಎಂದು ಹಲವರ ಕಲ್ಪನೆ. ಅದು ಅಷ್ಟು ಸರಿಯಲ್ಲ! ಏಕೆಂದರೆ ಭಾರತೀಯ ಸಂಸ್ಕೃತಿ ಎಂಬುದು ಇಡೀ ಭರತಖಂಡಕ್ಕೇನೇ ಒಂದೇ ಇರುತ್ತದೆಂಬುದನ್ನು ನಾನೂ ಒಪ್ಪುತ್ತೇನೆ. ಆದರೆ ಆ ಸಂಸ್ಕೃತಿಗೆ ಕರ್ನಾಟಕವು ತನ್ನ ವಿಶಿಷ್ಟ ಸಂಸ್ಕೃತಿಯನ್ನು ಬೆರಿಸಿ ಅದನ್ನು ಪುಷ್ಟಿಗೊಳಿಸುತ್ತದೆಂಬದನ್ನೂ ವಿಶಿಷ್ಟಸ್ವರೂಪವನ್ನು ಕೊಡುತ್ತದೆಂಬುದನ್ನೂ ಯಾರೂ ಮರೆಯಕೂಡದು. ಉದಾ :— ಗಾಯನಕಲೆಯನ್ನು ತೆಗೆದುಕೊಳ್ಳಿರಿ. ಕರ್ನಾಟಕ ಸಂಗೀತ ಎಂಬುದೊಂದು ಭಾರತೀದೇವಿಗೆ ಕರ್ನಾಟಕವು ತೊಡಿಸಿದ ಹೊಸ ಆಭರಣವಲ್ಲವೇ ? ಹಾಗೆಯೇ ಧರ್ಮವನ್ನು ತೆಗೆದುಕೊಳ್ಳಿರಿ : ಕರ್ನಾಟಕದ ತ್ರಿಮತಸ್ಥರು ಮತ್ತು ಲಿಂಗಾಯತ ಹಾಗೂ ಜೈನ ಮತದ ಅನೇಕ ಧಾರ್ಮಿಕ ಪುರುಷರು ಸನಾತನ ಧರ್ಮಕ್ಕೆ ಕಾಣಿಕೆಯಾಗಿ ಹೊಸ ಉಡುಪುಗಳನ್ನು ಕೊಟ್ಟಿಲ್ಲವೇ ? ಸಾರಾಂಶ, ಕರ್ನಾಟಕ ಸಂಸ್ಕೃತಿಯೆಂಬುದು ಭಾರತ ಸಂಸ್ಕೃತಿಯನ್ನು ಒಳಗೊಂಡುದಲ್ಲದೆ ಅದನ್ನು ತನ್ನ ವಿಶಿಷ್ಟ ಸಂಸ್ಕೃತಿಯಿಂದ ಪುಷ್ಟಿಗೊಳಿಸಿದ್ದು.

**ಸ್ವಾತಂತ್ರ್ಯವೂ ಕರ್ನಾಟಕತ್ವವೂ :—** ಈ ಪ್ರಶ್ನೆಗೆ ಈಗೇನೂ ಮಹತ್ವ ಉಳಿದಿಲ್ಲ. ಆದರೆ ಒಂದು ಕಾಲಕ್ಕೆ ಈ ಪ್ರಶ್ನೆಗೆ ಒಂದು ವಿಶಿಷ್ಟ ಸ್ವರೂಪವು ಪ್ರಾಪ್ತವಾಗಿತ್ತು. "ರಾಷ್ಟ್ರೀಯತ್ವಕ್ಕೆ ವಿರುದ್ಧವಾದ ಕರ್ನಾಟಕತ್ವವು ಕರ್ನಾಟಕತ್ವವೇ ಅಲ್ಲ. ಕರ್ನಾಟಕತ್ವಕ್ಕೆ ವಿರುದ್ಧವಾದ ರಾಷ್ಟ್ರೀ

ಯತವು ರಾಷ್ಟ್ರೀಯತ್ವವೇ ಅಲ್ಲ."—ಎಂದು ನನ್ನ ಸೂತ್ರವು. ನನಗೆ ಆವೆರಡರಲ್ಲಿ ಎಂದೂ ವಿರೋಧವೇ ಕಂಡುಬರಲಿಲ್ಲ. ಕೆಲವರಿಗೆ ಅದು ರುಚಿಸಲಿಲ್ಲವೆನ್ನುವದಕ್ಕಿಂತ ಆಗ ತಿಳಿಯಲಿಲ್ಲ ಎಂದು ಅನ್ನಬಹುದು. ಏಕೆಂದರೆ ಸ್ವಾತಂತ್ರ್ಯಕ್ಕಾಗಲಿ ಕರ್ನಾಟಕತ್ವಕ್ಕಾಗಲಿ ಅವರೂ ವಿರುದ್ಧವೇನು ಇದ್ದಿಲ್ಲ. ಬ್ರಿಟಿಶರು ಕೆಲವರಿಗೆ ಕೆಲವೊಂದು ಆಸೆಯನ್ನು ತೋರಿಸಿದ್ದರಿಂದ ಆಗ ಕೆಲವರು ಸ್ವಾತಂತ್ರ್ಯ ಚಳವಳಿಯಿಂದ ಹಿಂಜರಿದರು. ಕೆಲವರಿಗೆ ಸ್ವಾತಂತ್ರ್ಯವೊಂದೇ ಕಂಡಿತು. ಕರ್ನಾಟಕತ್ವವು ಕಡಿಮೆಯದು, ಆದಕಾರಣ ಅದನ್ನು ದುರ್ಲಕ್ಷಿಸಬಹುದು, ಎಂಬ ಕಾರಣದಿಂದ ಕೆಲವರು; ಮತ್ತೆ ಕೆಲವರು, ದುರ್ಲಕ್ಷಿಸದಿದ್ದರೂ ಅಲಕ್ಷಿಸಬಹುದು ಎಂದು ಕೆಲವರು; ಮತ್ತೆ ಕೆಲವರು ಕಾಂಗ್ರೆಸ್ಸಿನಿಂದ ಆಗುವತನಕ ಹಾದೀ ನೋಡುವಾ; ಅವರು ಎಂದು ಮಾಡುತ್ತಾರೋ ಮಾಡಲಿ, ನಾವು ಸ್ವಸ್ಥ ಕೂಡುವಾ ಎಂದು ಹಲವರು; ಮತ್ತೆ ಕೆಲವರು ಬೇರೆ ಬೇರೆ ಕಾರಣಗಳಿಗಾಗಿ— ಹೀಗೆ ಅವರು ನಾನಾಪ್ರಕಾರವಾಗಿ ಕರ್ನಾಟಕತ್ವವನ್ನು ಗೌಣವೆಂದು ತಿಳಿದರು. ಇಷ್ಟೇ ಅಲ್ಲ, ಕಾಂಗ್ರೆಸ್ಸಿನ ಮೇಲೆ ವರ್ಚಸ್ಸನ್ನು ಕೂಡ (ಕಾಂಗ್ರೆಸ್ಸಿನಲ್ಲಿ ನಮ್ಮ ದುರ್ದೈವದಿಂದ ಆಗ ವರ್ಚಸ್ಸುಳ್ಳವರೇ ಕಡಿಮೆ.) ಉಪಯೋಗಿಸಲಿಲ್ಲ. ಆದ ಕಾರಣವೇ ಆ ಕಾಲಕ್ಕೆ ಈ ಪ್ರಶ್ನೆಗೆ ಮಹತ್ವವು ಪ್ರಾಪ್ತವಾಗಿತ್ತು. ಮತ್ತು ಎರಡಕ್ಕೂ ಸಮನಾಗಿಯೇ ಬೆಲೆ ಕೊಡುವವರ ಆಟವೇನೂ ಸಾಗದಂತಾಗಿತ್ತು. ಕಡಪಾ ರಾಘವೇಂದ್ರರಾಯರು ಎರಡರ ಬಗ್ಗೆಯೂ ಅಷ್ಟೇ ಕಳಕಳಿಯುಳ್ಳವರಾಗಿದ್ದರು. ಆದರೆ ಅವರು ನನ್ನಂತೆ ಆಗ ವಕೀಲಿ ಬಿಟ್ಟಿರಲಿಲ್ಲ. ಆ ಕಾರಣದಿಂದ ಆವರಿಗೆ ಕರ್ನಾಟಕತ್ವವು ಒಂದೇ ಬೇಕಾಗಿದೆ ಎಂದು ಆರೋಪ ಮಾಡಿ ಕೆಲ ಕಾಂಗ್ರೆಸ್ಸಿಗರು ಕುತ್ಸಿತ ಟೀಕೆ ಮಾಡಿದರು! ಆಗ ಕಡಪಾ ರಾಘವೇಂದ್ರರಾಯರು ತಮ್ಮ ಅಂಥ ಬಡತನದ ಸ್ಥಿತಿಯಲ್ಲಿಯೂ ವಕೀಲಿಯನ್ನು ಬಿಟ್ಟುಕೊಟ್ಟು ಸ್ವಾತಂತ್ರ್ಯಕ್ಕಾಗಿ ತಮ್ಮ ಶಕ್ತಿಮೀರಿ ದುಡಿದರು! ಮತ್ತು ಶ್ರೀಮಂತರಿದ್ದೂ ವಕೀಲಿ ಬಿಡದವರ ಕಡೆಯಿಂದ ಒಂದು ವರ್ಷದ ಉತ್ಪನ್ನವನ್ನು ವಸೂಲ ಮಾಡಿಕೊಂಡು ಸಾರ್ವಜನಿಕ ನಿಧಿ ಕೂಡಿಸಿದರು. ದುರ್ದೈವದಿಂದ ಮುಂದೆ ರಾಘವೇಂದ್ರರಾಯರು ಸತ್ತೇ ಹೋದರು. ಇರಲಿ, ಶ್ರೀ. ದಿವಾಕರರಂಥವರು "ಸ್ವತಂತ್ರ ಭಾರತ, ಏಕತಂತ್ರ ಕರ್ನಾಟಕ" ಎಂದು ಘೋಷಣೆ ಮಾಡಿದರೂ ಮಿಕ್ಕ

ಅನೇಕ ರಾಜಕಾರಣಿಗಳು ಕರ್ನಾಟಕತ್ವವನ್ನು ಎತ್ತಿ ಹಿಡಿದರೂ ಕರ್ನಾಟಕತ್ವವನ್ನು ಕಡೆಗಣಿಸಿದರು.

ಇಲ್ಲಿ ನನ್ನ ಭೂಮಿಕೆಯನ್ನು ತಿಳಿಸಿ ಹೇಳುವೆ. ಸ್ವಾತಂತ್ರ್ಯ ಸಿಕ್ಕಿತೆಂದೂ ಕರ್ನಾಟಕಕ್ಕೆ ಬೇರೆ ರಾಜ್ಯ ಸಿಕ್ಕಲಿಲ್ಲವೆಂದೂ ತಿಳಿಯಿರಿ. ಆಗ ನಮ್ಮ ಅವಸ್ಥೆ ಏನಾಗುತ್ತಿತ್ತೆಂಬುದನ್ನು ತುಸು ನೆನೆಯಿರಿ. ಆಗ ಕರ್ನಾಟಕದ ಅವಸ್ಥೆ, ನಾಯಿಗಳು ಹರಿದ ಹಿಟ್ಟಿನ ಚೀಲದಂತೆ ಅದರ ಅವಸ್ಥೆಯಾಗುತ್ತಿತ್ತು! ಸ್ವಾತಂತ್ರ್ಯದಿಂದ ಕರ್ನಾಟಕಕ್ಕೆ ಮತ್ತಿಷ್ಟು ದುರ್ದಸೆಯೇ ಪ್ರಾಪ್ತವಾಗುತ್ತಿತ್ತಲ್ಲದೆ ಸ್ವಾತಂತ್ರ್ಯದ ಪೂರ್ಣ ಸುಖವೇನೂ ನಮಗೆ ಲಭಿಸುತ್ತಿರಲಿಲ್ಲ! ನನಗೆ ಒಂದು ಕಡೆ ಕೆರೆ ಮತ್ತೊಂದು ಕಡೆಗೆ ಬಾವಿ, ಹೀಗೆ ಒಂದೇ ಕಾಲಕ್ಕೆ ಪರಿಸ್ಥಿತಿಯುಂಟಾಗಿತ್ತು! ಎಂಟು ದಿನ ನಿದ್ದೆ ಬರಲಿಲ್ಲ; ಕೊನೆಗೆ ಕರ್ನಾಟಕಕ್ಕೆ ಅಖಂಡ ಕರ್ನಾಟಕವು ಸಿಕ್ಕದಿದ್ದರೆ ಕರ್ನಾಟಕತ್ವದ ಹೊಳೆಯು ಸಮುದ್ರಕ್ಕೆ ಕೂಡುವದಂತೂ ಒತ್ತಟ್ಟಿಗಿರಲಿ, ಅದು ಪೂರ್ಣವಾಗಿ ಬತ್ತಿಯೇ ಹೋಗುತ್ತಿತ್ತೆಂಬ ವಿಚಾರವು ಮನದಲ್ಲಿ ಬಂದು ಭುಗಿಲ್ಲೆನಿಸಿತು! ಈ ಘೋರ ಚಿತ್ರವು ನನ್ನ ಮನಸ್ಸಿನಲ್ಲಿ ಮೂಡಿ ಬಂದುದರಿಂದಲೇ ನಾನು ಕರ್ನಾಟಕತ್ವವು ಸ್ವಾತಂತ್ರ್ಯಕ್ಕಿಂತ ನಮಗೆ ಕಡಿಮೆಯಲ್ಲವೆಂದು ಘೋಷಿಸಿದೆನು. ಮಿಕ್ಕ ಪ್ರಾಂತದವರ ಮುಂದೆ ಈ ಪ್ರಶ್ನೆ ಅಷ್ಟು ತೀಕ್ಷ್ಣವಾಗಿರಲಿಲ್ಲ. ಆದ ಕಾರಣ ಅವರು ಉದಾಸೀನರಾದರು. ಈ ಕಾರಣದಿಂದಲೇ ನನಗೆ ಮೊನ್ನೆ ಮೊನ್ನಿನ ವರೆಗೆ ಈ ಪ್ರಶ್ನೆಯ ಮಹತ್ವವನ್ನು ತಿಳಿಸಿ ಹೇಳುವದರಲ್ಲಿ ಜನ್ಮ ಕಳೆಯಬೇಕಾಯಿತು. ೧೯೨೦ರಲ್ಲಿಯೇ ಕಾಂಗ್ರೆಸ್ಸು ಭಾಷಾನ್ವಯ ಪ್ರಾಂತರಚನೆ ಸ್ವೀಕರಿಸಿ ತನ್ನ ಮುದ್ರೆಯನ್ನೇನೋ ಒತ್ತಿತ್ತು. ಮತ್ತು ತಾನು ಆ ಪ್ರಕಾರ ಮುಂದೆ ಪ್ರದೇಶಗಳನ್ನೂ ಹಂಚಿಬಿಟ್ಟಿತು. ಆದರೆ ಇಷ್ಟರಿಂದ ಕರ್ನಾಟಕದ ರಾಜಕೀಯ ಏಕೀಕರಣದ ನಿರ್ಮಾಣವಾದಂತಾಗಲಿಲ್ಲ. ಅದಕ್ಕೆ ಕೇಂದ್ರ ಸರಕಾರದ ಮುದ್ರೆ ಬೀಳದಿದ್ದರೆ ಉಪಯೋಗವೇನು? ಇಷ್ಟೇ ಅಲ್ಲ, ಅಂದಿನಿಂದ ಅಖಂಡ ಕರ್ನಾಟಕದ ಸ್ಥಿತಿಯು ಮತ್ತಿಷ್ಟು ಕೆಡಲಿಕ್ಕೇ ಹತ್ತಿತು. ಏಕೆಂದರೆ ಈ ಮಧ್ಯಂತರದಲ್ಲಿ ಕರ್ನಾಟಕ ಪ್ರಾಂತದ ಪ್ರದೇಶಗಳನ್ನು ನುಂಗಿ ನೀರುಕುಡಿಯಲಿಕ್ಕೆ ಅನ್ಯರಿಗೆ ಅವಕಾಶವಾಯಿತು! ಬೆಳಗಾಂವಿಯಲ್ಲಿ ಮೇಲಿಂದ ಮೇಲೆ ಎದ್ದ ಬಿರುಗಾಳಿಗಳು ಮತ್ತು ಬಳ್ಳಾರಿ ಜಿಲ್ಹೆಗೆ ಮೇಲಿಂದ ಮೇಲೆ ಬಿದ್ದ ಬಲವಾದ ಪೆಟ್ಟುಗಳೇ

ಇದಕ್ಕೆ ಸಾಕ್ಷಿ! ಈಗ ಅವುಗಳ 'ವಿವರಣೆ'ಯ ಆವಶ್ಯಕತೆ ಅಷ್ಟೊಂದು ಉಳಿದಿಲ್ಲ. ಇರಲಿ ಸ್ವತಃ ಕರ್ನಾಟಕವೇ ಒಡೆದು ಎರಡು ಪ್ರದೇಶ ಕಾಂಗ್ರೆಸ್ಸು ಗಳಾದವು! ಇಡೀ ಕಾಂಗ್ರೆಸ್ಸಿಗೆ ನಮ್ಮ ದುರ್ದಸೆಯ ಅರಿವು ಸಾಕಷ್ಟು ಆಗ ಲಿಲ್ಲ. ಆದಕ್ಕೆ ಅದೂ ಉದಾಸೀನವಾಯಿತು! ಅಂತೇ ನಮ್ಮ ಪ್ರಶ್ನೆಯು ಮತ್ತಿಷ್ಟು ಮುಂದೆ ಬಿದ್ದಿತ್ತು. ಇದೀಗ ಕಾಂಗ್ರೆಸ್ಸಿಗೆ ಅರಿವು ಆದದ್ದರಿಂದ ನಮಗೆ ನಮ್ಮ ರಾಜ್ಯ ಸಿಕ್ಕಿತು.



# ೪ನೆಯ ಪ್ರಕರಣ

## ಭಾಷಾನ್ವಯ ಪ್ರಾಂತರಚನೆಯೂ ಕರ್ನಾಟಕವೂ

ಭಾಷಾನುಗುಣ ಪ್ರಾಂತರಚನೆಯ ಬಗ್ಗೆ ನಾನು ನನ್ನ ಕರ್ನಾಟಕ ಗತ ವೈಭವದಲ್ಲಿಯೇ ಹೀಗೆಂದು ಬರೆದಿರುವೆ: "ಆದರೆ, ಅವಶ್ಯವಿದ್ದಲ್ಲಿ, ರಾಷ್ಟ್ರ ವನ್ನು ಭಾಷಾತತ್ವದ ಮೇಲೆ ವಿಭಾಗಿಸಿ, ಆಯಾ ಭಾಷಾಪ್ರಾಂತದ ಜನರು ಗುಂಪಾಗಿ ಸೇರಿ, ತಮ್ಮ ತಮ್ಮ ಉನ್ನತಿಯನ್ನು ಮಾಡಿಕೊಳ್ಳುವದು ರಾಷ್ಟ್ರೀ ಯತ್ವಕ್ಕೆ ಪೋಷಕವಾದ ಉಪಾಯವೆಂದೂ ರಾಷ್ಟ್ರೋದ್ಧಾರಕ್ಕೆ ಅನುಕೂಲ ವಾದ ಸಂಗತಿಯೆಂದೂ, ಬೇರೆ ವಿಧವಾಗಿ ಭೇದಗಳನ್ನು ಕಲ್ಪಿಸುವುದಾಗಲಿ, ಇದಕ್ಕಿಂತ ಚಿಕ್ಕ ಚಿಕ್ಕ ವಿಭಾಗಗಳನ್ನು ಮಾಡುವುದಾಗಲಿ, ಅನಾವಶ್ಯಕವೂ ರಾಷ್ಟ್ರೀಯತ್ವಕ್ಕೆ ವಿಘಾತಕವೂ ಆಗಿರುವುದೆಂದೂ ಇತ್ತಿತ್ತ ವಿಚಕ್ಷಣರಾದ ವಿದ್ವಾಂಸರು ಸಿದ್ಧಾಂತಪಡಿಸಿದ್ದಾರೆ."

ಕರ್ನಾಟಕ ಗತವೈಭವ ಪು. ೩.

ಇದರ ಮೇಲಿಂದ ಭಾಷಾನ್ವಯ ಪ್ರಾಂತರಚನೆಯ ಮುಖ್ಯ ಉದ್ದೇ ಶವೂ ಆ ಪ್ರಶ್ನೆಗೆ ಇರತಕ್ಕ ಪರಿಮಿತಿಯೂ ಗೊತ್ತಾಗುತ್ತವೆ. ಏಕಭಾಷೆ ಯಿರುವ ಪ್ರದೇಶವೆಲ್ಲವೂ ಒಂದೇ ಆಡಳಿತದಲ್ಲಿ ತರಲ್ಪಡುವದೇ ಆಡಳಿತದ ದೃಷ್ಟಿಯಿಂದ ಭಾರತಕ್ಕೂ ಪ್ರಾಂತಗಳಿಗೂ ಹಿತಕರವಾಗಿದೆಂಬುದನ್ನೂ ಕೂಡ ಆ ಕಾಲಕ್ಕೇನೇ ಹೇಳಿರುವೆ. ಇದರಿಂದ ಮೈಸೂರ ಪ್ರಾಂತ ಬೇರೆ, ಮಿಕ್ಕ ಕರ್ನಾಟಕ ಬೇರೆ ಎಂಬುದಾಗಿ ಇತ್ತೀಚೆಗೆ ಕೆಲ ವಿಕ್ಷಿಪ್ತ ಮೈಸೂರಿಗರು ಎತ್ತಿದ ವಾದವು ಅನುಚಿತವಾದುದೆಂಬುದು ಗೊತ್ತಾಗುತ್ತದೆ. ನನ್ನ ಸುದೈವದಿಂದ ನನ್ನ ಕಾಲದಲ್ಲಿ ಈ ವಿಲಕ್ಷಣ ಕಲ್ಪನೆಯನ್ನು ಆಗಿನ ಮೈಸೂರಿಗರು ಎತ್ತಿರ ಲಿಲ್ಲ. ತದ್ವಿರುದ್ಧವಾಗಿ ಅನೇಕ ತರುಣ ಮಿತ್ರರು ನನಗೆ ಹೃತ್ಪೂರ್ವಕ ಬೆಂಬಲ ಕೊಟ್ಟರು. ಅಂತೇ ನಾನು ಅಖಂಡ ಕರ್ನಾಟಕದ ಕಲ್ಪನೆಯನ್ನು ಇಡೀ ಕರ್ನಾಟಕದಲ್ಲಿ ಬಿತ್ತಲು ಸಮರ್ಥನಾದೆನು.

ಭಾಷಾನ್ವಯವಾಗಿ ಕರ್ನಾಟಕ ಪ್ರಾಂತರಚನೆಯನ್ನು ಮಾಡುವ ಕಲ್ಪನೆಯು ಬಹುಶಃ ಎಲ್ಲಕ್ಕೂ ಮುಂಚೆ ನನ್ನಲ್ಲಿಯೇ ಒಡಮೂಡಿತೆನ್ನಬಹುದು. ಆಂಧ್ರರೂ ಅಖಂಡ ಆಂಧ್ರಪ್ರಾಂತನಿರ್ಮಾಣದ ಚಳವಳಿಯನ್ನೂ ಅದೇ ಸುಮಾರಕ್ಕೆ ಹೂಡಿದರು. ಆದರೆ ಅವರಲ್ಲಿ ಆ ಕಲ್ಪನೆ ಒಡಮೂಡಲಿಕ್ಕೆ ಉಂಟಾದ ಕಾರಣ ಬೇರೆ; ನನ್ನಲ್ಲಿ ಒಡಮೂಡಲಿಕ್ಕೆ ಉಂಟಾದ ಕಾರಣ ಬೇರೆ. ತೆಲುಗರೆಲ್ಲರೂ ಬಹುಸಂಖ್ಯಾಕರಾಗಿ ಮದ್ರಾಸ ಇಲಾಖೆಯಲ್ಲಿಯೇ ವಾಸಮಾಡುತ್ತಿದ್ದರು. ಹೀಗಿದ್ದರೂ ಅವರ ಮೇಲೆ ತಮಿಳರ ವರ್ಚಸ್ಸು. ಆದರಿಂದ ಅವರು ನೊಂದುಕೊಂಡಿದ್ದರು. ಮಹಾರಾಷ್ಟ್ರದಲ್ಲಿ ನಾಲ್ಕೈದು ತೆಲುಗು ಜಿಲ್ಹೆಗಳು, ಹೈದರಾಬಾದ ಸಂಸ್ಥಾನದಲ್ಲಿ ಆರೇಳು ತೆಲುಗು ಜಿಲ್ಹೆಗಳು ಹೀಗಿದ್ದವು. ಆದರೆ ಆ ಕಾಲದಲ್ಲಿ ಅವುಗಳ ಪ್ರಶ್ನೆಯೇ ಏಳುವಂತಿದ್ದಿಲ್ಲ. ರಾಜಧಾನಿ ಪಟ್ಟಣವಾದ ಮದ್ರಾಸ ನಗರವು ತಮಿಳರ ಕೈಯಲ್ಲಿದ್ದ ಕಾರಣ ಆಂಧ್ರರಿಗೆ ಆಡಳಿತದಲ್ಲಿ ಯೋಗ್ಯ ಸ್ಥಾನವಿರಲಿಲ್ಲ. ಪ್ರತ್ಯೇಕ ಪ್ರಾಂತವಾಗುವಷ್ಟು ಜನಸಂಖ್ಯೆ ಇರುವದೆಂಬ ಕಾರಣದಿಂದ ತಮಗೆ ಪ್ರಾಂತ ಬೇಕೆಂಬುದು ಆಂಧ್ರರ ವಾದದ ಮೂಲ. ಇದಕ್ಕೆ ತೀರ ವಿರುದ್ಧವಾಗಿ ಕರ್ನಾಟಕ ಪ್ರಾಂತದ ವಾದ. ಬಹುಸಂಖ್ಯಾಕರಿದ್ದ ಕಾರಣ ನಮಗೆ ಬೇರೆ ಪ್ರಾಂತ ಬೇಕೆಂದು ನಾವು ಕೇಳಲಿಲ್ಲ! ಆದರೆ ಕನ್ನಡಿಗರು ಎಲ್ಲ ಕಡೆಗೂ ಚಲ್ಲಾಪಿಲ್ಲಿಯಾಗಿ ಹೋಗಿ ಎಲ್ಲೆಡೆಗೂ ಕನ್ನಡಿಗರು ಅಲ್ಪಸಂಖ್ಯಾಕರಿದ್ದು ಯಾವ ಸರಕಾರದಲ್ಲಿಯೂ ನಮಗೆ ಸ್ಥಾನವೇ ಇಲ್ಲವೆಂಬ ಕಾರಣದಿಂದ ನಾವು ಅಖಂಡ ಕರ್ನಾಟಕವನ್ನು ನಿರ್ಮಿಸಿ ನಮಗೆ ಪ್ರತ್ಯೇಕ ಪ್ರಾಂತ ಕೊಡಬೇಕೆಂದು ಕೇಳಿದೆವು. ಹೀಗೆ ಆಂಧ್ರರೂ ಕರ್ನಾಟಕರೂ ವಿರುದ್ಧ ದಿಶೆಯಿಂದ ಈ ವಾದವನ್ನು ಹೂಡಿದ್ದರೂ ಭಾಷಾನುಗುಣ ಪ್ರಾಂತರಚನೆಯು ಆಗಲೇಬೇಕೆಂಬ ವಾದವನ್ನು ಹೂಡುವದರಲ್ಲಿ ನಾವು ಒಂದಾದೆವು. ಅವರ ಪ್ರಶ್ನೆ ನಮಗಿಂತ ಹಗುರಾಗಿತ್ತು. ಆದರೆ ನಾವಿಬ್ಬರೂ ಕೂಡಿ ಚಳವಳಿಯನ್ನು ಹೂಡಿದ್ದರೂ ಅವರು ನಮ್ಮೊಬ್ಬರನ್ನು ಬಿಟ್ಟು, ತಾವೊಬ್ಬರೇ ಪ್ರತ್ಯೇಕ ಪ್ರಾಂತ ಗಳಿಸಿದ್ದು ಅವರ ಸ್ವಾರ್ಥದ ಲಕ್ಷಣವು. ಇರಲಿ.

ನಾನು ೧೯೧೦-೧೧ರ ಸುಮಾರಕ್ಕೆ ಬಳ್ಳಾರಿಯಲ್ಲಿ ಕೂಡಿದ **ಆಂಧ್ರ ಸಾಹಿತ್ಯಸಮ್ಮೇಲನಕ್ಕೆ** ಮುದ್ದಾಂ ಹೋಗಿದ್ದೆ. ಏಕೆಂದರೆ ಬಳ್ಳಾರಿಯು ಕನ್ನಡ ಜಿಲ್ಹೆಯಿದ್ದು, ಅಲ್ಲಿ ಹೇಗೆ ಆಂಧ್ರ ಸಮ್ಮೇಲನ ಕೂಡಿತೆಂಬುದನ್ನು

ನನಗೆ ನೋಡಬೇಕಾಗಿತ್ತು ! ಅಲ್ಲಿಗೆ ಹೋದೆ; ಆಂಧ್ರ ಸಮ್ಮೇಲನವನ್ನು ನೋಡಿದೆ. ಅಲ್ಲಿ ನನಗೆ ಕಾಣಿಸಿದ ಚಮತ್ಕಾರವೇನೆಂದರೆ, ಆ ಆಂಧ್ರ ಸಾಹಿತ್ಯ ಸಮ್ಮೇಲನವನ್ನು ನಡೆಯಿಸಿದ ಮುಖಂಡರಲ್ಲಿ ಅನೇಕರು ಕನ್ನಡಿಗರೇ; ಭಾಷಣ ಕಾರರಲ್ಲಿಯೂ ಕೆಲವರು ಕನ್ನಡಿಗರು. ಸಮ್ಮೇಲನದಲ್ಲಿ ಒಳಗೆ ಮಾತ್ರವೇ ಅವರ ಮಾತು ತೆಲುಗಿನಲ್ಲಿ; ಮಂಟಪದ ಹೊರಗೆ ಬಂದೊಡನೆ ಅನೇಕರು ತಮ್ಮ ಮಾತೃಭಾಷೆಯಾದ ಕನ್ನಡದಲ್ಲಿ ಮಾತಾಡುವವರೇ. ಇದನ್ನು ನೋಡಿ ನನಗೆ ಆತ್ಯಾಶ್ಚರ್ಯವಾಯಿತು. ಆ ಆಂಧ್ರ ಸಾಹಿತ್ಯಸಮ್ಮೇಲನಕ್ಕೆ ಬಂದವ ರಲ್ಲಿ ತೆನ್ನಾಲಿಯ ಆಂಧ್ರ ವಕೀಲರೊಬ್ಬರು ನನ್ನ ಪರಮ ಮಿತ್ರರು. ಅವರೂ ನಾನೂ ಕಾಂಗ್ರೆಸ್ಸಿನಲ್ಲಿ ಕೂಡಿ ಕೆಲಸ ಮಾಡುತ್ತಿದ್ದದರಿಂದ ನಮ್ಮಿಬ್ಬರಲ್ಲಿ ಸ್ನೇಹ ವುಂಟಾಗಿತ್ತು. ಅವರಿಗೆ ನಾನು ಈ ವಿಲಕ್ಷಣ ಸ್ಥಿತಿ ತಿಳಿಸಿದೆ. ಅವರಿಗೆ ಪರಮಾಶ್ಚರ್ಯವಾಯಿತು ! ಇವರು ಕನ್ನಡಿಗರಿದ್ದು ಹೀಗೆ ಮಾತೃಭಾಷೆ ಮರೆತು ತೆಲುಗಿನಲ್ಲಿ ಮಾತನಾಡುವದು ಎಷ್ಟು ಅಭಿಮಾನಶೂನ್ಯತೆ ಎಂದು ಅಂದರು. ಅದಕ್ಕೆ ಅಲ್ಲಿಯ ತೆಲುಗು ವಾತಾವರಣವೇ ಕಾರಣವಾಗಿರಬೇಕೆಂದು ಹೇಳಿದೆ. ಮತ್ತು ಆ ಜಿಲ್ಹೆಯ ಪರಿಸ್ಥಿತಿಯನ್ನು ಅಭ್ಯಾಸಮಾಡಿದೆ. ಅನೇಕ ಕಡೆಗೆ, ಮನೆಯಲ್ಲಿ ಮಾತಾಡುವದು ಕನ್ನಡ! ಪ್ರಾಥಮಿಕ ಶಾಲೆಯಲ್ಲಿ ಕಲಿ ಯುವದು ತೆಲುಗು ! ಬಳ್ಳಾರಿ ಜಿಲ್ಹೆಯ ಶಿಲಾಲಿಪಿ ಮುಂತಾದವುಗಳನ್ನೆಲ್ಲ ಅಭ್ಯಾಸ ಮಾಡಿದೆ. ಮತ್ತು ಅವುಗಳ ಮೇಲಿಂದ ಇಡೀ ಬಳ್ಳಾರಿ ಜಿಲ್ಹೆಯು ಕನ್ನಡ ಜಿಲ್ಹೆಯೆಂದು ಸಿದ್ಧಪಡಿಸಿ ಲೇಖ ಬರೆದೆ. ಆ ಕಾಲಕ್ಕೆ ಕರ್ನಾಟಕ ಪ್ರಾಂತನಿರ್ಮಾಣದ ಆವಶ್ಯಕತೆಯು ನನ್ನ ಮನದಲ್ಲಿ ಮತ್ತಿಷ್ಟು ದೃಢವಾಗಿ ಬೇರೂರಿತು. ಧಾರವಾಡಕ್ಕೆ ತಿರುಗಿ ಬಂದ ಬಳಿಕ ಕಡಪಾ ರಾಘವೇಂದ್ರ ರಾಯರಿಗೆ ಈ ವಿಪರೀತ ಸ್ಥಿತಿ ತಿಳಿಸಿದೆ. ಅವರ ಸ್ಥಿತಿಯೂ ಹಾಗೇ ಇತ್ತು. ಅವರು ಮೂಲತಃ ಇದ್ದದ್ದು ಧಾರವಾಡದಲ್ಲಿ ಅಲ್ಲ; ಬಳ್ಳಾರಿ ಅನಂತಪುರದ ಕಡೆಗೆ. ಅವರು ಮನೆಯಲ್ಲಿ ಮಾತಾಡುವದು ಕನ್ನಡ. ಕಲಿತದ್ದು ತೆಲುಗು ! ಆಗ ಅವರ ಕಣ್ಣುಗಳು ತೆರೆದವು. ಮತ್ತು ಅಂದಿನಿಂದ ಅವರ ಮನದಲ್ಲಿಯೂ ಕರ್ನಾಟಕ ಏಕೀಕರಣದ ಆವಶ್ಯಕತೆ ಮೆಲ್ಲಮೆಲ್ಲನೆ ಮೂಡಲಾರಂಭಿಸಿತು. ಮತ್ತು ಅವರು ನನ್ನನ್ನು ಮುಂದೆ ಕೆಲವು ವರ್ಷಗಳ ನಂತರ ಕೂಡಿಕೊಂಡ ಬಳಿಕ, ನಾವಿಬ್ಬರೂ ಕೂಡಿ ಆಂಧ್ರದೇಶಕ್ಕೆ ಮುದ್ದಾಂ ಹೋಗಿ, ಕಡಪೆಯಲ್ಲಿ

ಕೂಡಿದ ಆಂಧ್ರ ಏಕೀಕರಣ ಸಮ್ಮೇಲನವನ್ನು ನೋಡಿ ಅಲ್ಲಿಯ ಮುಖಂಡ ರನ್ನು ಕಂಡುಬಂದೆವು. ಆ ಕಾಲದಲ್ಲಿಯ ಮತ್ತೊಂದು ಚಮತ್ಕಾರವೇನೆಂದರೆ, ತೆಲುಗಿನಲ್ಲಿಯ ನಾಟಕ ಕಂಪನಿಗಳಲ್ಲಿ ಮುಖ್ಯವಾದ ಅಮೇಚ್ಯುರ ನಾಟಕ ಕಂಪನಿಗಳು ಹೊರಟದ್ದು ಬಳ್ಳಾರಿ ಜಿಲ್ಹೆಯಲ್ಲಿಯೇ. ಇಷ್ಟೇ ಅಲ್ಲ, ಹೊಸ ಪೇಟೆಯ ರಾ. ಬ. ಹನುಮಂತಗೌಡರಂಥ ಕನ್ನಡಿಗರೂ ತೆಲುಗಿನಲ್ಲಿ ಅಮೇ ಚೂರ ಕಂಪನಿ ತೆಗೆದವರು ! ಅವರ ನಾಟಕ ಕಂಪನಿಯ ಸಂಗಡಲೇ ನಾನೂ ರಾಘವೇಂದ್ರರಾಯರೂ ಆಂಧ್ರದೇಶಕ್ಕೆ ಹೋಗಿದ್ದೆವು. ಮುಂದೆ ಆ ಹನು ಮಂತಗೌಡರೇ ಕರ್ನಾಟಕ ಏಕೀಕರಣದ ಅತ್ಯಂತ ಉಜ್ವಲ ಭಕ್ತರೂ ಏಕ ನಿಷ್ಠ ಮುಖಂಡರೂ ಆದರು.

**'ಕರ್ನಾಟಕದ' ಹೆಸರಿನ ಬಗ್ಗೆ :— ಕರ್ನಾಟಕ** ಹೆಸರಿನ ಬಗ್ಗೆ ಎಂದೂ ವಾದವಿರಲಿಲ್ಲ. ಕರ್ನಾಟಕ ಎನ್ನಬೇಕೋ ಕರ್ಣಾಟಕವೆನ್ನಬೇಕೋ ಎಂಬ ಬಗ್ಗೆ ಸಾಹಿತ್ಯಪರಿಷತ್ತು ಸ್ಥಾಪನೆಯಾದಾಗ ಚರ್ಚೆಯಾಗಿ ಅವರವರು ಇಷ್ಟಬಂದ ಹಾಗೆ ಅವುಗಳಲ್ಲಿ ಯಾವದೊಂದನ್ನು ಉಪಯೋಗಿಸಬಹುದೆಂದು ತೀರ್ಮಾನವಾಯಿತು. ಹಳೆಯ ಪಂಡಿತರು ಮಾತ್ರ ಕರ್ಣಾಟಕ ಎಂಬುದು ಸಂಸ್ಕೃತ ಪದವೆಂದು ತಿಳಿದು ಅದನ್ನು ಉಪಯೋಗಿಸುತ್ತಿದ್ದರು. ಮಿಕ್ಕವ ರೆಲ್ಲರೂ ಕರ್ನಾಟಕವೆಂಬ ರೂಢಪ್ರಯೋಗವನ್ನು ಉಪಯೋಗಿಸುತ್ತಿದ್ದರು. ಆದರೆ ಯಾರೂ ಕರ್ನಾಟಕ ಶಬ್ದವನ್ನು ಪೂರಾ ಕಿತ್ತಿ ಹಾಕುವದನ್ನು ಕನಸು ಮನಸಿನಲ್ಲಿ ಕೂಡ ತಂದಿರಲಿಲ್ಲ. ಇದು ಇತ್ತೀಚಿನ ಕೆಲ ವೃಥಾಭಿಮಾನಿಗಳಾದ ಮೈಸೂರಿನವರ ವಾದವು. ನಾನು ಆ ವಾದದ ಬಗ್ಗೆ ಇಲ್ಲಿ ಬರೆಯಲಿಚ್ಛಿಸುವ ದಿಲ್ಲ. ಏಕೆಂದರ ನಾನು ಇತ್ತೀಚೆಗೆ ಕೆಲ ವರ್ಷಗಳಿಂದ ಸ್ವಸ್ಥ ಮನೆಯಲ್ಲಿ ಕುಳಿತಿರುವೆ. ಆದರೆ ಇಷ್ಟು ಮಾತ್ರ ಖಂಡಿತವಾಗಿ ಹೇಳಬಲ್ಲೆ. ಏನೆಂದರೆ ಯಾರು ಎಷ್ಟೇ ಪ್ರಯತ್ನ ಮಾಡಿದರೂ "**ಕರ್ನಾಟಕ**" ಶಬ್ದವನ್ನು ರೂಢಿ ಯೊಳಗಿಂದ ಕಿತ್ತಿಹಾಕುವದು ಯಾರಿಗೂ ಶಕ್ಯವಿಲ್ಲ. ಹಾಗೆ ಅದು ಹೋದರೆ ಅದು ಕನ್ನಡಿಗರ ಮನೋದೌರ್ಬಲ್ಯದ ಪರಿಣಾಮವಾದೀತು ! "**ಕರ್ನಾಟಕ**" ಶಬ್ದದ ಬದಲು "ಮೈಸೂರು" ಶಬ್ದವನ್ನು ತರುವದಂತೂ ಕೇವಲ ದಾಸ್ಯ ಮನೋವೃತ್ತಿಯ ದ್ಯೋತಕ ! "ಮೈಸೂರು" ಶಬ್ದದಲ್ಲಿ ಅಂಥ ಯಾವ ದೊಡ್ಡ ಗುಣವಿರುವದೆಂದು ಅದನ್ನು ಉಪಯೋಗದಲ್ಲಿ ತರಬೇಕೆನ್ನುತ್ತಾರೆಂಬುದು

ದೇವರೊಬ್ಬನೇ ಬಲ್ಲ! ಅಥವಾ ದೇವರಿಗೂ ಕೂಡ ಗೊತ್ತಿರಲಿಕ್ಕಿಲ್ಲ! ಆ ಶಬ್ದದ ಬಗ್ಗೆ ಮತ್ತೊಂದು ನನ್ನ ಆಕ್ಷೇಪವೆಂದರೆ ಆ ಶಬ್ದವು ನಮ್ಮ ದಾಸ್ಯ ವೃತ್ತಿಯ ದ್ಯೋತಕವು! ಮೈಸೂರ ಸಂಸ್ಥಾನವನ್ನು ಬ್ರಿಟಿಶರು ದಾನವಾಗಿ ಕೊಟ್ಟಿರುತ್ತಾರೆ! ತಮಗೆ ಸದಾ ಸೇವಕರಾಗಿರಬೇಕೆಂಬ ದುರುದ್ದೇಶದಿಂದ ಕೊಟ್ಟಿದ್ದರೆಂಬುದನ್ನೂ, ನಾವು ನಮ್ಮ ಸ್ವಂತ ಪೌರುಷದಿಂದ ಗಳಿಸಿದ್ದಲ್ಲವೆಂಬ ಸತ್ಯವಿಧಾನವನ್ನೂ—ಅವು ಎಷ್ಟೇ ಕಟುವಾಗಿದ್ದರೂ—ಮರೆಮಾಚಿ ಪ್ರಯೋಜನವಿಲ್ಲ! ಈ ಹೊಸ ಶಬ್ದವು ಕರ್ನಾಟಕದಷ್ಟು ವ್ಯಾಪಕವೂ ಅಲ್ಲ ದ್ಯೋತಕವೂ ಅಲ್ಲವೆಂಬುದನ್ನಂತೂ ಹೇಳುವ ಕಾರಣವೇ ಇಲ್ಲ. ನಮ್ಮ ಪ್ರಾಚೀನ ಇತಿಹಾಸದ ದೃಷ್ಟಿಯಿಂದ ನೋಡಿದರೆ ಹಿಂದಕ್ಕೆ ಅದು ಕರ್ನಾಟಕವೆಂದೇ ಕರೆಯಲ್ಪಡುತ್ತಿತ್ತು. ರಾಷ್ಟ್ರಕೂಟ ಸೈನ್ಯಕ್ಕೆ "ಕರ್ಣಾಟಕ ಬಲ"ವೆಂದೇ ಕರೆಯುತ್ತಿದ್ದರು. ನಾನು ಹಿಂದಕ್ಕೆ ಅನೇಕ ವರ್ಷ ಇತಿಹಾಸದ ಅಭ್ಯಾಸ ಮಾಡಿ ನನ್ನ ಗ್ರಂಥಕ್ಕೆ "ಕರ್ನಾಟಕ ಗತವೈಭವ" ಎಂದು ಹೆಸರಿಟ್ಟಿರುವೆನು. ಇನ್ನು ಈ ಹೊಸ ರಾಜ್ಯ ಸರಕಾರದವರು ಅದನ್ನು ಕಿತ್ತಿಹಾಕಿ 'ಮೈಸೂರ ಗತವೈಭವ' ಎಂಬುದಾಗಿ ನಮ್ಮ ನಾಡಿನ ಹೊಸ ಇತಿಹಾಸವನ್ನು ಬರೆಯಿಸುವರೋ ಏನೊ ನೋಡಬೇಕಾಗಿದೆ! ಹಾಗೆ ಹೇಳಬೇಕಾದರೆ "**ಕರ್ನಾಟಕ**" ಶಬ್ದವನ್ನು ಕರ್ನಾಟಕತ್ವದ "**ಚಳವಳಿ**"ಯಲ್ಲಿ ವಿಶೇಷವಾಗಿ ರೂಢಿಯಲ್ಲಿ ತಂದವನು ನಾನೆಂದೇ ಹೇಳಬಹುದು. ಬಹಳ ವಿಚಾರಪೂರ್ವಕವಾಗಿ ಹಾಗೆ ಮಾಡಿರುವೆನು. "ಕರ್ನಾಟಕ ವಿದ್ಯಾವರ್ಧಕ"ವೆಂಬ ಹೆಸರನ್ನು ನಮ್ಮ ಹಿರಿಯರು ನನಗಿಂತ ಮುಂಚೆ ಉಪಯೋಗಿಸಿದ್ದರೆಂಬುದೇನೋ ನಿಜ. ಆದರೆ ಆಗ ಆ ಶಬ್ದಕ್ಕೆ ಕನ್ನಡ ಭಾಷೆ ಎಂಬುದಷ್ಟೇ ಅರ್ಥವು ಕೊಡಲ್ಪಟ್ಟಿತ್ತು. ನಾನು "**ಕರ್ನಾಟಕ** ಚಳವಳಿ"ಯನ್ನು ಪ್ರಾರಂಭ ಮಾಡಿ **ಕರ್ನಾಟಕ ಗತವೈಭವ** ಬರೆದಾಗಿನಿಂದ ಆ ಶಬ್ದವು ಸಾರ್ವತ್ರಿಕ ಶಬ್ದವಾಯಿತು. ಮತ್ತು ಯಾವದೇ ಅಖಿಲ ಕರ್ನಾಟಕ ಪ್ರದೇಶಸಂಸ್ಥೆ ಹೊರಟರೂ ಅದಕ್ಕೆ ಕರ್ನಾಟಕವೆಂಬ ಶಬ್ದವಿಡುವದು ರೂಢವಾಯಿತು. ಆ ಹೆಸರಿನಿಂದ ನೂರಾರು ಸಂಸ್ಥೆಗಳು ಹೊರಟಿವೆ. ಆದ ಕಾರಣ ಯಾರು ಎಷ್ಟೇ ಪ್ರಯತ್ನಪಟ್ಟರೂ ಅದನ್ನು ಅಳಿಸಿಬಿಡುವದು ಶಕ್ಯವೂ ಅಲ್ಲ, ಇಷ್ಟವೂ ಅಲ್ಲ ಎಂಬುದನ್ನು ಅದರ ವಿರೋಧಿಗಳು ಮರೆಯದಿರಲಿ!

ಕರ್ನಾಟಕ ಶಬ್ದಕ್ಕೇನೇ ನೀವು ಇಷ್ಟೊಂದು ಅಂಟಿಕೊಳ್ಳುವದೇಕೆ? ಹೆಸರಿನಲ್ಲೇನಿದೆ? ಎಂದು ವಿರೋಧಿಗಳು ಆಕ್ಷೇಪಿಸಬಹುದು. "ಅಂದ ಬಳಿಕ ನೀವೇಕೆ ಮೈಸೂರ ಶಬ್ದದ ಬಗ್ಗೆ ಆಗ್ರಹ ಹಿಡಿಯುತ್ತೀರಿ?" ಎಂದು ನಾವು ಅವರನ್ನು ತಿರುಗಿ ಕೇಳುತ್ತೇವೆ. ಅಲ್ಲದೆ ನಾವು ಕರ್ನಾಟಕ ಶಬ್ದದ ಬಗ್ಗೆ ಆಗ್ರಹ ಹಿಡಿಯಲಿಕ್ಕೆ ನಮಗೆ ಸಬಲ ಕಾರಣಗಳಿವೆ. ಹಾಗೆ ನಿಮಗೆ ಇಲ್ಲ. ಇನ್ನು ನನ್ನ ಮಟ್ಟಿಗೆ ಹೇಳುವದಾದಲ್ಲಿ ನಾನು ಅದೊಂದು ಶಬ್ದದ ಬಲದಿಂದಲೇ ಕನ್ನಡ ನಾಡಿನಲ್ಲೆಲ್ಲ ಕರ್ನಾಟಕತ್ವದ ವಿಚಾರಗಳನ್ನು ಹರಡಲು ಸಮರ್ಥನಾದೆನು. ನಾನು ನನ್ನ ಕರ್ನಾಟಕ ಗತವೈಭವದಲ್ಲಿ "ಕರ್ನಾಟಕ" ಶಬ್ದದ ಬಗ್ಗೆ ಹೀಗೆಂದು ಬರೆದಿರುವೆನು. "ಕನ್ನಡಿಗರೇ '**ಕರ್ನಾಟಕ**' ಎಂಬ ಒಂದು ಶಬ್ದದಲ್ಲಿ ಎಂಥ ಅದ್ಭುತವಾದ ಮಾಂತ್ರಿಕ ಶಕ್ತಿಯು ತುಂಬಿರುತ್ತದೆಂಬುದನ್ನು ಲಕ್ಷ್ಯಕ್ಕೆ ತನ್ನಿರಿ! ಕರ್ನಾಟಕದ ಅರಸರು ಹೋದರು! ವೈಭವವು ಹೋಯಿತು! ಆದರೆ '**ಕರ್ನಾಟಕ**'ವೆಂಬ ಶಬ್ದವು ಮಾತ್ರ ಇನ್ನೂ ಉಳಿದಿದೆ. ಅದು ದ್ರೌಪದಿಯ ಅಕ್ಷಯ ಪಾತ್ರೆಯೊಳಗಿನ ಆಗುಳಿನಂತಿರುತ್ತದೆ. ಶ್ರೀಕೃಷ್ಣ ಪರಮಾತ್ಮನ ಕೃಪೆಯಿಂದ ನಾವು ಇದೊಂದು ಅಗುಳಿನಿಂದ ಸಾವಿರಾರು ಜನರ ಹಸಿವೆಯನ್ನು ಹಿಂಗಿಸಬಹುದು. ಆದ ಕಾರಣ ಕನ್ನಡಿಗರೇ ಕರ್ನಾಟಕ ಸಂಸ್ಕೃತಿ ಎಂಬ ಗುಪ್ತಗಾಮಿನಿಯಾದ ಗಂಗೆಯನ್ನು ಮೇಲಕ್ಕೆ ಎತ್ತೋಣ! ಏಳಿರಿ. ಇದೀಗ ನಿಮ್ಮ ಮುಖ್ಯ ಕರ್ತವ್ಯವು."

—ಕರ್ನಾಟಕ ಗತವೈಭವ ೧೬ನೆಯ ಪ್ರಕರಣ ಪು. ೧೩೨.

ನಿಜವಾಗಿ ಹೇಳುವದಾದರೆ ಮೈಸೂರಿನವರಿಗೂ ಮಿಕ್ಕ ಕರ್ನಾಟಕದವರಿಗೂ ಕೂಡ ಈ ಕರ್ನಾಟಕ ಶಬ್ದವು ಅತ್ಯಂತ ಪ್ರಿಯವಾದ ಶಬ್ದವು. ಜನತೆಯೂ ಮುಖಂಡರೂ ಅದಕ್ಕೆ ಎಂದೂ ವಿರುದ್ಧ ಹೋಗಿಲ್ಲ! ಕರ್ಣಾಟಕ ಶಬ್ದವು ಕರ್ಣಕಠೋರ; ಬರೆಯಲು ಬಿಗಿ; ಉಚ್ಚರಿಸಲೂ ಶ್ರಮ. ಶ್ರೀ. ಬಿ. ಎಮ್. ಶ್ರೀಕಂಠಯ್ಯನವರಂಥ ಮೈಸೂರು ಅಭಿಮಾನಿಗಳೂ ಉಜ್ವಲ ಸಾಹಿತಿಗಳೂ **ಕರ್ನಾಟಕ** ಶಬ್ದಕ್ಕೇನೇ ತಮ್ಮ ಬೆಂಬಲವನ್ನು ಕೊಟ್ಟಿದ್ದರೆಂಬುದನ್ನು ಮೈಸೂರಿನವರು ಮರೆಯದಿರಲಿ.

ಕಾಂಗ್ರೆಸ್ ಸರಕಾರಕ್ಕೆ ಇತ್ತೀಚೆಗೆ ಭಾಷೆಯ ಅಭಿಮಾನ ಹಿಡಿಯುವವರ ಬಗ್ಗೆ ತಿರಸ್ಕಾರ ಬುದ್ಧಿ ಹುಟ್ಟಿದೆ ಎಂಬುದು ನನಗೆ ಗೊತ್ತಿದೆ. ಇದಕ್ಕೆ ಇತ್ತೀಚಿನ ಮುಂಬಯಿಯ ಘಟನೆಗಳೇ ಕಾರಣವಾಗಿರುವವಲ್ಲದೆ, ಭಾಷಾನುಗುಣ ಪ್ರಾಂತತ್ವವು ತಪ್ಪಿರುವದೆಂದು ಅವರು ತಿಳಿದಿರುವದಿಲ್ಲ. ಅಹುದು. ನಾವೂ ಒಪ್ಪುತ್ತೇವೆ. ಸದಭಿಮಾನವೂ ಅತಿರೇಕವಾದರೆ ಅದು ದುರಭಿಮಾನವಾಗುತ್ತದೆ. ಮಿತಿಮೀರಿದ ಅತಿರೇಕಭಾವನೆ— ಮೂಲತಃ ಸದ್ಭಾವನೆ ಇದ್ದರೂ— ತಿರಸ್ಕಾರಕ್ಕೆ ಪಾತ್ರವಾಗುತ್ತದೆ. ಅದು ಭಾಷೆ ಅಥವಾ ಜಾತಿಗಳಿಗಷ್ಟೇ ಹತ್ತುತ್ತದೆಂತಲ್ಲ! ತಾಯಿಯು ಮಗನ ಮೇಲೆ ಮಾಡುವ ಅತಿರೇಕ ಪ್ರೇಮವು ಕೂಡ ತಿರಸ್ಕರಣೀಯವೇ ಆಗುತ್ತದೆ. ಮಗನ ಮೇಲೆ ಅವರು ಅಚ್ಚೀಮಾಡಿ ( ಅಚ್ಚೆ = ಅತಿಶಯ ) ಆತನನ್ನು ಕೆಡಿಸಿದಳು ಎಂದು ನಾವು ಅನ್ನುವದಿಲ್ಲವೇ ? ಸ್ವತಃ ಕಾಂಗ್ರೆಸ್ಸಿನವರನ್ನೇ ತಕ್ಕೊಳ್ಳಿರಿ. ಮಿತಿಮೀರಿ ಪಕ್ಷಾಭಿಮಾನವನ್ನು ತಾಳುವದೂ "Congressism" ಆಗುತ್ತದೆ ಎಂಬುದನ್ನು ಕಾಂಗ್ರೆಸ್ಸಿನವರು ಮರೆಯದಿರಲಿ.

ನಾನಂತೂ ಕರ್ನಾಟಕತ್ವದ ಚಳವಳಿಯನ್ನು ಮಾಡುವಾಗ ಎಂದೂ ಮಿತಿಮೀರಿಲ್ಲ. ಇಷ್ಟೇ ಅಲ್ಲ. ಪ್ರತಿಯೊಂದು ಸಲ ಕರ್ನಾಟಕತ್ವಕ್ಕೂ ಕೂಡ ಒಂದು ಪರಿಮಿತಿ ಇದೆ ಎಂದೇ ಸಾರುತ್ತ ಬಂದಿರುವೆನಲ್ಲದೆ, ಆದರಂತೆ ನಡೆಯುತ್ತ ಬಂದಿರುವೆನು. ಬಹಳ ಹಿಂದೆಯೇ ದೇ. ಭ. ಗಂಗಾಧರರಾವ ದೇಶಪಾಂಡೆಯವರಿಗೆ ನಾನು ೧೪–೬–೧೯೨೪ರಲ್ಲಿ ಬರೆದ ಪತ್ರದಲ್ಲಿ ಹೀಗೆ ಬರೆದಿರುವೆನು. "In olden days, there was the patriotism for the mother tongue. In the new circumstances, country's tongue is more important than mother tongue. I dont quarrel with those who have not grasped this new idea ............ This is the reason in my opinion, why Maharastra people living in Karnatak can not adjust themselves to Karnatak.... The second reason is the idea that is contained in "**ಬೃಹನ್–ಮಹಾರಾಷ್ಟ್ರ**". Some portion of it, is, in my opinion, anti-national, and un-

less it is rooted out, there is no safety for Nationalism. It is sowing seeds of bad nationalism everywhere. The far-reaching effects of it are not yet foreseen by many. The third reason lies in the selfish temperament of Maharastrians as a whole. The merits and defects of Peshwas are still there.

But, I have a robust faith in an indegenious movement. No power on earth can take from us, what is ours........ You should oppose tooth and nail every attack in a dignified way........I want that you should realise that without the grouth of this Karnatak Movement, no real work in Karnatak is possible. Some, why many are under the impression that they can do political work without caring for this Karnatak spirit....In my opinion it is an illussion. I know full well that Non-Brahmins have now taken up the Karnatak movement from some other object. But, I am sure that in a few years the Non-Brahmin youths will take up this movement in the right spirit. If the Congress workers take up this movement, there will be no anti-nationalism in this movement. I am not anxious about the opposition of the few Maharastrians living in Karnatak. They are now actuated by the Pan-Maharastrian ideas, which I regard as anti-national. But, because they are suicidal to themselves in the long run, I care a bit about them.

—ನನ್ನ ಜೀವನಸ್ಮೃತಿಗಳು ಭಾಗ ೨, ಪು. ೧೮೧–೧೮೨.

**ಮೈಸೂರಿನವರ ಬಗ್ಗೆ** :— ಮೈಸೂರಿನವರು ತಾವು ಮಿಕ್ಕ ಭಾಗದವರಿಗಿಂತ ಶ್ರೇಷ್ಠರೆಂಬ ಭಾವನೆ ತಾಳಿದ್ದರು. ತಾಳುತ್ತಾರೆಂಬುದು ನನಗೆ ಮುಂಚಿನಿಂದಲೂ ಗೊತ್ತಿತ್ತು. ಹಾಗೆಯೇ ಮೈಸೂರಿನವರನ್ನು ಬಿಟ್ಟರೆ ನಮಗೆ ಗತಿಯಿಲ್ಲ ಎಂಬುದೂ ಗೊತ್ತಿತ್ತು. ಮಿಕ್ಕವರನ್ನು ಬಿಟ್ಟರೆ ತಮಗೂ ಗತಿಯಿಲ್ಲ ಎಂಬ ಮಾತನ್ನು ಮೈಸೂರಿನವರು ತಿಳಿಯತಕ್ಕದ್ದಿತ್ತು; ತಿಳಿಯಲಿಲ್ಲ ! ನನ್ನ ಆಯುಷ್ಯದ ಧ್ಯೇಯ, ಕೇವಲ ಪ್ರತ್ಯೇಕ ಪ್ರಾಂತವನ್ನು ಹೇಗಾದರೂ ಮಾಡಿ ಗಳಿಸಬೇಕೆಂದಿರದೆ, ಕನ್ನಡ ಮಾತಾಡುವ ಜನರು ಪ್ರಾಮುಖ್ಯದಿಂದ ಆಡುತ್ತಿದ್ದ ಎಲ್ಲ ಪ್ರದೇಶಗಳನ್ನು ಎಲ್ಲೆಲ್ಲಿ ಶಕ್ಯವಿದೆಯೋ ಅಲ್ಲಲ್ಲಿ, ಮುಂಚೆ ಒಂದೇ ಆಡಳತದಲ್ಲಿ ತಂದು ಅಖಂಡ ಕರ್ನಾಟಕವನ್ನು ನಿರ್ಮಿಸುವದೇ ಆಗಿತ್ತು. ಅಂತೇ ನಾನು ಉತ್ತರ ಕರ್ನಾಟಕಕ್ಕಾಗಿ ಅಥವಾ ಮೈಸೂರ ಮಾತ್ರಕ್ಕಾಗಿ ಒಂದು ಪ್ರತ್ಯೇಕ ವಿಶ್ವವಿದ್ಯಾಲಯವನ್ನು ಪಡೆಯುವದಕ್ಕೆ ವಿರುದ್ಧವಾಗಿದ್ದೆ. ಅವು ಬೇಡಾಗಿತ್ತೆಂದಲ್ಲ. ಮೊದಲು ಕೂಡೋಣ, ಹೃದಯಗಳನ್ನು ಬೆರೆಸೋಣ, ಶಕ್ಯವಾದಷ್ಟು ಐಕ್ಯತೆಯನ್ನು ಸಾಧಿಸೋಣ, ಎಂಬುದು ನನ್ನ ಮುಖ್ಯ ಧೋರಣವಾಗಿತ್ತು ! ಇನ್ನೂ ಆಗಿದೆ. ಸಾರಾಂಶ ಅಖಂಡ ಕರ್ನಾಟಕಕ್ಕಿಂತ ಕಡಿಮೆಯಾದ ಯಾವ ಧ್ಯೇಯಕ್ಕೂ ನಾನು ಹೃತ್ಪೂರ್ವಕ ಬೆಂಬಲ ಕೊಡಲಿಲ್ಲ. ಅಖಂಡ ಕರ್ನಾಟಕವು ಹುಟ್ಟುವದು ಮುಂಚೆ ಹೃದಯದಲ್ಲಲ್ಲವೇ ?

ಈ ನನ್ನ ಭಾವನೆಯನ್ನು ಮೈಸೂರಿನಲ್ಲಿಯ ಅನೇಕ ತರುಣರು ತಿಳಕೊಂಡಿದ್ದರು. ಇಷ್ಟೇ ಅಲ್ಲ, ಅಖಿಲ ಕರ್ನಾಟಕ ವಿಶ್ವವಿದ್ಯಾಲಯ ಕಲ್ಪನೆಗೆ ಮೂರ್ತಸ್ವರೂಪವನ್ನು ಕೊಡುವದರಲ್ಲಿ ಮುಂಚೆ ಮುಖಂಡತ್ವವನ್ನು ವಹಿಸಿದವರು ಕೂಡ ಅವರೇ. ಶ್ರೀ. ನಿಟ್ಟೂರ ಶ್ರೀನಿವಾಸರಾಯರೂ, ಶ್ರೀ. ಸಂಪದ್ಗಿರಿರಾಯರೂ ಮತ್ತು ಟಿ. ಟಿ. ಶರ್ಮಾರವರೂ ಮುಂತಾದವರೇ ಬಳ್ಳಾರಿಯಲ್ಲಿ ಈ ವಿಚಾರವನ್ನು ಪ್ರಚಾರಗೊಳಿಸಿ, ಅಂಥ ವಿಶ್ವವಿದ್ಯಾಲಯವನ್ನು ಸ್ಥಾಪಿಸುವ ಕೆಲಸದಲ್ಲಿ ನನ್ನನ್ನು ಕಾರ್ಯದರ್ಶಿಯನ್ನಾಗಿ ಮಾಡಿದವರು ಅವರು. ಆಗ ಅವರು ಮುದ್ರಿಸಿದ ಪುಸ್ತಕ ಈಗಲೂ ನನ್ನ ಹತ್ತರವಿದೆ. ಅದಕ್ಕೂ ಮುಂಚೆಯೂ ಕೂಡ ಮೈಸೂರಿನ ಜನತೆಯಲ್ಲಿ ಕರ್ನಾಟಕದ ಬಗ್ಗೆ ಅಭಿಮಾನ ಜಾಗ್ರುತಿಯಾಗ ಹತ್ತಿತ್ತೆಂಬುದಕ್ಕೆ ೧೯೨೧ನೆಯ ಇಸ್ವಿಯಲ್ಲಿಯೇ ಬೆಂಗಳೂರಿನವರು ನನ್ನನ್ನು ಕರೆಯಿಸಿಕೊಂಡು 'ಕರ್ನಾಟಕ ಗತವೈಭವ'ದ ಬಗ್ಗೆ ನನಗೆ ಮಾನ

ಪತ್ರವನ್ನು ಕೊಟ್ಟಿರುವುದೇ ಸಾಕ್ಷಿ. ಅಂಥವರ ಸಂಖ್ಯೆ ಮುಂದೆ ಕಡಿಮೆಯಾಯಿತೆಂದು ಕೇಳಿದ್ದೇನೆ. "ಹೆಮ್ಮೆಯ ಕುಲ" ಇನ್ನೂ ಉಳಿದಿದೆ ಎಂದು ಕೇಳಿದ್ದೇನೆ. ಅದು ನಿರ್ನಾಮವಾದಾಗಲೇ ನಮ್ಮ ಹೊಸ ರಾಜ್ಯಕ್ಕೆ ಯಶಸ್ಸು!

ನಿಜವಾಗಿ ಹೇಳಬೇಕಾದರೆ ಮೈಸೂರಿನವರು ತಾವು ಕನ್ನಡ ಸಾಹಿತ್ಯದಲ್ಲಿ ಹೆಚ್ಚಿನವರೆಂಬುದು ಕೂಡ ಅಷ್ಟು ಸರಿಯಲ್ಲ. ಅವರಿಗೆ ಅನುಕೂಲ ಪರಿಸ್ಥಿತಿಯಿದ್ದ ಮೂಲಕ ಕೆಲಮಟ್ಟಿಗೆ ಮುಂದುವರಿದಿರಬಹುದು. ಆದರೆ ಅದಕ್ಕೆ ಒಪ್ಪುವ ವಿನಯ ಮತ್ತು ಭಾಷಾಭಿಮಾನ ಅವರಲ್ಲಿ ಸಾಕಷ್ಟು ಇದ್ದಿಲ್ಲ. ಹಾಗೆ ಅವರಿಗೆ ಅಭಿಮಾನವಿದ್ದರೆ ಅವರು ತಮ್ಮ ಹೆಸರುಗಳನ್ನು ಕೂಡ ಇಂಗ್ಲೀಷಿನಲ್ಲಿ ಹೇಳುತ್ತಿದ್ದರೋ! ಹಳ್ಳಿಪಳ್ಳಿಗಳಲ್ಲಿ ಕೂಡ ಇನ್ನೂ ವರೆಗೂ ಕನ್ನಡ ಅಂಕಿಗಳು ಸಹ ಪ್ರಚಾರದಲ್ಲಿಲ್ಲ. ಮಾತುಗಳಲ್ಲಿ ಅಷ್ಟೇ ಏಕೆ? ಮಕ್ಕಳಿಗೆ ಹೆಸರಿಡುವದರಲ್ಲಿ ಸಹ ಸರಿಬೆರಿಕೆ. "ಅಠಾರಾ" ಕಚೇರಿ, ಇದು ಏತರ ದ್ಯೋತಕ? ಅದು ಕನ್ನಡ ಅಭಿಮಾನಿಗಳಿಗೆ ಕಠೋರವಾದ ಶಬ್ದ. ೧೯೦೭ ರಲ್ಲಿ ಅಖಿಲ ಕರ್ನಾಟಕ ಗ್ರಂಥಕರ್ತರ ಸಮ್ಮೇಲನವನ್ನು ಕರೆಯುವದರಲ್ಲಿ ಭಾಷಾ ಏಕರೂಪತೆಯೇ ಮುಖ್ಯ ಉದ್ದೇಶವಾಗಿತ್ತು. ಮತ್ತೇನಂತೆ! ತಮ್ಮ ದೇಶ, ಮುಂದುವರೆದ ದೇಶವಂತೆ! ಆ ಕಾರಣದಿಂದ ಮಿಕ್ಕ ಕನ್ನಡ ಪ್ರದೇಶಗಳೊಡನೆ ಕೂಡುವದಕ್ಕೆ ಹಿಂಜರಿದರಂತೆ! ಮುಂದುವರೆದಿದ್ದರೆ ಕೂಡಿಕೊಳ್ಳಲು ಹಿಂಜರಿದುದೇಕೆ? ಆದರೆ ಒಂದು ಸಂತೋಷ. ಏನೆಂದರೆ, ಇದು ಸಾರ್ವತ್ರಿಕ ಭಾವನೆ ಅಲ್ಲ. ಏನೇ ಇರಲಿ. ಒಂದು ಮಾತು ಮರೆಯದಿರಲಿ. ಅದೇನೆಂದರೆ, ಮೈಸೂರ ಹೆಣ್ಣಿನ ಲಗ್ನವನ್ನು ಮಿಕ್ಕ ಕರ್ನಾಟಕದವರೊಡನೆ ಪುರೋಹಿತರಾದ ಭಾರತ ಸರಕಾರದವರು ಮಾಡಿಕೊಟ್ಟಿದ್ದಾರೆ. ನಮ್ಮ ಧರ್ಮದಲ್ಲಿ Divorce—ಘಟಸ್ಫೋಟ ಇಲ್ಲ. ಬಡೋದೆ ಸರಕಾರದವರು ತಮ್ಮ ಸ್ವಂತ ಪೋಷಣೆಯಿಂದ ಎಷ್ಟು ಅಸಂಖ್ಯ ಗ್ರಂಥಗಳನ್ನು ಮರಾಠಿ ಭಾಷೆಯಲ್ಲಿ ಹೊರಡಿಸಿದ್ದಾರೆಂಬುದನ್ನು ಮೈಸೂರಿನವರು ಅಭ್ಯಾಸ ಮಾಡಿಕೊಂಡು ಬರಲಿ. ಜನತೆಯು ಜನತೆಯ ಸಹಾಯದಿಂದ, ಜನತೆಗಾಗಿ ನಡೆಯಿಸಿದ ಸಂಸ್ಥೆಗಳು ಎಷ್ಟಿವೆ? ಎಂಬುದನ್ನು ಹೇಳಲಿ. ಒಂದೂ ಇಲ್ಲವೆಂದು ಹೇಳುವದು ಸಾಹಸದ ಮಾತಾದರೂ ಬಹುಶಃ ಅವರು ತೆಗೆದ ಎಲ್ಲ ಸಂಸ್ಥೆಗಳೂ ಸರಕಾರದ

ಕೃಪೆಯಿಂದಲೇ. ಅದಕ್ಕೆ ಕಾರಣ, ಅವರು ಸುಖಾಸೀನರಾಗಿದ್ದುದೇ ಕಾರಣ. ಬೆಂಗಳೂರಿನವರು (ಏಕೆಂದರೆ ಈಗ ಅದು ನಮ್ಮ ರಾಜಧಾನಿ) ಪುಣೆ, ಮುಂಬೈ ಮುಂತಾದ ಪಟ್ಟಣಗಳಿಗೆ ಹೋಗಿ, ಅಲ್ಲಿ ಸಾರ್ವಜನಿಕ ಸಂಸ್ಥೆಗಳು ಎಷ್ಟು ಅವೆ, ಎಂಬುದನ್ನು ಅಭ್ಯಾಸ ಮಾಡಿಕೊಂಡು ಬರಲಿ. ಇನ್ನು ಅವರ ಮೃದುಮಾತಿನ ಬಗ್ಗೆ. ಅಹುದು. ಮಿಕ್ಕವರಿಗಿಂತ ಅವರ ಮಾತಿನಲ್ಲಿ ಮೃದುತನ ಹೆಚ್ಚು. ಅದಕ್ಕೆ ಕಾರಣವು ಕೂಡ ಅವರಲ್ಲಿಯ ಪರಿಸ್ಥಿತಿಯಿಂದ ಉಂಟಾಗಿರುವ ಮನೋವೃತ್ತಿಯ ಮೂಲಕವಾಗಿ ತೋರುವ ಒಂದು ಸದ್ಗುಣ. ನಮಗೆ ಹಿಂದಿನ ಮೈಸೂರ ಸರಕಾರದ ಬಗ್ಗೆ ಅಭಿಮಾನವೇನೋ ಅದೆ. ಹಿಂದಿನದನ್ನು ಕೆದರಿ ತೆಗೆಯುವ ಇಚ್ಛೆಯೂ ಇಲ್ಲ. ಕೆಲವರ ರೆಪ್ಪೆಯ ಮೇಲಿನ ಪರೆಯನ್ನು ಹೋಗಲಾಡಿಸುವದೇ ನಮ್ಮ ಮುಖ್ಯ ಉದ್ದೇಶ.

ಮೈಸೂರಿನವರಿಗೆ ತಾವು ಹೆಚ್ಚಿನವರೆಂಬ ಕಲ್ಪನೆ ಬರುವದಕ್ಕೆ ಕಾರಣ ವಿತ್ತೆಂಬುದನ್ನು ಹೇಳಿದೆನಷ್ಟೇ! ಆದರೆ ಆಗ ನನಗೆ ಒಂದು ಕಲ್ಪನೆ ಬಂದಿರಲಿಲ್ಲ. ಮೈಸೂರಿನಲ್ಲಿಯ ಅನೇಕ ಶೈಕ್ಷಣಿಕ, ಔದ್ಯೋಗಿಕ ಸಂಸ್ಥೆಗಳನ್ನು ಕಂಡಿದ್ದೆ. ಆದರೆ ಇವೆಲ್ಲ ಕೇವಲ ಅಲ್ಲಿಯ ಮುಂದುವರೆದ ಸರಕಾರದ ಸಹಾಯದ ಫಲ ಎಂಬುದು ನನಗೆ ಆಗ ಹೊಳೆದಿರಲಿಲ್ಲ. ೧-೬-೧೯೧೨ನೆಯ ಇಸವಿ ದಿವಸ ಶ್ರೀ ಬಾಪೂ ಸುಬ್ಬರಾಯರು ಎಂಬ ಮೈಸೂರಿನ ವಿದ್ವಾಂಸರು ನನ್ನ ಅತಿಥಿಗಳಾಗಿದ್ದರು. ಆಗ ಅವರಿಗೆ ಕರ್ನಾಟಕದ ರಾಜಕೀಯ ಏಕೀಕರಣದ ಆವಶ್ಯಕತೆಯನ್ನು ಮನಗಾಣಿಸಿಕೊಟ್ಟೆ. ಅವರು ಮಾತ್ರ ಅದನ್ನು ತಟ್ಟನೆ ಗ್ರಹಿಸಿದರು. ಮತ್ತು ಮೈಸೂರು ಮುಂದೊರೆದದ್ದು ತನ್ನ ಸ್ವಂತ ಜನತೆಯ ಪ್ರಯತ್ನದಿಂದಲ್ಲ, ಬಹ್ವಂಶದಿಂದ ಸರಕಾರದ ಸಹಾಯದಿಂದ ಎಂಬದನ್ನು ನನ್ನ ಲಕ್ಷ್ಯಕ್ಕೆ ತಂದುಕೊಟ್ಟರು. ಆಗ ಅವರೆಂದ ಮಾತು ಇದು. “ಮೈಸೂರಿನವರಿಗೆ ತಾಯಿಯ ತೊಡೆಯ ಮೇಲೆ ಮಲಗಿ ಗುಟುಕು ಹಾಕಿಸಿಕೊಂಡೇ ಗೊತ್ತು.” ಹೌದು. ಈಗಲೂ ಅದೇ ಅನುಭವ.

**ಕೊಡಗು :—** ಕರ್ನಾಟಕ ರಾಜ್ಯನಿರ್ಮಾಣದ ಕಾರ್ಯದಲ್ಲಿ ಕೊಡಗಿನ ಪಾತ್ರದ ಬಗ್ಗೆ ತುಸು ಉಲ್ಲೇಖಿಸುವದು ಅವಶ್ಯ. ನಿಜವಾಗಿ ಹೇಳಬೇಕಾದರೆ ನಾನು ನನ್ನ ಜೀವನದಲ್ಲಿ ದಾರಿದ್ರ್ಯದೀಕ್ಷೆ ತೆಗೆದುಕೊಂಡುದ

ರಿಂದ ಕೆಲವು ಲಾಭಗಳಾದಂತೆ ಕೆಲವು ಹಾನಿಗಳೂ ಆದವು. ಏಕೆಂದರೆ ನನ್ನ ಸಾರ್ವಜನಿಕ ಜೀವನವೆಲ್ಲವೂ ನನ್ನ ಸ್ವಂತ ಖರ್ಚಿನಿಂದಲೇ ಸಾಗಿತು. ನನ್ನ ಬಡತನದ ಮೂಲಕವೇ ನನ್ನ ಮನಸ್ಸಿನಂತೆ ಕಾರ್ಯವಾಗಲಿಲ್ಲ. ಕೊಡಗು ಪ್ರಾಂತಕ್ಕೆ, ಈ ಮೂಲಕವೇ ಭೆಟ್ಟಿಯನ್ನು ಕೊಡುವದಾಗಲಿಲ್ಲ. ೧೯೧೮ರಲ್ಲಿ ಧಾರವಾಡದಲ್ಲಿ ನಾನು ಕೂಡಿಸಿದ ಕರ್ನಾಟಕ ಸಾಹಿತ್ಯಸಮ್ಮೇಲನಕ್ಕೆ ಕೊಡಗಿನಿಂದ ಸಿ. ಎನ್. ವೆಂಕಪ್ಪಯ್ಯ ಮೊದಲಾದ ೬ ಜನ ಪ್ರತಿನಿಧಿಗಳನ್ನು ಕರೆಯಿಸಿಕೊಂಡಿದ್ದೆ. ಅವರೊಡನೆ ಸ್ನೇಹಸಂಬಂಧ ಬೆಳೆಸಿಕೊಂಡೆ. ಹಾಗೆಯೇ ೧೯೨೦ರಲ್ಲಿ ದಿ.ಬಾ.ವ್ಹಿ.ಪಿ. ಮಾಧವರಾಯರ ಅಧ್ಯಕ್ಷತೆಯಲ್ಲಿ ನಾನು ಕೂಡಿಸಿದ ಕರ್ನಾಟಕ ಏಕೀಕರಣ ಅಥವಾ ರಾಷ್ಟ್ರೀಯ ಪರಿಷತ್ತಿಗೆ ಶ್ರೀ. ಶ್ರೀಪತಿರಾಯರೇ ಮೊದಲಾದವರು ಬಂದದ್ದು ನೆನಪಿದೆ. ಆಗ ಕೊಡಗಿನಲ್ಲಿ ಜಮೀನದಾರ ಸಂಘ ಎಂಬ ಒಂದು ಸಂಘ ಇತ್ತು. ಕರ್ನಾಟಕದೊಡನೆ ಕೊಡಗು ಕೂಡುವದೇ ಉತ್ತಮ ಎಂಬುದನ್ನು ನಾನು ಅವರಿಗೆ ಬೋಧಿಸುತ್ತಲೇ ಇದ್ದೆ. ಮುಂದೆ ೧೯೨೨ರಲ್ಲಿ ನಾನು ನನ್ನ ಮಿತ್ರರಾದ ಕಡಪಾ ರಾಘವೇಂದ್ರರಾವ ವಕೀಲರನ್ನು ಮಡಿಕೇರಿಗೆ ಕಳಿಸಿಕೊಟ್ಟೆ. ಅವರಿಗೆ ಅಲ್ಲಿ ಚಳವಳಿ ಮಾಡಲಿಕ್ಕೆ ಸರಕಾರದವರು ಅಡ್ಡಿ ಮಾಡಿದರು. ಅವರು ತಿರುಗಿ ಬರಬೇಕಾಯಿತು ! ಆದರೆ ಆದರಿಂದ ಚಳವಳಿ ಮತ್ತಿಷ್ಟು ಬೆಳೆಯಿತು. ಅಲ್ಲಿಂದ, "ಕರ್ನಾಟಕ ಸಭೆ"ಯು ವತಿಯಿಂದ ಕೊಡಗು ಸರಕಾರಕ್ಕೆ ಬೆನ್ನು ಹತ್ತಿದೆವು. ಆಗ ನಾವೆಲ್ಲರು ಅಸಹಕಾರ ಚಳವಳಿಯಲ್ಲಿ ಸೇರಿದ್ದರಿಂದ ನಮ್ಮ ಮೇಲೆ ಸರಕಾರದವರ ಕಟಾಕ್ಷ ! ಮುಂದೆ ೧೯೨೪ರ ಸುಮಾರಕ್ಕೆ ಇಲ್ಲಿಂದ ಕೆಲ ಮುಖಂಡರು ಹೋಗಿ ಅಲ್ಲಿಯ ಸಭೆಯಲ್ಲಿ, ಕೊಡಗು ಕರ್ನಾಟಕಕ್ಕೆ ಸೇರಬೇಕೆಂಬ ಗೊತ್ತುವಳಿಯನ್ನು ಮಂಜೂರು ಮಾಡಿಸಿಕೊಂಡು ಬಂದರು. ಅಂದಿನಿಂದ ಇಂದಿನ ವರೆಗೆ ಬಹುಶಃ ಕೊಡಗು ಕರ್ನಾಟಕ ನಿರ್ಮಾಣಕ್ಕೆ ಬೆಂಬಲವನ್ನು ಕೊಡುತ್ತಲೇ ಬಂದಿದೆ.

**ಹೈದ್ರಾಬಾದ ಕನ್ನಡ :**— ಹೈದ್ರಾಬಾದವೂ ಮೈಸೂರಿನಂತೆ ಸಂಸ್ಥಾನವೇ. ಆದರೆ ಮೈಸೂರಿನಂತೆ ಸುಧಾರಿಸಿದ ಪ್ರಾಂತವಾಗಿದ್ದಿಲ್ಲ. ಮೈಸೂರು ಭಾರತಕ್ಕೇನೆ ಮಾದರಿ ಸಂಸ್ಥೆಯಾಗಿತ್ತು. ಮೈಸೂರಿನ ಅನೇಕ ದಿವಾಣರು ಭಾರತದಲ್ಲಿಯ ಅನೇಕ ಸಂಸ್ಥಾನಗಳಿಗೂ ದಿವಾಣರಾಗಿ ತಮ್ಮ ಕಾರ್ಯ

ಕೌಶಲ್ಯವನ್ನು ವ್ಯಕ್ತಪಡಿಸಿದ್ದರು. ಆದರೆ, ಹೈದ್ರಾಬಾದ ಕನ್ನಡ ಪ್ರಾಂತದಲ್ಲಿ ಕತ್ತಲೆ! ಅಲ್ಲಿಗೆ ಹೋಗಿ ಶಿಲಾಲಿಪಿಗಳನ್ನು ತಕ್ಕೊಳ್ಳಲೂ ಕೂಡ, ಸರಕಾರದಿಂದ ನನಗೆ ಅನುಮತಿ ದೊರೆಯಲಿಲ್ಲ! ಚಳವಳಿ ಮಾಡುವದಂತೂ ಒತ್ತಟ್ಟಿಗೇ ಉಳಿಯಿತು! ಆದರೆ, ಮುಂದೆ ನಾನು ೧೯೨೨ರಲ್ಲಿ ಜಯಕರ್ನಾಟಕ ಮಾಸಪತ್ರಿಕೆ ಹೊರಡಿಸಿದಾಗ, ಅದರ ಮುಖಾಂತರ ಜಾಗ್ರುತಿ ಮಾಡಲು ನನಗೆ ಅನುಕೂಲವಾಯಿತು. ಅಲ್ಲದೆ, ಸ್ವಾಭಾವಿಕವಾಗಿಯೇ ಅಲ್ಲಿಯ ಕನ್ನಡಿಗರಲ್ಲಿಯೂ ಭಾಷಾಭಿಮಾನ ಬೆಳೆದು ನೃಪತುಂಗ ವಿದ್ಯಾಲಯಗಳೇ ಮುಂತಾದವು ಹೊರಟವು. ಅಂತೇ ೧೯೪೦ರಲ್ಲಿ ನನ್ನನ್ನು ಅಲ್ಲಿಯವರು ಕರೆಯಿಸಿಕೊಂಡು ಮಾನಪತ್ರ ಕೊಟ್ಟರು. ಇರಲಿ. ಅದು ಬಹಳ ಮುಂದಿನ ಮಾತು.



## ೫ನೆಯ ಪ್ರಕರಣ

### ಕರ್ನಾಟಕದ ಆಗಿನ ದುರ್ದಶೆ— ಕತ್ತಲೆ ಯುಗ

**ಪ್ರಾಂತಗಳು**:— (೧) ಮುಂಬಯಿ. (೨) ಮದ್ರಾಸು. (೩) ಕೊಡಗು.

**ಸಂಸ್ಥಾನಗಳು**:— (೧) ಮೈಸೂರು. (೨) ಹೈದರಾಬಾದ. (೩) ಕೊಲ್ಹಾಪುರ. (೪) ಸಾಂಗಲಿ. (೫) ಮಿರಜ (ಹಿರಿ). (೬) ಮಿರಜ (ಕಿರಿ). (೭) ಕುರಂದವಾಡ (ಹಿರಿ). (೮) ಕುರಂದವಾಡ (ಕಿರಿ). (೯) ಜಮಖಂಡಿ. (೧೦) ಮುಧೋಳ. (೧೧) ರಾಮದುರ್ಗ. (೧೨) ಜತ್ತ. (೧೩) ಅಕ್ಕಲಕೋಟೆ. (೧೪) ಔಂಧ (ಗುಣದಾಳ). (೧೫) ಸವಣೂರು. (೧೬) ಸೊಂಡೂರು.

**ಆಗಿನ ಸಾರ್ವಜನಿಕ ವಾತಾವರಣ**: ೧೮೯೬ರ ಪೂರ್ವದಲ್ಲಿ:— ಧಾರವಾಡವು ಮೊದಲಿನಿಂದಲೂ ಸ್ವಂತ ಮತ್ತು ಸ್ವತಂತ್ರ ಸಂಸ್ಥೆಗಳ ಉಗಮ ಸ್ಥಾನವು. ಅದು ಬೆಳಗಾವಿ ಮತ್ತು ವಿಜಾಪುರಗಳಂತೆ ಪುಣೆಗೆ ಸಮೀಪವಾಗಿರದೆ, ಕರ್ನಾಟಕದ ಮಧ್ಯವರ್ತಿ ಸ್ಥಳವಾಗಿರುವುದೂ ಅದಕ್ಕೆ ಕಾರಣವಾಗಿರಬಹುದು. ಚಳವಳಿಗಳು ಹುಟ್ಟಬೇಕಾದರೂ ಆಯಾ ಚಳವಳಿಗಳ ಉತ್ಪಾದಕರೊಡನೆ ಕೆಲಮಟ್ಟಿಗೆ ಪರಿಚಯವಿರುವದೂ ಮೊದಮೊದಲಿಗೆ ಅವಶ್ಯವಿರುತ್ತದೆ. ಧಾರವಾಡದ ಸುದೈವದಿಂದ ಗುರೂಜಿಯಂಥ ಲೋಕಮಾನ್ಯರ ಪರಿಚಯಸ್ಥರು ಇಲ್ಲಿ ಇದ್ದುದರಿಂದಲೆ ಇಲ್ಲಿ ಗೋರಕ್ಷಣ ಸಂಸ್ಥೆ, ಗಣಪತಿ ಉತ್ಸವ, ಶಿವಾಜಿ ಉತ್ಸವ ಮುಂತಾದವುಗಳು ಜೋರಿನಿಂದ ನಡೆದವು. ಈ ರಾಷ್ಟ್ರೀಯ ಚಳವಳಿಗಳ ಹೊರತಾಗಿ, ಅನೇಕ ಸ್ವತಂತ್ರ ಚಟುವಟಿಕೆಗಳು ಆಗ ಧಾರವಾಡದಲ್ಲಿ ನಡೆಯುತ್ತಿದ್ದವು. ಅವುಗಳಲ್ಲಿ ನಾಲ್ಕು ಮುಖ್ಯವಾದವುಗಳು. (೧) ಕರ್ನಾಟಕ ವಿದ್ಯಾವರ್ಧಕ ಸಂಘ; (೨) ಶ್ರೀ ಶಂಕರಾಚಾರ್ಯ ಸಂಸ್ಕೃತ

ಪಾಠಶಾಲೆ; (೩) ಶ್ರೀಮಧ್ವಸಿದ್ಧಾಂತೋತ್ತೇಜಕ ಸಭೆ; (೪) ವ್ಹಿಕ್ಟೋರಿಯಾ ಹಾಯಸ್ಕೂಲ. ಶ್ರೀ. ಗುರುನಾಥರಾವ ಘಾಟಕರಂಥ ಮರಾಠೀ ಮಾತೃಭಾಷೆಯುಳ್ಳ ಕೊಂಕಣಸ್ಥರೂ ಅದ್ವಿತೀಯ ಮುಖಂಡರೂ ಆದವರಿಗೂ ಕೂಡ ಪುಣೆಯ ಪರಿಚಯವು ವಿಶೇಷವಿದ್ದಿದ್ದಿಲ್ಲ. ರಾಜಹಂಸ, ಚಂದ್ರೋದಯ, ಕರ್ನಾಟಕವೃತ್ತ, ಧನಂಜಯ, ಕರ್ನಾಟಕಪತ್ರ ಮುಂತಾದ ಕನ್ನಡ ಪತ್ರಿಕೆಗಳು ಹೊರಡಲಿಕ್ಕೂ ಧಾರವಾಡದ ಸ್ವತಂತ್ರ ವಾತಾವರಣವೇ ಕಾರಣ. ಇವಲ್ಲದೆ ೧೮೯೫ರಿಂದ ಪ್ರಾಚ್ಯಕ್ರೀಡಾಸಂವರ್ಧಕ ಮಂಡಲವು ಸ್ವದೇಶೀ ಆಟಗಳನ್ನು ಆಡುವದಲ್ಲದೆ, ಶಿವಾಜಿ ಉತ್ಸವವೇ ಮುಂತಾದ ಅನೇಕ ಚಟುವಟಿಕೆಗಳನ್ನೂ ಮಾಡುತ್ತಿತ್ತು. ೧೮೯೬ನೆಯ ಇಸ್ವಿಯಲ್ಲಿಯೇ ಗಾಯನ ಪಾಠಶಾಲೆಯು ಸ್ಥಾಪಿತವಾಗಿ ಕೆಲವು ವರ್ಷ ನಡೆಯಿತು. ಆದರೆ, ಇನ್ನೂ ವರೆಗೆ ಕರ್ನಾಟಕ ಸಂಗೀತ ಸಮಾಜವು ಧಾರವಾಡದಲ್ಲಿ ಹುಟ್ಟದಿರುವುದು ಮಾತ್ರ ಶೋಚನೀಯ ಸಂಗತಿಯಾಗಿದೆ. ಆ ವಿಷಯದಲ್ಲಿ, ನನ್ನ ಪ್ರಯತ್ನಗಳು ಇನ್ನೂ ಫಲದ್ರೂಪವಾಗಿಲ್ಲ. ಸಂಸ್ಕೃತಾಭಿನಂದಿನೀ ಸಭೆ, ಸನಾತನ ಭಾರತಧರ್ಮ ಸಭೆ, ಮಹಾರಾಷ್ಟ್ರ ಭಾಷೋತ್ತೇಜಕ ಮಂಡಲ ಮುಂತಾದ ಸಂಸ್ಥೆಗಳೂ ಧಾರವಾಡದಲ್ಲಿ ಆಗ ತಕ್ಕಮಟ್ಟಿಗೆ ಕೆಲಸ ನಡೆಸಿದ್ದವು. ಉದ್ಯೋಗ-ಧಂದೆಯ ವಿಷಯದಲ್ಲಿ, ಅಳ್ಣಾವರದ ಬಂಗಾರ ಕಣಿಯ ಕಂಪನಿಯು ಹೊರಟು ಅನೇಕರನ್ನು ಹಾಳುಮಾಡಿತು. ತೇಗೂರ ಕಬ್ಬಿಣದ ಆದರುಗಳಲ್ಲಿಯೂ ಕೆಲಸ ನಡೆದಿತ್ತು. ಶ್ರೀ. ವೆಂಕಟ ರಂಗೋ ಕಟ್ಟಿಯವರು ತಮ್ಮ ವಿಲಕ್ಷಣವಾದ ವ್ಯಾಪಕ ಬುದ್ಧಿಯಿಂದ ಸೀಗೆಕಾಯಿ ಒಡೆಗಳನ್ನೂ ಆಯುರ್ವೇದ ಔಷಧಗಳನ್ನೂ ತಯಾರು ಮಾಡಿದ್ದರು.

ಒಟ್ಟಿಗೆ, ನಾನು ಹಾಯಸ್ಕೂಲ ಬಿಡುವ ಪೂರ್ವದಲ್ಲಿಯೇ ದೇಶದ ಮತ್ತು ಧಾರವಾಡದ ಆಗಿನ ಕಾಲದ ವಿಶೇಷ ಚಟುವಟಿಕೆಗಳು ನನ್ನ ಮನಸ್ಸಿನ ಮೇಲೆ ಅಪ್ರತ್ಯಕ್ಷ ರೀತಿಯಿಂದ ಪರಿಣಾಮವನ್ನುಂಟುಮಾಡಿದ್ದವು. ೧೮೯೬-೯೭ನೆಯ ಇಸ್ವಿಯ ಚಳವಳಿಗಳು ನನ್ನ ಮನಸ್ಸನ್ನು ಕಲಕುಮಲಕಾಗಿ ಮಾಡಿದ್ದವು. ಇಂಥ ಪರಿಸ್ಥಿತಿಯಲ್ಲಿ ನಾನು ಆ ವರುಷ ಮ್ಯಾಟ್ರಿಕ್ಯುಲೇಶನ ಪರೀಕ್ಷೆಯಲ್ಲಿ ಪಾಸಾಗಿ ನವಲಗುಂದದಲ್ಲಿ ಇರಹತ್ತಿದೆನು. ಇಲ್ಲಿಗೆ ನನ್ನ ಹಾಯಸ್ಕೂಲ ಜೀವನವು ಮುಗಿಯಿತು.

ಕರ್ನಾಟಕದಲ್ಲಿ ಅನೇಕ ವರ್ಷಗಳ ವರೆಗೆ ಪ್ರಾಥಮಿಕ ಶಾಲೆಗಳಲ್ಲಿ ಮರಾಠಿಯನ್ನೂ ಮರಾಠೀ ಅಕ್ಷರಗಳನ್ನೂ ಕಲಿಸಬೇಕೆಂದು ಕೆಲವು ವಿಕ್ಷಿಪ್ತ ಮರಾಠಿ ಅಧಿಕಾರಿಗಳು ಯೋಚಿಸಿದರು. ಆಗ ಕರ್ನಾಟಕ ವಿದ್ಯಾವರ್ಧಕ ಸಂಘಕ್ಕೂ ಮುಂಬಯಿ ಸರಕಾರಕ್ಕೂ ಜಗಳ ಉತ್ಪನ್ನವಾಯಿತು. ಶ್ರೀ. ಕರಗುದರಿ ನಾರಾಯಣರಾಯರೂ ಶ್ರೀ. ರೊದ್ದ ಶ್ರೀನಿವಾಸರಾಯರೂ ಮೊದಲಾದ ಕರ್ನಾಟಕದ ಕಟ್ಟಾಭಿಮಾನಿಗಳು ಸರಕಾರದೊಡನೆ ಜಗಳಾಡಿ, ಆ ವಿಕ್ಷಿಪ್ತ ವಿಚಾರಗಳನ್ನು ಖಂಡನ ಮಾಡಿ ಕರ್ನಾಟಕದ ವರ್ಚಸ್ಸನ್ನು ಉಳಿಸಿಕೊಂಡರು. ಅದಕ್ಕಿಂತ ಮೊದಲು ಡೆಪ್ಯೂಟಿ ಚೆನ್ನಬಸಪ್ಪ, ರಾ. ಬ. ಗುರುಬಸಪ್ಪ ಗಿಲಗಂಚಿ ಮುಂತಾದವರು ಆ ಮುಂಚೆಯೇ ಕನ್ನಡದ ಸ್ಥಾನವನ್ನು ಶಾಲೆಗಳಲ್ಲಿ ಭದ್ರಪಡಿಸಿದ್ದರು. ಡಾ. ಫ್ಲೀಟ್ ಇವರು ಕನ್ನಡದ ಮಹತ್ವವನ್ನು ತಿಳಿದು ಅದಕ್ಕಾಗಿ ಶಿಲಾಲಿಪಿಗಳಲ್ಲಿ ದುಡಿದವರು. ಅವರನ್ನು ಕರ್ನಾಟಕವು ಮರೆಯುವಂತಿಲ್ಲ. ಅವರು ಕನ್ನಡದ ದುರ್ದಶೆಯನ್ನು ಕಂಡುಹಿಡಿದಿದ್ದರು. ಅವರು ಬರೆದ ಇತಿಹಾಸವು ಪ್ರಸಿದ್ಧವಿದೆ. ಅವರ ತರುವಾಯ ಡಾ. ಭಾಂಡಾರಕರರು ಅದೇ ಇತಿಹಾಸವನ್ನೇ ವಿಶೇಷವಾಗಿ ಬರೆದಿದ್ದರೂ ಅದಕ್ಕೂ ಕರ್ನಾಟಕಕ್ಕೂ ಸಂಬಂಧವೇ ಇಲ್ಲದಂತೆ ಬರೆದಿದ್ದಾರೆ. ಇದು ಮರಾಠಿಗರು ನಮ್ಮ ಮೇಲೆ ಮಾಡಿದ ಮೊದಲನೆಯ ಆಕ್ರಮಣ.

**ಸಾರ್ವಜನಿಕ ಜೀವನದಲ್ಲಿ ನನ್ನ ಪ್ರವೇಶ :—** ನಾನು ಸುಮಾರು ೫ ವರ್ಷದವನಿದ್ದಾಗ ರಾಷ್ಟ್ರೀಯ ಸಭೆ ಸ್ಥಾಪನೆ ಆಯಿತು. ಆದರೆ ದೇಶದಲ್ಲಿ ನಿಜವಾಗಿ ಚಳವಳಿ ಹಬ್ಬಿದ್ದು ೧೮೯೫-೯೬ರ ಸುಮಾರಕ್ಕೆ ಅಂದರೆ ಹಿಂದೂ ಧರ್ಮಶಾಸ್ತ್ರ ಪ್ರಕಾರ ನಾನು ವಯಸ್ಸಿನಲ್ಲಿ ಬರುವದಕ್ಕೂ ದೇಶದಲ್ಲಿ ರಾಷ್ಟ್ರೀಯ ಚಳವಳಿಗಳು ಪ್ರಾರಂಭವಾಗುವದಕ್ಕೂ ಮೇಳುಕೂಡಿತು. ಆ ಕಾರಣ ಅನಾಯಾಸವಾಗಿ ರಾಷ್ಟ್ರಕಾರ್ಯದಲ್ಲಿ ನನಗೆ ನನ್ನ ೧೬ನೆಯ ವಯಸ್ಸಿನಿಂದಲೇ ಕೆಲಮಟ್ಟಿಗೆ ಭಾಗ ತೆಗೆದುಕೊಳ್ಳುವ ಯೋಗವು ಒದಗಿತು. ಮತ್ತು ಮುಂದೆ ನನ್ನ ಸುದೈವದಿಂದ ಇಂದಿನ ವರೆಗೆ ಅಂದರೆ ೬೦ ವರುಷಗಳ ಮೇಲ್ಪಟ್ಟು ಅದು ಸಾಗುತ್ತಲೇ ಬಂದಿದೆ. ನಾನು ಹಾಯಸ್ಕೂಲಿನಲ್ಲಿದ್ದಾಗ ೧೮೯೫-೯೬ರಲ್ಲಿ ಧಾರವಾಡದಲ್ಲಿ ಶ್ರೀ. ಗುರೂಜಿ ಎಂಬವರು ಸಾರ್ವಜನಿಕ ಕಾರ್ಯಗಳ ಧುರೀಣರಾಗಿದ್ದರು. ಗೋರಕ್ಷಣ ಚಳವಳಿ, ಗಣಪತಿ ಮೇಳಗಳು ಮುಂತಾದ

ಚಟುವಟಿಕೆಗಳು ನಡೆದಿದ್ದವು. ಶ್ರೀ. ಕೃಷ್ಣರಾವ ಮುದವೇಡಕರ, ಖಾನೋಳ ಕರ, ಹೊಸಕೇರಿ ಅಣ್ಣಾಚಾರ್ಯ ಮುಂತಾದ ತರುಣರು ಉತ್ಸಾಹದಿಂದ ಆ ಚಳವಳಿಯಲ್ಲಿ ನಿರತರಾಗಿದ್ದರು. ಗಣಪತಿ ಉತ್ಸವಗಳಲ್ಲಿ ಮರಾಠಿ ಮೇಳ ಗಳೇ ಹೆಚ್ಚು. ಶ್ರೀ. ರಾಮಚಂದ್ರರಾವ ದೇಶಪಾಂಡೆಯವರು ಮಾತ್ರ ತಮ್ಮ ಕನ್ನಡದ ಕಟ್ಟಾಭಿಮಾನದ ಮೂಲಕ ಕನ್ನಡದ ಮೇಳಿಗೆ ಉತ್ತೇಜನ ಕೊಡು ತ್ತಿದ್ದರು. ಸ್ವತಃ ಅವರು ಸರಕಾರೀ ನವಕರರು. ಆಗ ನನಗೂ ನನ್ನ ಕೆಲ ಮಿತ್ರರಿಗೂ ಕನ್ನಡ ಮೇಳೆಯನ್ನು ತೆಗೆಯುವ ಸ್ಫೂರ್ತಿಯುಂಟಾಯಿತು. ನಮ್ಮ ಪೈಕಿ ಶ್ರೀ. ಲಕ್ಷ್ಮಣ ಘಟಿಕಾರ ಎಂಬ ವಿದ್ಯಾರ್ಥಿಯು ಸಣ್ಣ ಕವಿ. ಆತನು ೧೫-೨೦ ಪದಗಳನ್ನು ಕಟ್ಟಿದನು. 'ಗಜಾನನ ಸ್ತವನ' ಎಂಬ ಆ ಚಿಕ್ಕ ಹೊತ್ತಗೆಯನ್ನು ನಾನು ನನ್ನ ಹೆಸರಿನಲ್ಲಿ ಪ್ರಕಾಶಗೊಳಿಸಿದೆನು. ಮುಂದೆ ಕೆಲವು ದಿನಗಳಲ್ಲಿಯೇ ಲೋಕಮಾನ್ಯ ತಿಲಕರ ಮೇಲಿನ ಖಟ್ಲೆಯಲ್ಲಿ 'ಭವಾನಿ ತಲವಾರ' ಎಂಬ ಲೇಖವನ್ನು ಬರೆದವರು ಶ್ರೀ. ಗುರೂಜಿ ಎಂಬ ಸಂಶಯದಿಂದ ಅದರ ಮೂಲ ಪ್ರತಿಯನ್ನು ಹಿಡಿಯುವದಕ್ಕೆ 'ರಾಜಹಂಸ' ಎಂಬ ಕನ್ನಡ ಪತ್ರಿಕೆಯ ಮುದ್ರಣಾಲಯದ ಮೇಲೆ ಸರ್ಚ ವಾರಂಟ್ ಹೊರ ಟಿತು. ಧಾರವಾಡದಲ್ಲಿ ಅದೇ ಮೊದಲನೆ ಸರ್ಚ ವಾರಂಟ್. ಆಗ ಮಂಗಳ ವಾರ ಪೇಟೆಯಲ್ಲಿ ದೇಸಾಯರ ಓಣಿಯ ಹತ್ತಿರ ರಾಜಹಂಸ ಮುದ್ರಣಾಲಯ ವಿತ್ತು. ೨ ಗಂಟೆ ರಾತ್ರಿಯಿದ್ದಾಗ ಪೋಲೀಸರು ಮುದ್ರಣಾಲಯವನ್ನು ಒಳ ನುಗ್ಗಿದರು. ಕಾಮನಕಟ್ಟಿಯ ವರೆಗೆ ಸಜ್ಜಾಗಿ ಶಿಪಾಯರು ನಿಂತಿದ್ದರು. ಆ ರಾಜಹಂಸ ಮುದ್ರಣಾಲಯದಲ್ಲಿಯೇ ನಮ್ಮ 'ಗಜಾನನ ಸ್ತವನ'ವು ಮುದ್ರಿತ ವಾಗಿತ್ತು. ಅದನ್ನೂ ಜಪ್ತಮಾಡಿ ನನ್ನ ಮತ್ತು ಘಟಿಕಾರ ಇವನ ಮೇಲೆ ಎಲ್ಲಿ ಖಟ್ಲೆ ಮಾಡುವರೋ ಎಂದು ಕುತೂಹಲವುಂಟಾಗಿತ್ತು. ಕುತೂ ಹಲವೆಂದು ಎನ್ನುವ ಕಾರಣವೆಂದರೆ ಆಗ ನಮಗೆ ಸೆರೆಮನೆಯ ಕಲ್ಪನೆ ಏನೂ ಇರದೆ ಲೋಕಮಾನ್ಯರ ಪಙ್ತಿಯಲ್ಲಿ ನಾವೂ ಬರಬಹುದೆಂಬ ಅಭಿ ಮಾನ ಮಾತ್ರ ಇತ್ತು! ನಮ್ಮ ಮೇಲೆ ಖಟ್ಲೆಯಾಗುವದಂತೂ ನಿಶ್ಚಯ ವೆಂದು ತಿಳಿದುಬಿಟ್ಟೆವು. ಮುಂದೆ ಮಾಡುವದೇನು? ಲೋಕಮಾನ್ಯರಂತೆ, ಡಿಫೆನ್ಸ ತಯಾರ ಮಾಡುವುದು! ಆ ಪದಗಳನ್ನೆಲ್ಲ ಪುನಃ ಪುನಃ ತಿರುವಿ ಹಾಕಿ ನಾನೂ ನನ್ನ ಗೆಳೆಯರೂ ಡಿಫೆನ್ಸ ತಯಾರು ಮಾಡಿದೆವು! ಆದರೆ

ನಮಗೆ ಒಂದು ಮಾತನ್ನು ಮಾತ್ರ ಯಾವ ರೀತಿಯಿಂದಲೂ ಸಮರ್ಥಿಸುವುದು ಶಕ್ಯವಿಲ್ಲೆಂದು ಕಂಡುಬಂದಿತು. ಅದಾವುದೆಂದರೆ, ಒಂದು ಪದದಲ್ಲಿದ್ದ 'ಭರತ ಭೂಮಿಯು ಮರಳಿ ಸ್ವಾತಂತ್ರ್ಯವನ್ನು ಪಡೆಯಲಿ' ಎಂಬ ಮಾತು. ಆಗಿನ ಕಾಲಕ್ಕೆ ರಾಜಕೀಯ ಸ್ವಾತಂತ್ರ್ಯದ ಕಲ್ಪನೆಯೇ ಉದಯವಾಗಿದ್ದಿಲ್ಲ. ನಾವು ಸ್ವಾತಂತ್ರ್ಯವನ್ನು ಪಡೆಯುವದೆಂದರೆ ಇಂಗ್ಲಿಷರನ್ನು ಹೊರಗೆ ಹಾಕುವ ದಲ್ಲವೆ? ಇದನ್ನು ಯಾವ ರೀತಿಯಿಂದ ಸಮರ್ಥಿಸಬೇಕು? ರಾತ್ರಿಯೆಲ್ಲ ಕುಳಿತುಕೊಂಡು ನಾವೆಲ್ಲರೂ ವಿಚಾರ ಮಾಡಿದೆವು. ಏನೂ ಹೊಳೆಯಲಿಲ್ಲ. ಕೊನೆಗೆ ಕಿಟಲ್ ಡಿಕ್ಶನರಿಗೆ ಶರಣು ಹೋದೆವು. ಅವಳು ನಮಗೆ ಅಭಯ ವಚನವನ್ನಿತ್ತಳು! ಮರಳಿ ಎಂದರೆ ಮಳ್ಳಿ = A foolish woman. ಆಯಿತು! ಆ ಪದದಲ್ಲಿ ನಾವು ಬೇಡಿದ್ದು ಸ್ತ್ರೀ ಸ್ವಾತಂತ್ರ್ಯ, ರಾಜಕೀಯ ಸ್ವಾತಂತ್ರ್ಯವಲ್ಲ! ಹಾಯಕೋರ್ಟ ಜಡ್ಜರ ಮುಂದೆ ಇದು ನಮ್ಮ ನಿರುತ್ತರ ವಾದ ಸಮರ್ಥನೆ! ಸರಕಾರದವರು ಆ ಪುಸ್ತಕವನ್ನು ಮಿಕ್ಕ ಕಾಗದಪತ್ರ ಗಳೊಂದಿಗೆ ಜಪ್ತ ಮಾಡಿಕೊಂಡು ಹೋಗಿದ್ದರೂ ಹೋಗಿರಬಹುದು. ಆದರೆ ಅವರು ಅದರ ಕಡೆಗೆ ಕಣ್ಣೆತ್ತಿ ಕೂಡ ನೋಡಿರಲಿಕ್ಕಿಲ್ಲ! ಹೀಗಾಗಿ ನಾವು "ದೇಶಭಕ್ತ"ರಾಗುವ ಆ ಸುಸಂಧಿಯನ್ನು ಕಳೆದುಕೊಂಡೆವು!

**ನನ್ನ ಅಜ್ಞಾತವಾಸ**:— ೧೮೯೮ನೆಯ ಇಸವಿಯಲ್ಲಿ ನಾನು ಕಾಲೇಜಕ್ಕೆ ಹೋಗಬೇಕಾಗಿತ್ತು. ಆದರೆ ಪುಣೆಯಲ್ಲಿ ಕೂಡ ಅತಿಶಯ ಪ್ಲೇಗು ಇದ್ದ ಮೂಲಕ ನನ್ನ ತಂದೆಯವರು ನನ್ನನ್ನು ಕಾಲೇಜಕ್ಕೆ ಕಳಿಸಲಿಲ್ಲ. ಅಜ್ಞಾತವಾಸವನ್ನು ಅನುಭವಿಸಬೇಕಾಯಿತು. ಅಜ್ಞಾತವಾಸದಲ್ಲಿ ಆತ್ಮಗತ ವಿಚಾರಗಳಿಗೆ ಅವಕಾಶ ಹೆಚ್ಚು. ನವಿಲುಗುಂದದಲ್ಲಿಯ ನನ್ನ ಆ ಅಜ್ಞಾತ ವಾಸವು ನನ್ನ ಮುಂದಿನ ಏಕಾಂತಜೀವನದ ಬೀಜವು. ಹಾಯಸ್ಕೂಲಿನಲ್ಲಿ ದ್ದಾಗ ಕೆಲವು ಚಳವಳಿಗಳಲ್ಲಿ ಸೇರಿ, ಏನೇನೋ ತಲೆಯಲ್ಲಿ ತುಂಬಿಕೊಂಡು, ಮುಂದೆ ಹೀಗೆ ಮಾಡಬೇಕು, ಹಾಗೆ ಮಾಡಬೇಕು, ಎಂಬ ಬಗ್ಗೆ ನಾನು ತುದಿಮೊದಲಿಲ್ಲದ ವಿಚಾರಗಳಲ್ಲಿ ಮಗ್ನನಾಗುತ್ತಿದ್ದೆ. ಅವು ಕ್ಷಣಾರ್ಧದಲ್ಲಿ ಹಾರಿಯೂ ಹೋಗುತ್ತಿದ್ದವು. ಆದರೆ ಈ ಏಕಾಂತವಾಸದಲ್ಲಿ ವಿಚಾರ ಮಗ್ನನಾಗುವ ಚಟವು ಬಿದ್ದಿತು. ಈ ಚಟವು ಮುಂದೆ ನನ್ನ ಆಯುಷ್ಯ ದಲ್ಲಿ ಬೆಳೆಯುತ್ತಲೇ ಹೋಗಿದೆ. ಈಗಲೂ ನನಗೆ ಹಾಗೆ ವಿಚಾರಮಗ್ನನಾಗು

ವದರಲ್ಲಿಯೇ ಆನಂದ ಹೆಚ್ಚು. ಇರಲಿ, ಈ ಅಜ್ಞಾತವಾಸದಲ್ಲಿಯ ಶಾಂತತೆ ಯಲ್ಲಿ ಕರ್ನಾಟಕತ್ವಕ್ಕೆ ಸಂಬಂಧಿಸಿದ ಒಂದು ಸ್ಮೃತಿಯನ್ನು ಇಲ್ಲಿ ಕೊಡು ತ್ತೇನೆ. ಆಗ ನಾನು ಮನೆಯಲ್ಲಿ ಕೂತಾಗ ನಮ್ಮ ತಂದೆಯವರು ಸಂಗ್ರಹಿ ಸಿದ ಮಹಾಭಾರತಾದಿ ಮರಾಠೀ ಗ್ರಂಥಗಳನ್ನೂ, ನೀತಿಮೀಮಾಂಸೆ, ಧರ್ಮ ಮೀಮಾಂಸೆ ಮುಂತಾದ ಮರಾಠೀ ಗ್ರಂಥಗಳನ್ನೂ ಓದುವ ಸುಸಂಧಿ ದೊರೆ ಯಿತು. ಹೊತ್ತು ಹೋಗುತ್ತಿದ್ದಿಲ್ಲವಾದ್ದರಿಂದ ಅವನ್ನು ಓದುತ್ತಿದ್ದೆ. ಈ ವಾಚನ ನಡೆದಾಗ ಆಕಸ್ಮಿಕವಾಗಿ ಒಂದು ಸಂಗತಿ ಸಂಭವಿಸಿತು. ಅದು ಮುಂದೆ ನಾನು ಕನ್ನಡ ಗ್ರಂಥಕರ್ತನಾಗುವದಕ್ಕೆ ಬೀಜವಾಯಿತು. ಆ ಸಂಗತಿ ಇದು. ಆ ಮರಾಠೀ ಭಾಷಾಂತರ ಗ್ರಂಥಗಳನ್ನೋದುವಾಗ, ಆ ಭಾಷಾಂತರದ ಬಗ್ಗೆ ನಾನು ಹುಚ್ಚಪಚ್ಚ ಟೀಕೆ ಮಾಡುತ್ತಿದ್ದೆ. ನನ್ನ ತಂದೆ ಯವರು ಅದನ್ನು ಕೇಳಿ, ಹೀಗೆ ಟೀಕೆ ಮಾಡುವದು ಸುಲಭ. ಕನ್ನಡದಲ್ಲಿ ಭಾಷಾಂತರ ಮಾಡಿ ನೋಡು. ಅಂದರೆ ನಿನ್ನ ಬಣ್ಣ ತಿಳಿಯುತ್ತದೆ. ವ್ಯರ್ಥ ವಾಗಿ ಹರಟೆ ಹೊಡೆಯುವದಕ್ಕಿಂತ ನೀನು ಹೀಗೇಕೆ ಮಾಡಬಾರದು ? ಕನ್ನಡದಲ್ಲಿ ಓದಲಿಕ್ಕೆ ಅರ್ಹವಾದ ಉದಾತ್ತ ಗ್ರಂಥಗಳು ಇಲ್ಲವೇ ಇಲ್ಲ– ಎಂದು ಸಹಜವಾಗಿ ಆಡಿದರು. ಏಕೋ ಏನೋ, ಅದರಿಂದಲೇ ನನಗೆ ಪ್ರೇರಣೆ ದೊರೆತು, ಅದೇ ದಿವಸ ಅಂದರೆ ೧೧–೨–೧೯೦೮ನೆಯ ಇಸವಿಯ ದಿವಸ ಒಮ್ಮೆಲೆ ನಾನು ಪ್ರೊ. ಭಾನು ಇವರು ಬರೆದ ನೀತಿಮೀಮಾಂಸೆಯೆಂಬ ಮರಾಠಿ ಗ್ರಂಥವನ್ನು ಕನ್ನಡಿಸಲಿಕ್ಕೆ ಪ್ರಾರಂಭಿಸಿಯೇ ಬಿಟ್ಟೆ. ನನ್ನ ಆಗಿನ ಕನ್ನಡದ ಜ್ಞಾನವೆಂದರೆ, ಅದರ ಹಿಂದೆ ೭–೮ ವರ್ಷಗಳ ಕೆಳಗೆ ಕನ್ನಡ ೪ನೆಯ ಇಯ ತ್ತೆಯ ವರೆಗೆ ಕಲಿತು ಮರೆತುಬಿಟ್ಟದ್ದು. ಅಷ್ಟೇ ಬಂಡವಲು ಹಾಯಸ್ಕೂಲಿನ ಮೂರು ಇಯತ್ತೆಗಳಿಗೂ ಸಾಕಾಯಿತು. ಮುಂದೆ ಕನ್ನಡಕ್ಕೂ ನಮಗೂ ಸಂಬಂಧವೇ ಕಡಿದುಹೋಗಿತ್ತು. ಆದ ಕಾರಣ ಇದ್ದ ಅಲ್ಪಸ್ವಲ್ಪ ಬಂಡವ ಲವೂ ಕರಗಿ ಹೋಗಿತ್ತು. ಇಂಥ ಸ್ಥಿತಿಯಲ್ಲಿ ನಾನು ಸ್ಪೆನ್ಸರನಂಥ ಮಹಾ ತತ್ವಜ್ಞಾನಿಯ ಗ್ರಂಥದ ಆಧಾರದಿಂದ ಪ್ರೊಫೆಸರ ಭಾನು ಇವರಂಥ ವಿದ್ವಾಂ ಸರು ಬರೆದ ಆ ನೀತಿಮೀಮಾಂಸೆಯನ್ನು ಕನ್ನಡಿಸಲಿಕ್ಕೆ ಹೊರಟದ್ದು ! ನನ್ನ ಯೋಗ್ಯತೆಯನ್ನು ಲಕ್ಷಕ್ಕೆ ತಾರದೆ ಅದಕ್ಕೆ ಕೈ ಹಾಕಿದೆ. ಅಂತೂ ಇಂತೂ ಮಾಡಿ ಸುಮಾರು ಅರ್ಧದಷ್ಟು ಭಾಷಾಂತರ ಆ ವರ್ಷ ಮುಗಿಸಿದೆ. ಆದರೂ

ಳಗಿನ ಒಂದು ಸ್ವಲ್ಪ ಭಾಷಾಂತರವನ್ನು ಆಗಿನ ನನ್ನ ಕನ್ನಡದ ಅಗಾಧವಾದ ಪಾಂಡಿತ್ಯದ ಪ್ರದರ್ಶನಾರ್ಥವಾಗಿಯೂ, ವಾಚಕರ ವಿನೋದಾರ್ಥವಾಗಿಯೂ ಇದರಡಿ ಕೊಡುತ್ತೇನೆ.

"ಶಾಸ್ತಾ ಮತ್ತು ಶಾಸನೀಯವೆಂಬ ಭೇದವು ಎಲ್ಲಿ ಭೇದವಾಗಿಲ್ಲೊ, ಮತ್ತು ಆದರಿಂದಲೇ ಅಲ್ಲಿ ಯಾವ ಕಾಯದೆಯು ಇಲ್ಲೊ, ಅಲ್ಲೆ "ಅನ್ಯಾಯ" ವಾಗುವದು ಅಶಕ್ಯ ಮತ್ತು ಅಸಂಭವನೀಯವಿರುತ್ತದೆ. ಯಾಕಂದರೆ, ಕಾಯದೆ ಪ್ರಕಾರ ನಡೆಯದಿರುವದೆ ಅನ್ಯಾಯವೆಂದು ಹೇಳಿರುತ್ತದೆ. ಇಂದು ಎಲ್ಲಿ ಕಾಯದೇನೇ ಇಲ್ಲಾ ಅಲ್ಲೆ ಕಾಯದೆಯ ಪ್ರಕಾರ ನಡೆಯದಿರುವದು ಅಂದರೆ ಅನ್ಯಾಯವು ಎಲ್ಲಿಂದ ಬರುವದು........ಸಾರಾಂಶ, ನ್ಯಾಯ ಮತ್ತು ಅನ್ಯಾಯ ವೆಂಬ ತರ್ಕಗಳು ಮನುಷ್ಯನ ಮನಸ್ಸಿನಲ್ಲಿ ಬರುವದಕ್ಕಿಂತ ಮೊದಲು ಮನುಷ್ಯ ನಿಗೆ ಠರಾವಿನಂತೆ ನಡೆಯುವ ಸಂಸ್ಥೆಯು ಆಗಿರಲಿಕ್ಕೆ ಬೇಕು. ಮತ್ತು ಠರಾವಿನಂತೆ ವರ್ತಿಸದಿದ್ದರೆ, ಯಾವ ಸುಖವಾಗುತ್ತದೊ ಆದಕ್ಕಿಂತ ಹೆಚ್ಚು ದುಃಖವಾಗುವಂಥ ಶಿಕ್ಷೆಯನ್ನು ವಿಧಿಸುವದಕ್ಕೆ ರಾಜನಿಗೆ ಅಧಿಕಾರವಿರಲಿಕ್ಕೆ ಬೇಕು."— ಸಾಕು ; ಇದರ ಅರ್ಥವನ್ನು ಹೇಳಲಿಕ್ಕೆ ಸ್ವರ್ಗಲೋಕದಿಂದ ಸಾಕ್ಷಾತ್ ಬೃಹಸ್ಪತ್ಯಾಚಾರ್ಯರೇ ಇಳಿದು ಬರಬೇಕಲ್ಲವೇ? ಕನ್ನಡ ಸಾಹಿತಿ ಗಳಿಗೆ ಈ ನನ್ನ ಪಾಂಡಿತ್ಯದ ಗುಟ್ಟು ಇಲ್ಲಿಯ ವರೆಗೆ ಗೊತ್ತಾಗಲಿಲ್ಲವೆಂದು ನೆಟ್ಟಗೆ. ಇಲ್ಲದಿದ್ದರೆ ನನಗೆ ೧೯೩೦ನೆಯ ಇಸ್ವಿಯಲ್ಲಿ ಮೈಸೂರಿನ ಯುನಿ ವ್ಹರ್ಸಿಟಿಯಿಂದ ದೊರೆತ ಅಖಿಲ ಕರ್ನಾಟಕ ಸಾಹಿತ್ಯಸಮ್ಮೇಲನದ ಅಧ್ಯಕ್ಷ ಪದವಿಯ ಮಾನಕ್ಕೆ ಅವರು ಕಲ್ಲುಹಾಕದೆ ಇರುತ್ತಿರಲಿಲ್ಲ! ಆದರೆ, ಕನ್ನಡ ಮರಾಠೀ ಸಂಸ್ಕೃತ ಭಾಷೆಗಳ ಏಕೀಕರಣದ ಮೂಲಪುರುಷನೆಂದು ಮತ್ತೆ ಕೆಲ ವರು ನನ್ನನ್ನು ಹಾಡಿ ಹರಸುತ್ತಿದ್ದರೆಂಬುದು ಆ ಸಾಹಿತಿಗಳಿಗೇನು ಗೊತ್ತು? ಇರಲಿ. ನಮ್ಮ ತಂದೆಯವರಿಗೆ ನಮ್ಮ ಕನ್ನಡದ ಬಗ್ಗೆ ಬಹಳ ಅಭಿಮಾನ ವಿತ್ತೆಂದಲ್ಲ; ಆದರೂ ಆಗಿನ ಅವರ ಸಹಜ ನುಡಿಯು ನನಗೆ ಪ್ರೇರಕಮಂತ್ರ ವಾದುದೇನೂ ಸುಳ್ಳಲ್ಲ.

**ಕಾಲೇಜಿನಲ್ಲಿದ್ದಾಗಿನ ಕನ್ನಡ ವಾತಾವರಣ:—** ಅಜ್ಞಾತವಾಸ ಮುಗಿದ ನಂತರ ಫರ್ಗುಸನ್ ಕಾಲೇಜ ಸೇರಿದೆನು. ಫರ್ಗ್ಯುಸನ್ ಕಾಲೇಜು

ಟಿಳಕರೇ ಮುಂತಾದವರು ಪ್ರಾರಂಭಿಸಿದ ಕಾಲೇಜವಾಗಿದ್ದರೂ ಅಲ್ಲಿಯ ಪ್ರೊಫೆಸರರು ಕನ್ನಡದ ಬಗ್ಗೆ ತಿರಸ್ಕಾರವುಳ್ಳವರಾಗಿದ್ದರು. ಆದರೆ ನನ್ನ ಈ ಪೌಢ ವಿದ್ಯಾರ್ಥಿದಸೆಯಲ್ಲಿರುವಾಗ ನನ್ನ ಸುತ್ತಲಿನ ಸಾರ್ವಜನಿಕ ವಾತಾವರಣವು ಸ್ಫೂರ್ತಿದಾಯಕವಾಗಿತ್ತು. ಪುಣೆ ಪಟ್ಟಣವು ದೇಶಾಭಿಮಾನದ ಮತ್ತು ಭಾಷಾಭಿಮಾನದ ಕೇಂದ್ರವು. ಆ ವಾತಾವರಣವು ನನ್ನ ಮೇಲೆ ಪರಿಣಾಮ ಮಾಡದೆ ಇರಲಿಲ್ಲ. ಆ ಪರಿಣಾಮದ ಮೂಲಕ ನಾನು ಮುಂದೆ ಪತ್ರಿಕೆಯ ಸಂಪಾದಕನಾಗಬೇಕೆಂದು ನಿಶ್ಚಯಿಸಿದೆನು. ಆ ಪತ್ರಿಕೆಯ ಮೇಲ್ಗಡೆಗೆ ಹಾಕಲಿಕ್ಕೆ ಯಾವ ಶ್ಲೋಕವು ಯೋಗ್ಯವೆಂಬುದನ್ನು ಹುಡುಕಿ ತೆಗೆದೆನು. ಆ ಶ್ಲೋಕವು ಇದು :—

"ಭೂತಿರ್ನೀಚಗೃಹೇಷು ವಿಪ್ರಸದನೇ ದಾರಿದ್ರ್ಯಕೋಲಾಹಲಃ ।
ನಾಶೋ ಹಂತ ಸತಾಮಸತ್ಪಥಜುಷಾಂ ಆಯುಃ ಸಮಾನಾಂ ಶತಂ ॥
ದುರ್ನೀತಿಂ ತವವೀಕ್ಷ್ಯ ಕೋಪದಹನಜ್ವಾಲಾ ಜಟಾಲೊಽಪಿಸನ್ ।
ಕಿಂ ಕುರ್ವೇ ಜಗದೀಶ ಯತ್ ಪುನರಹಂ ದೀನೋ ಭವಾನೀಶ್ವರಃ ॥

ಇದು ಎಲ್ಲಿಯ ಶ್ಲೋಕವೆಂಬುದು ಈಗ ನನಗೆ ನೆನಪಿಗೆ ಬರಲೊಲ್ಲದು. ಇರಲಿ, ದೇವರ ವಿಷಯಕ್ಕಿದ್ದ ಈ ಶ್ಲೋಕವನ್ನು ಸರಕಾರಕ್ಕೆ ಹಚ್ಚುವ ಉದ್ದೇಶದಿಂದ "ವಿಪ್ರಸದನೇ" ಎಂಬುದರ ಬದಲಾಗಿ "ಸಾಧುಸದನೇ" ಎಂಬುದನ್ನು ಹಾಕಬೇಕೆಂದು ಯೋಚಿಸಿದ್ದೆ.

ನನ್ನ ತಂದೆಯವರು ಸರಕಾರೀ ನವಕರಿಯಲ್ಲಿದ್ದರೂ ಅದರ ಮೇಲೆ ಅವರ ಪ್ರೇಮವಿರಲಿಲ್ಲ. ಇಷ್ಟೇ ಅಲ್ಲ; ಆ ಸಂಬಂಧವಾಗಿ ಜಿಗುಪ್ಸೆಯೂ ಇತ್ತು. ಆದ ಕಾರಣ ನಾನು ವಕೀಲನಾಗಬೇಕೆಂದು ಅವರು ಉಪದೇಶಿಸಿದ್ದರು. ಆ ಪ್ರಕಾರ ನಾನು ಮುಂದೆ ಬಿ. ಎ. ಎಲ್ ಎಲ್., ಬಿ. ಆದೆ. ಕಾಲೇಜದಲ್ಲಿದ್ದಾಗ ಕರ್ನಾಟಕದ ಕಲ್ಪನೆ ನನ್ನಲ್ಲಿ ಇನ್ನೂ ಉದಯವಾಗಿದ್ದಿಲ್ಲ. ಕರ್ನಾಟಕವು ಪ್ರತ್ಯೇಕ ಎಂಬ ಭಾವನೆ ಇರಲಿಲ್ಲ. ಅದು ರಾಜಕೀಯ ಚಳವಳಿಯಲ್ಲಿ ಮಹಾರಾಷ್ಟ್ರದ ಒಂದು ಅಂಗ ಮಾತ್ರವೇ ಆಗಿತ್ತು. "ಕರ್ನಾಟಕ" ವೆಂಬ ಕಲ್ಪನೆಯೇ ವಿದ್ಯಾರ್ಥಿಗಳಾದ ನಮ್ಮ ಮನದಲ್ಲಿ ಮೂಡಿದ್ದಿಲ್ಲ. ಇಷ್ಟೇ ಅಲ್ಲ, ಧಾರವಾಡ, ವಿಜಾಪುರ, ಬೆಳಗಾವಿ ಜಿಲ್ಹೆಗಳ ನಡುವೆ ಬಳಕೆಯೇ ಬಹಳ

ವಿದ್ದಿಲ್ಲ. ಕಾರವಾರವಂತೂ ತೀರ ಅಪರಿಚಿತ; ಆ ಜಿಲ್ಹೆಗೂ ನಮಗೂ ನಡುವೆ ಸಹ್ಯಾದ್ರಿಯ ದೊಡ್ಡ ಅಡ್ಡ ಗೋಡೆ. ಅಲ್ಲಿಗೆ ಬಂಡಿಯ ಮೇಲೆ ಹೋಗಲಿಕ್ಕೆ ೭-೮ ದಿವಸಗಳು ಹಿಡಿಯುತ್ತಿದ್ದವು. ಅಲ್ಲಲ್ಲಿ ಹಲಕೆಲವು ರಾಜಕೀಯ ಮುಖಂಡರೇನೋ ಕೆಲಸ ಮಾಡುತ್ತಿದ್ದರು. ಆದರೆ ಅವರಿಗೆ ಒಬ್ಬರಿಗೊಬ್ಬರ ಪರಿಚಯ ಇದ್ದಿಲ್ಲ. ಆದರೂ ಪುಣೆಗೆ ಬಂದ ಕನ್ನಡ ವಿದ್ಯಾರ್ಥಿಗಳಲ್ಲಿ ಐಕ್ಯಭಾವ ನೆಯು, ಅವರಿಗೂ ಕೂಡ ಸ್ಪಷ್ಟವಾಗಿ ತಿಳಿಯದಂತೆ ಮೆಲ್ಲಮೆಲ್ಲನೆ ಅಂಕುರಿಸ ತೊಡಗಿತು. ಮರಾಟಿಗರು "ಕಾನಡೀ ಅಪ್ಪಾ" ಎಂದು ನಮ್ಮನ್ನು ಕರೆಯು ತ್ತಿದ್ದರು. ಆದರೆ ಮುಂಚೆ ಅದರಲ್ಲಿ ಕುಚೋದ್ಯಬುದ್ಧಿ ಇರಲಿಲ್ಲ. ಭೇದಬುದ್ಧಿ ಮಾತ್ರವೇ ಇತ್ತು. ಅದೇ ನಮ್ಮ ಕನ್ನಡಿಗರಿಗೆ ಅವರ ಐಕ್ಯಭಾವನೆಗೆ ಪುಟ ಕೊಟ್ಟಿತು. ಸ್ವಾಭಾವಿಕವಾಗಿಯೇ ಕನ್ನಡಿಗರು ತಮ್ಮ ಊಟದ ಕ್ಲಬ್ಬು ಗಳನ್ನು ಬೇರೆ ಮಾಡಿಕೊಂಡರು. ಆದರೆ ನಮ್ಮಲ್ಲಿಯೇ ಮರಾಠಿಯ ಮೋಹವು ಹೋಗಿದ್ದಿಲ್ಲ. ಬ್ರಾಹ್ಮಣರಿಗೆ ಅಲ್ಪ ಸ್ವಲ್ಪ ಮರಾಠಿ ತಿಳಿಯುತ್ತಿದ್ದದರಿಂದ ಮರಾ ಠಿಗರೊಡನೆಯೇ ಹೆಚ್ಚಿಗೆ ಸ್ನೇಹಸಂಬಂಧ ಬೆಳೆಸುತ್ತಿದ್ದರಲ್ಲದೆ ಲಿಂಗಾಯತರೇ ಮುಂತಾದ ಕನ್ನಡಿಗರೊಡನೆ ಅಲ್ಲ. ಲಿಂಗಾಯತರಿಗೆ ಮರಾಠೀ ಭಾಷಾ ಸಂಪರ್ಕ ಕಡಿಮೆ. ಆಗ ಅವರ ಸಂಖ್ಯೆಯೂ ಅತ್ಯಲ್ಪ. ಮರಾಠೀ ಭಾಷೆ ಯಲ್ಲಿ ಲಿಂಗ, ಪ್ರತ್ಯಯ ಮುಂತಾದವುಗಳ ತೊಡಕುಗಳು ಇರದಿದ್ದರೆ ನಮ್ಮಲ್ಲಿ ಎಷ್ಟೋ ಜನರು ಪೂರ್ಣ ಮರಾಟಿಗರಾಗಿ ಹೋಗುತ್ತಿದ್ದರೋ ಏನೋ! ಆ ತೊಡಕೇ ನಮ್ಮ ಕನ್ನಡವನ್ನು ರಕ್ಷಿಸಿದ ಕೋಟೆಯಾಗಿತ್ತು. ಅದೇಕೆ; ಇನ್ನೂ ವರೆಗೆ ಆಗಿದೆಯೆಂದು ಹೇಳಬಹುದು. ಆಗ ನಮ್ಮಲ್ಲಿ ಕನ್ನಡ ಸಂಬಂಧ ವಾಗಿ ಉಜ್ವಲ ಅಭಿಮಾನವಿಲ್ಲದಿದ್ದರೂ, ಅಭಿಮಾನ ಹುಟ್ಟಿಸುವ ಪ್ರಸಂಗ ಗಳು ತಾವಾಗಿಯೇ ಒದಗುತ್ತಿದ್ದವು. ಫರ್ಗ್ಯೂಸನ್ ಕಾಲೇಜದ ದೊಡ್ಡ ಲಾಯಬ್ರರಿಯಲ್ಲಿ ಒಂದೂ ಕನ್ನಡ ಪುಸ್ತಕವಿರಲಿಲ್ಲ. ಇದು ಕನ್ನಡದ ಉಜ್ವಲಾಭಿಮಾನಿಯಾಗಿದ್ದ ರೊದ್ದ ವ್ಯಾಸರಾಯನಿಗೆ ಸಹನವಾಗಲಿಲ್ಲ. ಆತನು ಚಳವಳಿ ಹೂಡಿದನು. ನಾವೆಲ್ಲರೂ ಬಹಳ ಬಡಿದಾಡಿದ ಬಳಿಕ, ನಮ್ಮ ಪಾಲಿಗೆ ೫೦ ರೂ.ಗಳು ಮಂಜೂರ ಮಾಡಲ್ಪಟ್ಟವು. ಆದರೆ ಆ ೫೦ ರೂ. ಗಳಲ್ಲಿ ಯಾವ ಪುಸ್ತಕಗಳನ್ನು ತರಿಸಬೇಕೆನ್ನುವುದು ತಿಳಿಯಲಿಲ್ಲ. ಬಿ. ವೆಂಕಟಾ ಚಾರ್ಯರು ಬಂಗಾಲಿಯಿಂದ ಭಾಷಾಂತರಿಸಿದ ಕನ್ನಡ ಕಾದಂಬರಿಗಳ ಕೆಲವು

ಹೆಸರುಗಳ ಪರಿಚಯು ಮಾತ್ರವೇ ನಮ್ಮ ಜ್ಞಾನದ ಬಂಡವಲು. ಕರ್ನಾಟಕ ವಿದ್ಯಾವರ್ಧಕ ಸಂಘಕ್ಕೆ ಪತ್ರ ಬರೆದು ಅಲ್ಲಿಂದಲೂ, ಮೈಸೂರಿಸಿಂದಲೂ ಕೆಲವು ಪುಸ್ತಕಗಳನ್ನು ತರಿಸಿಕೊಂಡೆವು. ಆದರೆ ಆ ಪುಸ್ತಕಗಳು ಬಂದ ಬಳಿಕ ನಾವು ಆ ಪುಸ್ತಕಗಳನ್ನು ಏಕೆ ತರಿಸಿದೆವೋ ಎಂದೆನಿಸಿತು! ಏಕೆಂದರೆ, ಅವುಗಳಲ್ಲಿ ಬಹುತರವಾಗಿ ಯಾವ ಪುಸ್ತಕವೂ ಕಿರುಬೆರಳಿಗಿಂತ ದಪ್ಪವಾಗಿರಲಿಲ್ಲ. ಹೊಲಸು ಕಾಗದ, ತಪ್ಪು ಮುದ್ರಣ. ಡೆಕ್ಕನ್ ಕಾಲೇಜದಲ್ಲಿ ಕನ್ನಡ ವಿದ್ಯಾರ್ಥಿಗಳಿಗೆ ನಮಗಿಂತ ಹೆಚ್ಚಿನ ಸೌಕರ್ಯಗಳಿದ್ದವು. ಅಲ್ಲಿ ಕನ್ನಡ ವಿದ್ಯಾರ್ಥಿಗಳು ಹೆಚ್ಚು. ಆದರೆ ಅವರಲ್ಲಿಯೂ ಭಾಷಾಭಿಮಾನ ಅಷ್ಟಕ್ಕಷ್ಟೆಯೇ. ಕನ್ನಡಿಗರು ಮರಾಠೀ ನಾಟಕಗಳಲ್ಲಿಯೇ ನಾಯಕ-ನಾಯಕಿಯರ ಪಾತ್ರಗಳನ್ನು ವಹಿಸಿ ಹೆಸರು ಪಡೆಯುವದು ಅಲ್ಲಿಯ ಪದ್ಧತಿ. ಒಮ್ಮೆ ಶ್ರೀ. ವೆಂಕಟ ರಂಗೋ ಕಟ್ಟಿ ಎಂಬ ಪ್ರಸಿದ್ಧ ಕನ್ನಡ ಪ್ರಿನ್ಸಿಪಾಲರ ಮತ್ತು ಲೇಖಕರ ಮಗ ಶ್ರೀನಿವಾಸರಾಯನೆಂಬುವನು ಮರಾಠಿಯ ಶಕುಂತಲ ನಾಟಕದಲ್ಲಿ ಶಕುಂತಲೆಯ ಪಾತ್ರವನ್ನು ವಹಿಸಿ ಮರಾಠಿಗರಿಂದಲೇ ಪ್ರಶಸ್ತಿ ಪಡೆದಿದ್ದನು. ಆದು ನಮಗಿಂತ ಹಿಂದೆ. ನಮ್ಮ ಕಾಲದಲ್ಲಿ ಬಿ. ಜಿ. ಕುಲಕರ್ಣಿ ಎಂಬ ಕನ್ನಡ ವಿದ್ಯಾರ್ಥಿಯು ಡೆಕ್ಕನ್ ಕಾಲೇಜದಲ್ಲಿ ಇದ್ದಾಗ ಅಥೆಲ್ಲೋ ಪಾತ್ರವನ್ನು ವಹಿಸಿ, ತನಗೆ ಮರಾಠೀ ಚೆನ್ನಾಗಿ ಬಾರದಿದ್ದರೂ ಪಾಠಮಾಡಿ ಕಲಿತು, ಅತ್ಯುತ್ಕೃಷ್ಟವಾಗಿ ಪಾತ್ರವನ್ನು ಅಭಿನಯಿಸಿ ತೋರಿಸಿದನೆಂಬುದನ್ನು ಹೇಳಿದರೆ, ಆಗಿನ ನಮ್ಮ ಕನ್ನಡಿಗರ ಮರಾಠಿಯ ಮೋಹದ ಕಲ್ಪನೆಯಾಗಬಹುದು. ಅದೇ ಬಿ. ಜಿ. ಕುಲಕರ್ಣಿಯು, ಮುಂದೆ ನಾನು ಧಾರವಾಡದಲ್ಲಿ ಕನ್ನಡ ಚಳವಳಿಯನ್ನು ಪ್ರಾರಂಭ ಮಾಡಿದಾಗ ಕನ್ನಡದ ಕಟ್ಟಭಿಮಾನಿಯಾದನು. ಮತ್ತು "ಶುಭೋದಯ ಪತ್ರಿಕೆ"ಯ ಸಂಪಾದಕತ್ವವನ್ನು ವಹಿಸಿ, ಕನ್ನಡ ಅಭಿಮಾನಿಗಳಾದ ವಾಸುದೇವಾಚಾರ್ಯರು ನಡೆಯಿಸಿದ ಆ ಶುಭೋದಯ ಪತ್ರಿಕೆಯ ಮೂಲಕವೇ ಅವರಷ್ಟೇ ಅಭಿಮಾನದಿಂದ ಅದನ್ನು ನಡೆಯಿಸಿ ಕೀರ್ತಿ ಪಡೆದನು. ಇರಲಿ, ನಮ್ಮ ಫರ್ಗ್ಯೂಸನ್ ಕಾಲೇಜದ ವಾತಾವರಣವು ತುಸುಮಟ್ಟಿಗೆ ಭಿನ್ನವಾಗಿತ್ತು. ಭಾಷಾಭಿಮಾನದ ಗಾಳಿಯು ದೇಶಾಭಿಮಾನದ ಕೂಡವೇ ಹೊಕ್ಕು ನಮ್ಮಲ್ಲಿ ಸ್ವಲ್ಪ ಸ್ವಲ್ಪ ಸುಳಿಯುತ್ತಿತ್ತು. ಅದು ನಮ್ಮಲ್ಲಿ ಸೇರಿ, ಕೆಲವೊಮ್ಮೆ ನಮ್ಮನ್ನು ಕುಣಿಸುತ್ತಲೂ ಇತ್ತು. ಒಂದಾ

ವರ್ಷಿ ನಮ್ಮಲ್ಲಿ ಹೀಗೆ ವಾಯುಸಂಚಾರವಾಯಿತು. ನಾವೂ ನಾಟಕವಾಡ ಬೇಕೆಂಬ ಆಕಾಂಕ್ಷೆ. ಮರಾಠಿಯಲ್ಲಿ ಆಡಬಾರದೆಂಬ ನಿರ್ಧಾರ. ಕನ್ನಡದಲ್ಲಿ ಮಾಡಬೇಕೇ, ಹಾಗೆ ಆಡಿದರೆ ಆಡುವವರೂ ನಾವೇ, ನೋಡುವವರೂ ನಾವೇ. ಇಂಥ ಸ್ಥಿತಿ. ವಿಚಾರ ಮಾಡಿ ಕೊನೆಗೆ ಕಾಲೇಜುಗಳಲ್ಲಿಯ ರೂಢಿ ಯಂತೆ ಇಂಗ್ಲಿಷ ನಾಟಕವನ್ನು ಕೇವಲ ಕನ್ನಡಿಗರಿಗೇನೇ ಒಪ್ಪಿಸಿ ಬಿಡಬೇಕೆಂದು ಕೇಳಿದೆವು. ಮರಾಠಿಗರು ಇಂಗ್ಲಿಷ ನಾಟಕದಲ್ಲಿ ತಾವೂ ಏಕೆ ಸೇರಬಾರದೆಂದು ವಾದಿಸಿದರು. ವಾದವು ವಿಕೋಪಕ್ಕೆ ಹೋಯಿತು. ಗ್ಯಾದರಿಂಗಕ್ಕೇನೇ ಬಹಿ ಷ್ಕಾರ ಹಾಕಬೇಕೆಂದು ಗೊತ್ತುಮಾಡಿದೆವು. ಆದರೆ ಅದಕ್ಕೆ ಮುಂಚೆ, ಪ್ರೊಫೆಸರರ ಕಿವಿಗೆ ಹಾಕಬೇಕೆಂದು ತಿಳಿದು, ರೊದ್ದ ವ್ಯಾಸರಾಯನೂ ನಾನೂ ಮುಗದಳನೂ ಪ್ರೊ. ರಾಜವಾಡೆಯವರ ಕಡೆಗೆ ಡೆಪ್ಯುಟೇಶನ್ ಹೋದೆವು. ಪ್ರೊ. ರಾಜವಾಡೆ ಯವರು, ಮರಾಠಿಗರ ಕಟ್ಟಭಿಮಾನಿಗಳಾಗಿದ್ದ ಮತ್ತು ಆಗ ಫೆಲೋ ಆಗಿದ್ದ ಶ್ರೀ. ಕಾನೇಟಕರರ ( ಮುಂದೆ ಅವರು ಪ್ರಿನ್ಸಿಪಾಲರಾದರು ) ಮರಾಠಿಯ ತರ್ಫೆಯಿಂದ ವಾದಿಸಿದ್ದನ್ನೂ ನಮ್ಮ ವಾದವನ್ನೂ ಕೇಳಿಕೊಂಡರು. ನಮ್ಮಂತೆ ತೀರ್ಪು ಕೊಟ್ಟರು. ಆಗ ಕಾನೇಟಕರರ ಮೋರೆ ಗುಬ್ಬಿಯ ಮೋರೆ ಆಯಿತು. ನಮ್ಮ ಭಾವಣಿಯಲ್ಲಿ ಟೊಪ್ಪಿಗೆಗಳು ತೂರಾಡಿದವು ! ಮುಂದೆ ವಿಲಕ್ಷಣವಾಗಿ ಬೆಳೆದ ಮರಾಠಿ–ಕನ್ನಡ ಯುದ್ಧಗಳಲ್ಲಿ ಇದೇ ಮೊದಲನೆಯದು. ಮುಂದೆ, ಡೆಕ್ಕನ್ ಎಜ್ಯುಕೇಶನ್ ಸೊಸಾಯಿಟಿಯ ಸುವರ್ಣಮಹೋತ್ಸವದ ಗ್ರಂಥದಲ್ಲಿ, ನನಗೆ ಒಂದು ಲೇಖ ಬರೆಯಲು ಕೇಳಿದಾಗ, ನಾನು ಇಂಗ್ಲಿಷಿನಲ್ಲಿ ಈ ಬಗ್ಗೆ ಸುದೀರ್ಘವಾದ ಲೇಖ ಬರೆದಿರುವೆನು.



# ೬ನೆಯ ಪ್ರಕರಣ

## ಕರ್ನಾಟಕವೇ ನನ್ನ ಕರ್ಮಭೂಮಿ

ನಾನು ಹಿಂದೆ ಹೇಳಿದಂತೆ ನನ್ನ ೧೫-೧೬ನೆಯ ವಯಸ್ಸಿನಿಂದಲೇ ಸಾರ್ವಜನಿಕ ಚಟುವಟಿಕೆಗಳಲ್ಲಿ ಬಿದ್ದು, ಇಂದಿನ ವರೆಗೆ ಅಂದರೆ ೬೦ ವರ್ಷಗಳಿಗಿಂತ ಹೆಚ್ಚು ವರ್ಷಗಳವರೆಗೆ ತೇಲುತ್ತ ಮುಳುಗುತ್ತ ಒಂದಿಲ್ಲೊಂದು ಬಗೆಯಲ್ಲಿ ಸೇವೆಮಾಡುತ್ತ ಬಂದಿರುವೆನೆಂಬುದು ನಿಜವಿದ್ದರೂ ನನ್ನ ವಿದ್ಯಾರ್ಥಿದಸೆಯು ಮುಗಿಯುವ ವರೆಗೆ ಅಂದರೆ, ೧೯೦೫ನೆಯ ಇಸ್ವಿ ವರೆಗೆ ನಾನು ಕೈಕೊಂಡ ಚಟುವಟಿಕೆಗಳಿಗೂ ಮುಂದಿನವುಗಳಿಗೂ ಮಹದಂತರವಿದೆ. ೧೮೯೫ರಿಂದ ೧೯೦೫ರ ವರೆಗಿನ ಚಟುವಟಿಕೆಗಳು ಕೇವಲ ಸ್ವಬುದ್ಧಿಪೂರ್ವಕವಾದ ಚಟುವಟಿಕೆಗಳಲ್ಲ. ಅದರಲ್ಲಿ ಅನುಕರಣ ಭಾಗವು ಹೆಚ್ಚು. ಆಗ ಸ್ಮರಣಶಕ್ತಿಯ ಮೇಲೆ ಭಾರ ಹೆಚ್ಚು. ಸ್ಮರಣಶಕ್ತಿಯೆಂದರೆ ಬಾಹ್ಯಪ್ರಪಂಚದ ರಕ್ಷಣಕೋಶ. ಬರಬರುತ್ತ ಬಾಹ್ಯಪ್ರಪಂಚದಿಂದ ಬಂದ ಸ್ಮೃತಿಗಳನ್ನು ಬುದ್ಧಿಯು ಮೆಲ್ಲಮೆಲ್ಲನೆ ವರೆಗೆ ಹಚ್ಚಿ ತಿಕ್ಕಿ ನೋಡಿ, ಕೆಲವನ್ನು ಮಾತ್ರವೇ ಒಳಗೆ ಬಿಟ್ಟು ಮತ್ತೆ ಕೆಲವನ್ನು ಹೊರದೂಡಹತ್ತುತ್ತದೆ. ಪ್ರೌಢವಿದ್ಯಾರ್ಥಿದಸೆಯೆಂದರೆ ಇಂಥ ಕಾಲ. ಆದರೆ ಈ ದಸೆಯಲ್ಲಿ ಕೂಡ ನನ್ನಲ್ಲಿ ನಿಶ್ಚಿತವಾದ ಧ್ಯೇಯಗಳಿದ್ದಿಲ್ಲ. ಉತ್ತರ ಕರ್ನಾಟಕದಲ್ಲಿ ಆಗ ಒಂದೂ ಕಾಲೇಜ ಇದ್ದಿಲ್ಲ. ಉತ್ತರ ಕರ್ನಾಟಕದ ಕನ್ನಡ ವಿದ್ಯಾರ್ಥಿಗಳು ಮ್ಯಾಟ್ರಿಕ್ ಪರೀಕ್ಷೆಗೆ ಕೂಡುವದಕ್ಕೆ, ಈಗ ಮರಾಠಿಗರು ಮರಾಠಿ ಪಟ್ಟಣವೆಂದು ನಿಷ್ಕಾರಣವಾಗಿ ಹೂಲಿ ಎಬ್ಬಿಸಿದ ಬೆಳಗಾವಿಯೇ ಮ್ಯಾಟ್ರಿಕ್ ಪರೀಕ್ಷೆಗೆ ಕೂಡತಕ್ಕ ಒಂದೇ ಒಂದು ಕನ್ನಡ ಪರೀಕ್ಷಾಕೇಂದ್ರ. ನಾನುಪರೀಕ್ಷೆಯನ್ನು ಮುಗಿಸಿದ ಬಳಿಕ ಪ್ಲೇಗಿನ ಮೂಲಕ ಒಂದೆರಡು ವರ್ಷ ಕಾಲೇಜ ಅಭ್ಯಾಸ ನನಗೆ ಲಭಿಸಲಿಲ್ಲ. ಮುಂದೆ ಮರಾಠೀ ಮಧ್ಯವರ್ತಿ ಸ್ಥಳವಾದ ಮತ್ತು ಧಾರವಾಡದಿಂದ ಸುಮಾರು ೩೦೦ ಮೈಲು ದೂರವಿರುವ

ಪುಣೆಗೆ ಹೋಗಬೇಕಾಯಿತು. ಸುತ್ತಲಿನ ವಾತಾವರಣ ಮರಾಠಿಯದು. ನನಗೆ ಮರಾಠಿ ಬರುತ್ತಿದ್ದಿಲ್ಲವಾದ ಕಾರಣ ಅಲ್ಲಿಯ ಜನರ ಮತ್ತು ವಿದ್ಯಾರ್ಥಿಗಳ ಸಂಪರ್ಕ ಕಡಿಮೆಯಿತ್ತು. ಅಲ್ಲದೆ ಕಾಲೇಜುಗಳೆಂದರೆ ಒಂದು ತರದಿಂದ ಗುರುಕುಲಗಳೇನೋ ಅಹುದು. ಆದರೆ ಆ ಗುರುಕುಲಗಳಲ್ಲಿ ಗುರುಗಳಿಗೂ ಶಿಷ್ಯರಿಗೂ ವಿಶೇಷ ಸಂಬಂಧವಿಲ್ಲ. ದೇವರ ಗುಡಿಯ ಬಾಗಿಲು ಮುಚ್ಚಿದ ದೇವಾಲಯಗಳು ಅವು. ಕಿಂಡಿಯೊಳಗಿಂದ ಮಾತ್ರ ದೇವರ ದರ್ಶನ. ಹೊರಗಿನ ಜಗತ್ತಿನ ಸಂಬಂಧವಾದರೂ ಇತ್ತೆನ್ನಬೇಕೇ? ಅದೂ ಇಲ್ಲ. ನಾವು ವಾಸಮಾಡುವದು ಊರ ಹೊರಗೆ ದೂರ ಫರ್ಗ್ಯೂಸನ್ ಕಾಲೇಜದ ಹತ್ತಿರಿರುವ ಹಾಸ್ಟೆಲ್ಲುಗಳಲ್ಲಿ. ಮೇಲಾಗಿ ಹಾಸ್ಟೆಲ್ಲುಗಳಲ್ಲಿಯ ವಿದ್ಯಾರ್ಥಿಗಳೆಲ್ಲರೂ ಬಹುಶಃ ಮರಾಠಿಗರೇ. ನಾಸು ಅಲ್ಲಿಗೆ ಹೋದಾಗ ೨೦-೨೫ ವಿದ್ಯಾರ್ಥಿಗಳದೊಂದು ಕನ್ನಡ ಕ್ಲಬ್ಬು. ನಾನು ಫರ್ಗ್ಯೂಸನ್ ಕಾಲೇಜಕ್ಕೆ ಹೋದ ಬಳಿಕ ಸುಪರಿಂಟೆಂಡೆಂಟನಾಗಿ ಮತ್ತೊಂದು ಕನ್ನಡ ಕ್ಲಬ್ಬು ತೆಗೆದೆ. ಇರಲಿ, ಈ ಕಾರಣದ ಮೂಲಕ ಹೊರಗಿನ ಜಗತ್ತಿನ ಸಂಬಂಧವೇ ವಿಶೇಷ ಬರಲಿಲ್ಲ. ಮೇಲಾಗಿ ಪುಣೆಯ ಊರ ಭಾಷೆ ಮರಾಠಿ. ಜನರೆಲ್ಲರೂ ಅಪರಿಚಿತರು. ಇದೂ ಸಾಲದುದಕ್ಕೆ ನಾವು ಕಾಲೇಜುಗಳಲ್ಲಿದ್ದ ದಿವಸಗಳಲ್ಲಂತೂ ಸಾರ್ವಜನಿಕ ಚಟುವಟಿಕೆಗಳ ಕಡೆಗೆ ಕಣ್ಣೆತ್ತಿ ಕೂಡ ನೋಡಬಾರದೆಂದು ಎಜ್ಯೂಕೇಶನ್ ಡಾಯರೆಕ್ಟರರ ಕಟ್ಟಪ್ಪಣೆ. ಹೀಗಾಗಿ ನನ್ನ ಬಾಲ್ಯದಲ್ಲಿದ್ದಷ್ಟು ಕೂಡ ಸ್ವಾತಂತ್ರ್ಯವು ನನಗೆ ಈ ಅವಧಿಯಲ್ಲಿ ಸಿಗಲಿಲ್ಲ.

ಆದರೆ ಮತ್ತೊಂದು ದೃಷ್ಟಿಯಿಂದ ಈ ಕಾಲಕ್ಕೆ ವಿಶೇಷ ಮಹತ್ವವಿದೆ. ಈ ಕಾಲದಲ್ಲಿ ಬುದ್ಧಿಯು ಮೆಲ್ಲಮೆಲ್ಲನೆ ಅರಳುತ್ತಿರುತ್ತದೆ. ಸ್ಮರಣಶಕ್ತಿಯು ಹಿಂಬದಿಗೆ ಹೋಗುತ್ತಿರುತ್ತದೆ. ವಸ್ತುತಃ ಮನುಷ್ಯನು ಮುಕ್ಕಣ್ಣನು. ಆ ಮೂರು ಕಣ್ಣುಗಳು ಯಾವವೆಂದರೆ (೧) ಶಾರೀರಿಕ ಕಣ್ಣು (Physical Eye). (೨) ಮಾನಸಿಕ ಕಣ್ಣು (Mental Eye). (೩) ಆಧ್ಯಾತ್ಮಿಕ ಕಣ್ಣು (Spiritual Eye). ಹೀಗೆ ಕಣ್ಣುಗಳು ಮಾತ್ರವೇ ಮೂರು ಇರುತ್ತವೆಂತಲ್ಲ; ಆತನು ಮುಕ್ಕಿವಿಯವನೂ ಹೌದು. ಮೂರು ನಾಲಗೆಯವನೂ ಹೌದು. ಮೂರು ಮೂಗಿನವನೂ ಹೌದು. ಹೀಗೆ ಎಲ್ಲವೂ ಮೂರು ತರಹದವು. ಕಣ್ಣುಗಳಿಗೆ ಹೊರಗಣ್ಣು ಮಿಕ್ಕೆರಡಕ್ಕೆ ಒಳಗಣ್ಣು,

ಒಳಗಣ್ಣು ಎಂದು ಕರೆಯಬಹುದು. ಇದೇ ಪ್ರಕಾರ ಪ್ರತಿಯೊಂದರಲ್ಲಿಯೂ ಮೂರು ಭೇದ. ಇವುಗಳಲ್ಲಿ ಮೊದಲಿನವೆರಡು ಪ್ರಾಕೃತೇಂದ್ರಿಯ. ಮೂರನೆಯದು ಅಪ್ರಾಕೃತೇಂದ್ರಿಯ. ಇವೆಲ್ಲವುಗಳ ವಿಕಾಸವಾಗುವದು ಅವಶ್ಯ. ಮಾನವನು ಮುಂಚೆ, ಹೊರಗಣ್ಣಿನಿಂದ ಪ್ರಪಂಚವನ್ನು ನೋಡುತ್ತಾನೆ. ಮೆಲ್ಲ ಮೆಲ್ಲನೆ ಒಳಗಣ್ಣು ಅರಳಹತ್ತುತ್ತದೆ. ಹೊರಗಣ್ಣಿಗೆ ಕಾಣುವ ಜಗತ್ತೇ ಬೇರೆ; ಒಳಗಣ್ಣಿಗೆ ಕಾಣುವ ಜಗತ್ತೇ ಬೇರೆ. ಹೊರಗಣ್ಣಿನಿಂದ ನೋಡುವದೇ ನಿಜವಾದ ಬಾಲ್ಯದಸೆ. ಒಳಗಣ್ಣಿನಿಂದ ನೋಡುವದೇ ಪ್ರೌಢದಸೆ. ಒಳಒಳಗಣ್ಣಿನಿಂದ ನೋಡುವದೇ ಪರಿಪಕ್ವದಸೆ. ನಿಜವಾಗಿ ಇವು ಕೇವಲ ವಯಸ್ಸಿಗೆ ಸಂಬಂಧಿಸಿರುವದಿಲ್ಲ. ಆದರೂ ಪ್ರೌಢವಿದ್ಯಾರ್ಥಿದಸೆಯೆಂದರೆ ಎರಡನೆಯ ತರಗತಿಯ ದಸೆಯೆಂದು ಸಾಮಾನ್ಯವಾಗಿ ಹೇಳಬಹುದು. ಒಂದು ಕಣ್ಣು ತೆರೆದಾಗ ಮಿಕ್ಕೆರಡು ಕಣ್ಣುಗಳು ಬಹುಶಃ ಮುಚ್ಚಿರುತ್ತವೆ. ಒಳಒಳಗಣ್ಣು ತೆರೆಯಿತೆಂದರೆ ಇಡೀ ಜಗತ್ತೇ ಆತನ ಮುಂದೆ ಸ್ಪಷ್ಟವಾಗಿ ತೆರೆದು ನಿಲ್ಲುತ್ತದೆ. ಈ ಮೂರೂ ಕಣ್ಣುಗಳನ್ನು ಕೂಡ ತೆರೆದಿಟ್ಟು ಜಗತ್ತನ್ನು ನೋಡುವದು ಶಕ್ಯವಿದೆ. ಅದೇ ಅಪರೋಕ್ಷಜ್ಞಾನ. ಅದರ ಪರಮಾವಧಿಯೇ ಮುಕ್ತಿ. ಇರಲಿ.

ನಾನು ಕರ್ನಾಟಕದ ಸೇವೆಯೊಂದನ್ನೇ ಮಾಡಬೇಕೆಂದು ನಿಶ್ಚಯಿಸಿದೆನು. ಸ್ವದೇಶೀ ಚಳವಳಿಯನ್ನೇ ಮಾಡಲಿ, ರಾಷ್ಟ್ರೀಯ ಶಿಕ್ಷಣವನ್ನೇ ಕೈಕೊಳ್ಳಲಿ ಅವೆಲ್ಲಕ್ಕೂ ಕರ್ನಾಟಕವೊಂದನ್ನೇ ಕೇಂದ್ರ ಮಾಡಬೇಕೆಂದು ನಿಶ್ಚಯಿಸಿದಾಗ ನನಗೆ ಅನೇಕ ಕೆಲವು ಹೆಚ್ಚಿನ ಆಕಾಂಕ್ಷೆಗಳನ್ನು ಬಿಟ್ಟುಕೊಡಬೇಕಾಯಿತು. ಉದಾ :— ಕೇವಲ ಕೀರ್ತಿಕಾಮಿನಿಗೇ ಮರುಳಾಗಿದ್ದರೆ, ಇಡೀ ಭಾರತದ ವ್ಯಾಪಕವಾದ ಸೇವೆಯನ್ನು ಕೈಕೊಳ್ಳುವದು ಆಗಿನ ಕಾಲದಲ್ಲಿ ಹೆಚ್ಚು ಸುಲಭವಾಗಿತ್ತು. ಏಕೆಂದರೆ, ಭಾರತದ ಸೇವೆಗೆ ಬಲು ಬೇಗ ಕೀರ್ತಿ. ಆದರೆ ಅದು ವ್ಯಾಪಕವಾದ ಸೇವೆಯಾದರೂ ಅಚ್ಚುಕಟ್ಟಿನ ಕೃತಿಯಲ್ಲ ( Solid work ). ಭಾರತಸೇವೆಯ ವ್ಯಾಪಕ ಕ್ಷೇತ್ರದಲ್ಲಿ ನನ್ನ ಜೀವನ ಪ್ರವಾಹವನ್ನು ಹರಿಬಿಡುವದರಿಂದ ಆ ಪ್ರವಾಹವು ಆಳವಾಗದೆ ಅಗಲವಾದರೂ ತೆಳ್ಳಗಾಗಿ ಹರಿಯಬಹುದೆಂದು ಬಗೆದು ಆ ವಿಚಾರವನ್ನು ಬಿಟ್ಟುಕೊಟ್ಟೆನು. ಒಂದು ದಪ್ಪ ತಗಡನ್ನು ಸುತ್ತಿಗೆಯಿಂದ ಬಡಿದರೆ ಆ ತಗಡು ಅಗಲವೇನೋ

ಆಗಬಹುದು. ಆದರೆ ಅದರ ದಪ್ಪವು ಕಡಿಮೆಯಾಗಿ ಅದು ತೆಳ್ಳಗಾಗಲೇ ಬೇಕು. ಕಗ್ಗತ್ತಲೆಗವಿದ ಕರ್ನಾಟಕದಲ್ಲಿ ಕೆಲಸ ಮಾಡುವದು ಅತ್ಯಂತ ಕಠಿಣ ಕೆಲಸ ವೆಂಬುದೂ ನನ್ನ ಉತ್ಸಾಹವೆಲ್ಲ ಕಲ್ಲ ಮೇಲೆ ನೀರಿನ ಕೊಡ ಸುರುವಿದಂತಾ ಗುವದೆಂಬ ವಿಚಾರವೂ ಕೆಲವೊಮ್ಮೆ ನನ್ನನ್ನು ಹಿಂಜೆಗ್ಗುತ್ತಿದ್ದವು. ಕೀರ್ತಿ ಕಾಮಿನಿಯ ಕುಡಿನೋಟಗಳೂ ಕೆಲವೊಮ್ಮೆ ನನ್ನನ್ನು ಭಾರತ ಸೇವೆಯ ಕಡೆಗೆ ಮನವೊಲಿಸುತ್ತಿದ್ದವು. ಆದರೆ ಆಳವಾದ ವಿಚಾರ ಮಾಡಿ ಕರ್ನಾಟಕ ವನ್ನಷ್ಟೇ ಕಾರ್ಯಕ್ಷೇತ್ರವನ್ನಾಗಿ ಇಟ್ಟುಕೊಳ್ಳುವದೇ ಲೇಸೆಂದು ಬಗೆದು ಅದನ್ನೇ ಧ್ಯೇಯವನ್ನಾಗಿ ಇಟ್ಟುಕೊಳ್ಳುವ ದೃಢನಿಶ್ಚಯ ಮಾಡಿದೆನು. ಹೆಚ್ಚಿನ ಹವ್ಯಾಸಕ್ಕೆ ಹೋಗಲಿಲ್ಲ. ಇದಕ್ಕಿಂತ ಹೆಚ್ಚಿನ ಕಾರಣವೆಂದರೆ, ಕನ್ನಡಿಗರೇ ಕರ್ನಾಟಕದಲ್ಲಿ ಕಾರ್ಯ ಮಾಡದಿದ್ದರೆ ಇನ್ನಾರು ಮಾಡುವವರು? ಮರಾಟಿ ಗರು ಮಾಡಬೇಕೇ? ತೆಲುಗರು ತಮಿಳರು ಮಾಡಬೇಕೇ? ಕನ್ನಡ ಭಾಷೆ ಯನ್ನು ಮತ್ತು ಇಲ್ಲಿಯ ಸ್ಥಿತಿಗತಿಗಳನ್ನು ಪೂರಾ ಅರಿಯದವರಿಂದ ಅಂಥ ಕಾರ್ಯವು ಆದೀತೇ? ಆದರೂ ತೃಪ್ತಿಕರವಾಗಿ ಆದೀತೇ? ಹಿಂದುಳಿದ ಪ್ರಾಂತದಲ್ಲಿ ಕಾರ್ಯಮಾಡುವದು ಹತ್ತುಪಟ್ಟು ಕಠಿಣವೆಂಬುದೇನೋ ನಿಜ. ಆದರೆ ಯಾರಾದರೂ ಯಾವಾಗಲೊಮ್ಮೆ ಅದನ್ನು ಕೈಕೊಳ್ಳಲೇಬೇಕಲ್ಲವೇ? ಹಾಗೆ ಮಾಡದಿರುವದು ಕನ್ನಡಿಗರಿಗೆ ಅಪಮಾನಕರವಲ್ಲವೇ? ಕರ್ನಾಟಕಸ್ಥ ರಲ್ಲಿ ಇಂಥ ವಿಚಾರಗಳು ಇಲ್ಲದ ಮೂಲಕವೇ ಕರ್ನಾಟಕದ ಬುದ್ಧಿಯ ಉಪಯೋಗವು ಕರ್ನಾಟಕಕ್ಕಾಗದೆ ಅನ್ಯರಿಗೆ ಆಗಹತ್ತಿದೆ. ಕರ್ನಾಟಕದ ಹಣದ ಲಾಭವು ಅನ್ಯರಿಗೆ ಆಗಹತ್ತಿದೆ. ಈ ಬಗೆಯ ವಿಚಾರಗಳೇ, ನಾನು ಕರ್ನಾಟಕವನ್ನಷ್ಟೇ ಧ್ಯೇಯವನ್ನಾಗಿ ಇಟ್ಟುಕೊಳ್ಳಲು ಕಾರಣಗಳಾದವು.

ಹೀಗೆ ನಾನು ಕಾರ್ಯಕ್ಷೇತ್ರ ನಿಶ್ಚಯಿಸಿದ ಬಳಿಕ ನನ್ನ ಮುಂದಿನ, ಮಹತ್ವದ ಪ್ರಶ್ನೆಯೆಂದರೆ, ಯಾವ ವಿಷಯವನ್ನು ಕೈಕೊಂಡು ಕೆಲಸ ಮಾಡ ಬೇಕೆಂಬುದು. ನನಗೆ ನನ್ನ ಜೀವಿತವು ಪ್ರಾಪ್ತವಾದುದು ಯಾವದೋ ಒಂದು ವಿಶಿಷ್ಟ ಉದ್ದೇಶಕ್ಕಾಗಿ ಇದೆ, ಎಂಬುದರ ಅರಿವು ಆಗ ಉಂಟಾಗಿ ತ್ತೇನೋ ಸರಿ. ಆದರೆ ಆ ವಿಶಿಷ್ಟ ಉದ್ದೇಶವು ಯಾವುದೆಂಬದರ ಅರಿವು ಆಗ ನನಗೆ ಇರಲಿಲ್ಲ. ಒಮ್ಮೆ ವಾಙ್ಮಯ ಸೇವೆಯನ್ನು ಮಾಡಬೇಕೆಂಬ ಹಂಬಲ ನನ್ನನ್ನು ಹಿಡಿದೆಳೆಯುತ್ತಿತ್ತು; ಮತ್ತೊಮ್ಮೆ ಇತಿಹಾಸ ಸಂಶೋಧಕನಾಗ

ಬೇಕೆಂದು ಹವಣಿಸುತ್ತಿದ್ದೆ; ಮಗುದೊಮ್ಮೆ ರಾಜಕಾರಣದ ಪ್ರಚಂಡ ಹೊಳೆಯಲ್ಲಿ ಧುಮುಕಿ ಈಸಬೇಕೆಂಬ ಹುಮ್ಮಸ; ಬೇರೊಮ್ಮೆ ಕರ್ನಾಟಕದ ಏಕೀಕರಣದ ಕಾರ್ಯದಲ್ಲಿ ತೊಡಗಬೇಕೆಂಬ ತಿಂಡಿ; ಇನ್ನೊಮ್ಮೆ ಪ್ರಶಾಂತವಾದ ಧಾರ್ಮಿಕ ಜೀವನವನ್ನು ಕೈಕೊಳ್ಳಬೇಕೆಂಬ ಲವಲವಿಕೆ. ಈ ಪ್ರಕಾರವಾಗಿ ನಾನಾ ಧ್ಯೇಯಗಳ ತಾಕಲಾಟದಲ್ಲಿ ತೊಳಲಿದೆ; ಪೀಕಲಾಟಕ್ಕೆ ಒಳಗಾದೆ. ಅವು ನನ್ನನ್ನು ವಿರುದ್ಧ ದಿಸೆಗಳಲ್ಲಿ ಎಳೆಯುತ್ತಿದ್ದವು. ಅವುಗಳ ತಿಕ್ಕಾಟದಲ್ಲಿ ಮುಕ್ಕಾಟದಲ್ಲಿ ಕಲಕಾಟದಲ್ಲಿ ಬೆಂದು ಹಣ್ಣಾದೆ. ಕೊನೆಗೆ ಕರ್ನಾಟಕತ್ವವನ್ನು ಬಲಪಡಿಸುವ **ಯಾವತ್ತೂ ಚಳವಳಿಗಳನ್ನು** ಕೈಕೊಳ್ಳಬೇಕೆಂಬ ನಿರ್ಧಾರಕ್ಕೆ ಬಂದು ತಲುಪಿದೆ. ಕರ್ನಾಟಕದ ಸರ್ವಾಂಗೀಣ ಉನ್ನತಿಗಿಂತ ಹೆಚ್ಚಿನ ಧ್ಯೇಯವನ್ನೂ ಇಟ್ಟುಕೊಳ್ಳಲಿಲ್ಲ, ಕಡಿಮೆ ಧ್ಯೇಯವನ್ನೂ ಇಟ್ಟುಕೊಳ್ಳಲಿಲ್ಲ. "ಸಮಗ್ರ ಕರ್ನಾಟಕ ದೃಷ್ಟಿ"ಯೇ ನನ್ನ ಯಾವತ್ತೂ ಚಳವಳಿಗಳನ್ನು ಅಳೆಯುವ ಅಳತೆಗೋಲು. ಆದ ಕಾರಣ ನನ್ನ ಚಳವಳಿಗಳನ್ನು ಒರೆಗೆ ಹಚ್ಚುವವರು ಈ ಮಾತನ್ನು ಮರೆಯದಿರಬೇಕು. ಸಾಮಾನ್ಯವಾಗಿ ಒಂದೊಂದೇ ಕ್ಷೇತ್ರವನ್ನು ಆಯುಷ್ಯದ ಮುಖ್ಯ ಧ್ಯೇಯವನ್ನಾಗಿ ಇಟ್ಟುಕೊಂಡವರೇ ಬಹಳ ಮಂದಿ. ಒಬ್ಬೊಬ್ಬರಿಗೆ ಒಂದೊಂದು ವಿಷಯದಲ್ಲಿ ವಿಶೇಷ ಅಭಿರುಚಿ ಇರುತ್ತದೆ. ಆದರೆ ನನಗೇನೂ ವಿಶಿಷ್ಟವಾದ ಅಭಿರುಚಿ ಇದ್ದಿಲ್ಲ; ಲೋಕವಿಲಕ್ಷಣವಾದ ಪ್ರತಿಭೆಯಿಲ್ಲ; ಎಲ್ಲ ವಿಷಯಗಳಲ್ಲಿಯೂ ಸಾಮಾನ್ಯ ಅಭಿರುಚಿ. ಆದ ಕಾರಣವೇ ದೇವರು ಆ ಕಾಲಕ್ಕೆ ನನ್ನನ್ನು ಕರ್ನಾಟಕದ ರಂಗಭೂಮಿಗೆ ತಂದನೋ ಏನೋ! ಏಕೆಂದರೆ, ನನ್ನ ಅಭಿಪ್ರಾಯದಲ್ಲಿ ಆಗ ಕರ್ನಾಟಕಕ್ಕೆ ಅಂಥ ಕಾರಣಪುರುಷನೇ ಬೇಕಾಗಿದ್ದನು. ಆಗ ಕರ್ನಾಟಕದ ಯಾವ ಅವಯವದಲ್ಲಿಯೂ ಚೈತನ್ಯವಿರಲಿಲ್ಲ. ಚೈತನ್ಯವನ್ನು ಹುಟ್ಟಿಸುವದೇ ಮೊದಲು ಮಾಡಬೇಕಾದ ಮುಖ್ಯ ಕಾರ್ಯವಾಗಿತ್ತು. ಸಾರಾಂಶ, ಪೂರ್ಣವಾದ ವಿಚಾರ ಮಾಡಿ ನನ್ನ ಸ್ವಭಾವ, ನನ್ನ ಯೋಗ್ಯತೆ, ಆಗಿನ ಕಾಲದ ಕರ್ನಾಟಕದ ಪರಿಸ್ಥಿತಿ ಮತ್ತು ಆಗಿನ ಕಾಲಮಾನ ಇವೇ ಮುಂತಾದವುಗಳನ್ನು ಲಕ್ಷ್ಯದಲ್ಲಿ ತಂದುಕೊಂಡೇ ನಾನು "ಕರ್ನಾಟಕದ ಸರ್ವಾಂಗೀಣ ಉನ್ನತಿ"ಯನ್ನು ನನ್ನ ಮುಖ್ಯ ಧ್ಯೇಯವನ್ನಾಗಿ ಇಟ್ಟುಕೊಂಡಿದ್ದೆ. ಇದೇ ನನ್ನ ಸಾರ್ವಜನಿಕ ಜೀವನದ ವೈಶಿಷ್ಟ್ಯ.

ನನ್ನ ಸಾರ್ವಜನಿಕ ಜೀವನವು ಅನೇಕರಿಗೆ ಒಂದು ಒಗಟವಾಗಿತ್ತು. ನಾನು ಯಾವದೊಂದು ಚಳವಳಿಯನ್ನು ಅಥವಾ ಸಂಸ್ಥೆಯನ್ನು ಗಟ್ಟಿಯಾಗಿ ಹಿಡಿದುಕೊಳ್ಳದೆ, ಪಾತರಗಿತ್ತಿಯಂತೆ ಈ ಹೂವಿನಿಂದ ಆ ಹೂವಿಗೆ ಆ ಹೂವಿನಿಂದ ಈ ಹೂವಿಗೆ ಹಾರುತ್ತಿರುವೆನೆಂದು ಅನೇಕರು ಮೊದಲಿನಿಂದಲೂ ಆಕ್ಷೇಪವೆತ್ತುತ್ತಿದ್ದರು. ಅರ್ಥಾತ್ ಈಗ ನನ್ನ ಆ ಧೋರಣೆಯ ಪ್ರತ್ಯಕ್ಷ ಫಲವು ಕರ್ನಾಟಕ ರಾಜ್ಯನಿರ್ಮಾಣದಲ್ಲಿ ಕೊನೆಗಂಡದ್ದು ಪ್ರತ್ಯಕ್ಷವಾಗಿರುವದರಿಂದ ಆಗಿನ ನನ್ನ ಧೋರಣವೇ ಸರಿಯಾದ ಧೋರಣವೆಂಬುದು ಎಲ್ಲರಿಗೂ ಮನವರಿಕೆಯಾಗಿರಬೇಕು. ಇರಲಿ, ನಾನು ಮೊದಲಿನಿಂದಲೂ ಆ ಆಕ್ಷೇಪಕ್ಕೆ ಉತ್ತರ ಕೊಡುತ್ತ ಬಂದಿರುವೆ. ಆದರೆ ನನ್ನ ಸಂಗಡ ದಟ್ಟವಾಗಿ ಇರುವವರಿಗೂ ಕೂಡ ಅದರ ಮರ್ಮವು ಪೂರ್ಣವಾಗಿ ಆಕಲನವಾಗಲಿಲ್ಲ. ಮಿಕ್ಕವರಿಗೆ ಆಕಲನವಾಗದಿದ್ದರೆ ಆಶ್ಚರ್ಯವೇನೂ ಅಲ್ಲ. ನಾನು ಅನೇಕ ಕ್ಷೇತ್ರಗಳಲ್ಲಿ ಕೆಲಸ ಮಾಡಿರುವದರಿಂದ ಆಯಾ ಕ್ಷೇತ್ರಗಳಲ್ಲಿದ್ದವರು, ನಾನು ಆ ತಮ್ಮ ಕ್ಷೇತ್ರದಲ್ಲಿಯೇ ಆಜೀವ ಕಾರ್ಯ ಮಾಡಬೇಕೆಂದು ಬಯಸುವದೂ ಸ್ವಾಭಾವಿಕ; ಮತ್ತು ಆಕ್ಷೇಪ ಎತ್ತಿದ್ದೂ ಸಹಜವಾಗಿದೆ. ಸಾರಾಂಶ, ನಾನು ಅನೇಕರಿಗೆ ಅನೇಕ ಬಗೆಯಾಗಿ ತೋರಿದೆ. ಇದರಲ್ಲಿ ನನಗೆ ಒಂದೇ ಸಂತೋಷ. ಯಾರೂ ನನ್ನ ಮೇಲೆ ಡಾಂಭಿಕತನದ ಆರೋಪವನ್ನಾಗಲಿ, ಚಂಚಲವೃತ್ತಿಯ ಆರೋಪವನ್ನಾಗಲಿ, ಕೂಟನೀತಿಯ ಆರೋಪವನ್ನಾಗಲಿ ಮಾಡಲಿಲ್ಲ. ನಾನು ಕೈಕೊಂಡ ಕೆಲಸವನ್ನು ವೈಯುಳಿಸಿಕೊಳ್ಳದೆ, ಅಷ್ಟೇ ಅಲ್ಲ, ವೈಮುರೆತು ವೈಮನ ನುಗ್ಗು ಮಾಡಿಕೊಂಡು ಯಾತರ ಪರಿವೆಯನ್ನೂ ಯಾರ ಹಂಗನ್ನೂ ಹಿಡಿಯದೆ ಮಾಡುವ ಸ್ವಭಾವದವನೆಂಬುದು ಜನರಿಗೆ ಗೊತ್ತು. ಇದಕ್ಕಿಂತ ಬೇರೆ ಹಾದಿ ಹಿಡಿದಿದ್ದರೆ ಒಳಿತಾಗುತ್ತಿತ್ತೆಂದು ಕನಿಕರ ಪಡುವ ಜನರೇ ಬಹಳ. ಅವರ ಅಂಬೋಣದಲ್ಲಿ ತಥ್ಯಾಂಶವೇನೂ ಇದ್ದಿಲ್ಲವೆಂದು ನಾನು ಹೇಳುವದಿಲ್ಲ. ಮೇಲೆ ಮೇಲೆ ನೋಡುವವರಿಗೆ ನನ್ನ ಜೀವನವು ಹಾಗೆ ವಿರೋಧಾಭಾಸದಿಂದ ಕಾಣುವದೇನೂ ಸುಳ್ಳಲ್ಲ. ಆದರೆ ನಾನು ಹೇಳುವದು ಇಷ್ಟೇ. ಈ ಆಕ್ಷೇಪಗಳನ್ನು ಮುಂಚೆಯೇ ಸಂಪೂರ್ಣವಾಗಿ ಯೋಚಿಸಿ, ನನ್ನ ಮಾರ್ಗವನ್ನು ಬುದ್ಧಿಪುರಸ್ಸರವಾಗಿ ಕೈಕೊಂಡಿದ್ದೆ. ಅಖಂಡ ಕರ್ನಾಟಕ ನಿರ್ಮಾಣಕ್ಕೆ ನಾನು ಕೈಕೊಂಡ ಆ ಮಾರ್ಗವೇ ಸರಿಯಾಗಿತ್ತೆಂಬದು ಈಗಲಂತೂ

ಎಲ್ಲರೂ ಒಪ್ಪಬಹುದಷ್ಟೆ! ಇರಲಿ, ಆಗ ಅದು ನನ್ನ ವಿಚಾರಪೂರ್ವಕವಾದ ಶ್ರದ್ಧೆ; ( Conviction ) ಆತ್ಮವಿಶ್ವಾಸ. ಅದರ ತಪ್ಪು-ಒಪ್ಪುಗಳಿಗೆ ರಡಕ್ಕೂ ನಾನು ಹೊಣೆಗಾರನು.

ಸ್ವಲ್ಪ ವಿಚಾರ ಮಾಡಿ ನೋಡಿದರೆ ನಾನು ಕೈಕೊಂಡ ಮಾರ್ಗವೂ ನಾನು ಮಾಡಿದ ಚಿಕಿತ್ಸೆಯೂ ಆಗಿನ ಕಾಲಕ್ಕೆ ಸರಿಯಾದುವೇ ಇದ್ದವೆಂಬದು ಸಹಜವಾಗಿ ಗೊತ್ತಾಗುವದು. ನಾನು ಬರೀ ವಕೀಲಿಯೊಂದನ್ನೇ ಮಾಡಿದ್ದರೆ ಸಣ್ಣ ವಕೀಲನೋ ದೊಡ್ಡ ವಕೀಲನೋ ಆಗುತ್ತಿದ್ದೆ. ಹಾಯಸ್ಕೂಲಿನಲ್ಲಿ ಆಜೀವ ಸಭಾಸದನಾಗಿದ್ದರೆ ಕುಶಲ ಶಿಕ್ಷಕನೋ ಅಕುಶಲ ಶಿಕ್ಷಕನೋ ಆಗಿ ಉಳಿಯುತ್ತಿದ್ದೆ. ಇತಿಹಾಸವನ್ನಷ್ಟೇ ಕ್ಷೇತ್ರವನ್ನಾಗಿ ಮಾಡಿಕೊಂಡಿದ್ದರೆ ಸಂಶೋಧಕನಾಗಬಹುದಾಗಿತ್ತು. ಸಾಹಿತ್ಯವನ್ನು ಕೈಕೊಂಡಿದ್ದರೆ ಸ್ವಬುದ್ಧಿಯಿಂದಲೋ ಅನ್ಯರಿಂದ ಕದ್ದುಕೊಂಡೋ ಇನ್ನೂ ಕೆಲವು ಗ್ರಂಥಗಳನ್ನು ಬರೆಯಬಹುದಾಗಿತ್ತು. ಕಥೆಗಳ ಕಡೆಗಂತೂ ಎಂದೂ ಒಲವಿಲ್ಲ. ಕವಿತಾಶಕ್ತಿಯಂತೂ ಇದ್ದೇ ಇಲ್ಲ. ಆದರೂ ಪ್ರಗತಿಶೀಲ ಕಥಾಪ್ರಪಂಚದಲ್ಲಿ ಕಥೆಗಳನ್ನೂ ನವ್ಯಕಾವ್ಯ ಪ್ರಪಂಚದಲ್ಲಿ ಹೆಸರಿಗಾದರೂ ಕವಿತೆಯನ್ನು ಬರೆಯಬಹುದಾಗಿತ್ತು !

ಕರ್ನಾಟಕವೆಂಬುದೇ ಅಸ್ತಿತ್ವದಲ್ಲಿ ಇಲ್ಲದಾಗ ಅದಕ್ಕೆ ಅಸ್ತಿತ್ವವನ್ನು ತಂದುಕೊಡುವದೇ ಮುಖ್ಯ ಕೆಲಸವಲ್ಲವೇ? ಏನೋ ಮತ್ತು ಯಾವುದೋ ಒಂದು, ಭಾಷೆಯ ಅಂತಃಸ್ಫೂರ್ತಿಯಿಂದಲೆ, ಧಾರವಾಡದಲ್ಲಿಯ ವಿದ್ಯಾವರ್ಧಕ ಸಂಘಕ್ಕೆ ಅದರ ಸ್ಥಾಪಕರು " ಕರ್ನಾಟಕ ವಿದ್ಯಾವರ್ಧಕ ಸಂಘ " ಎಂದು ಹೆಸರಿಟ್ಟರು. ಆದರೆ ನಿಜವಾಗಿ ಕರ್ನಾಟಕದ ಸ್ಪಷ್ಟವಾದ ರಾಷ್ಟ್ರೀಯ ಕಲ್ಪನೆಯು ಆಗ ಇರಲಿಲ್ಲ. ಮರಾಟಿಗರಿಗೆ ಮರಾಟಿಯ ಅಭಿಮಾನವಿದ್ದಂತೆ ನಮಗೂ ಕನ್ನಡ ನುಡಿಯ ಅಭಿಮಾನವಿರಬೇಕೆಂಬುದೊಂದೇ ವಿಚಾರವು ಆದರಲ್ಲಿ ಮಿಂಚುತ್ತಿತ್ತು. ಸಾರಾಂಶ, ನನ್ನ ಅಭಿಪ್ರಾಯದಲ್ಲಿ ಆಗ " ಕರ್ನಾಟಕ "ವು ಗರ್ಭಾವಸ್ಥೆಯಲ್ಲಿತ್ತು. ಆದಕ್ಕೆ ಸ್ಪಷ್ಟವಾದ ಅವಯುವಗಳು ಹುಟ್ಟಿದ್ದಿಲ್ಲ. ಅದೊಂದು ಅಸ್ಪಷ್ಟವಾದ ಮುದ್ದೆಯಾಗಿತ್ತು. ಕರ್ನಾಟಕದ ಕೂಸನ್ನು ಹಡೆಯಬೇಕಾದರೆ ಅದು ಜೀವಂತವಾಗಿ ಹೊರಬೀಳಬೇಕಾದರೆ ಆ ಗರ್ಭಪಿಂಡದಲ್ಲಿ ಅವಯುವಗಳೆಲ್ಲವೂ ಒಡಮೂಡಿರಬೇಕಲ್ಲವೆ? ಅವುಗಳಲ್ಲಿ " ಕರ್ನಾ

ಟಕತ್ವ" ಎಂಬ ಜೀವದ ಸಂಚಾರವಾಗುತ್ತಿರಬೇಕಲ್ಲವೇ? ಆದಕಾರಣ ಕರ್ನಾಟಕಕ್ಕೆ ಅಗ್ಗೆ ಸರ್ವಾವಯವಗಳನ್ನು ಹುಟ್ಟಿಸಿ, ಸಜೀವನವನ್ನಾಗಿ ಮಾಡುವದೇ ಆಗಿನ ಕಾರ್ಯಕರ್ತನ ಮುಖ್ಯ ಕೆಲಸವಾಗಿತ್ತು. ಆ ಶ್ರದ್ಧೆ ಯಿಂದಲೇ ನಾನು ಆ ಧ್ಯೇಯವನ್ನು ಕೈಕೊಂಡೆ.

ಆದರೆ ಕರ್ನಾಟಕಕ್ಕೆ ಸಂಜೀವನೀ ಮಾತ್ರೆಯನ್ನು ಕೊಡುವ ಮುಂಚೆ ನಾನು ನನಗೇ ಸಂಜೀವನೀ ಮಾತ್ರೆಯನ್ನು ಕೊಟ್ಟುಕೊಂಡೆ. ಮತ್ತು ಆ ಅವಯುವಗಳನ್ನು ನನ್ನಲ್ಲಿ ಹುಟ್ಟಿಸಿಕೊಂಡೆ. ಆಗ ಕರ್ನಾಟಕವೂ ಡಾರ್ವಿ ನ್ನನ ಏಕಾವಯುವ ( Ameba ) ಪ್ರಾಣಿಯಾಗಿತ್ತು; ನಾನೂ ಅದರಂತೆಯೇ ಏಕಾವಯುವ ಪ್ರಾಣಿಯಾಗಬೇಕಾಯಿತು. ಅಂದರೆ ನಾನೊಬ್ಬನೇ ಸರ್ವ ಕ್ಷೇತ್ರಗಳಲ್ಲಿ ಕೆಲಸ ಮಾಡಬೇಕಾಯಿತು. ಏಕೆಂದರೆ, ೧೯೦೫ರಲ್ಲಿ ದಾರಿದ್ರ್ಯ ದೀಕ್ಷೆಯನ್ನು ಕೈಕೊಂಡು ವಕೀಲಿಯನ್ನು ಬಿಟ್ಟು ಸಾರ್ವಜನಿಕ ಜೀವನವನ್ನು ಕೈಕೊಂಡವನು ನಾನು ಒಬ್ಬನೇ ಒಬ್ಬನಾಗಿದ್ದೆನು. ಮುಂದೆ ಸಹ ೧೯೨೧ರ ವರೆಗೆ ಯಾರೂ ಮುಂದೆ ಬಂದಿದ್ದಿಲ್ಲ. ೧೯೨೧ರ ಅಸಹಕಾರ ಚಳವಳಿಯಲ್ಲಿ ಶ್ರೀಯುತ ರಂಗರಾವ ದಿವಾಕರರು ( ಈಗಿನ ಬಿಹಾರದ ರಾಜ್ಯಪಾಲರು ) ಮುಂದೆ ಬಂದು ನನ್ನನ್ನು ಕೂಡಿದರು. ಮತ್ತು ಅವರು ಅದೇ ಆಗ ಸಿದ್ಧ ವಾದ ರಾಜಕಾರಣ ಕ್ಷೇತ್ರವೊಂದನ್ನೇ ಕೈಕೊಂಡು ನನಗಿಂತ ಎಷ್ಟು ಹೆಚ್ಚು ಉಜ್ವಲವಾಗಿ ಕಾರ್ಯ ಮಾಡಿದರೆಂಬುದು ಸರ್ವರಿಗೆ ವಿದಿತವೇ ಇದೆ. ಇರಲಿ.

ಈ ರೀತಿಯಾಗಿ ಅನೇಕ ಕ್ಷೇತ್ರಗಳಲ್ಲಿ ಕೆಲಸ ಮಾಡುವದರಿಂದ ಯಾವ ಕೆಲಸವೂ ತೃಪ್ತಿಕರವಾಗಿ ಆಗುವದಿಲ್ಲವೆಂಬುದನ್ನು ನಾನು ಬಲ್ಲೆ. ಆದರೆ ಯಾವದೊಂದು ಕೆಲಸವನ್ನು ನಾನೇ ಸಂಪೂರ್ಣವಾಗಿ ಕೊನೆಗಾಣಿಸಬೇಕೆಂಬ ಧ್ಯೇಯವನ್ನೇ ನಾನು ಇಟ್ಟುಕೊಂಡಿರಲಿಲ್ಲ. ಯಾವದೊಂದೇ ಸಂಸ್ಥೆಗೆ ಕಡೆ ತನಕ ಅಂಟಿಕೊಂಡಿರಬೇಕೆಂಬ ವಿಚಾರವನ್ನೇ ನಾನು ಮಾಡಲಿಲ್ಲ. ಕರ್ನಾ ಟಕದಲ್ಲಿ ಸರ್ವಾಂಗೀಣ ಜಾಗ್ರತಿ ಆಗುವದಕ್ಕೆ ಅವಶ್ಯವಿರುವ ಸಂಸ್ಥೆಗಳನ್ನು ಹುಟ್ಟಿಸುವದು, ಅಥವಾ ಹುಟ್ಟಿಸಲಿಕ್ಕೆ ಅನ್ಯರನ್ನು ಪ್ರೇರೇಪಿಸುವದು-- ಇವೇ ಆಗ ನಾನು ಮಾಡಿದ ಮುಖ್ಯ ಕಾರ್ಯ. ನನ್ನಿಂದ, ನನಗೆ ಕೂಡ ಸಮಾ ಧಾನಕರವಾಗುವಂಥ ಕೆಲಸ ಮಾಡುವದಾಗದಿದ್ದರೂ ನನ್ನ ಧ್ಯೇಯವನ್ನು

ನಾನು ಧ್ರುವನಕ್ಷತ್ರದಂತೆ ನನ್ನ ಮುಂದಿಟ್ಟುಕೊಂಡು ಅದರ ಕಡೆಗೆ ಸಾಗುವದಕ್ಕೆ ನನ್ನ ಕೈಲಾದಮಟ್ಟಿಗೆ ಅಂತಃಕರಣಪೂರ್ವಕವಾಗಿ ಪ್ರಯತ್ನ ಮಾಡಿರುವೆನೆಂದು ಮಾತ್ರ ಧೈರ್ಯದಿಂದ ಹೇಳಬಲ್ಲೆ. ಹಾಗೆ ಅರಗಚ್ಚು (ಅರ್ಧಕಚ್ಚು) ಕೆಲಸದಲ್ಲಿಯೇ ನನಗೊಂದು ಸಮಾಧಾನವಿದೆ. ಇದರಿಂದ ನಾನು ಕಾರ್ಯ ಮಾಡಿದ್ದರ ಮುಖ್ಯ ಧೋರಣವು ಯಾವುದೆಂಬುದು ವಾಚಕರ ಲಕ್ಷ್ಯಕ್ಕೆ ಬಂದಿರಬಹುದು. ಕರ್ನಾಟಕವು ನನ್ನ ಸಾಗುಮಾಡುವ ಭೂಮಿ; ನಾನು ಅದರ ರೈತನು. ಆ ಭೂಮಿಯಲ್ಲಿ ರಾಜಕಾರಣ, ವಾಙ್ಮಯ, ಇತಿಹಾಸ ಮುಂತಾದ ಹೊಲಗಳಿರುವವು. ಯಾವ ಕಾಲಕ್ಕೆ ಯಾವ ಹೊಲಕ್ಕೆ ಮಳೆಯಾಗಿ ಬಿತ್ತುವ ಹದ ಬರುತ್ತದೋ ಆ ಕಾಲಕ್ಕೆ ಅದರಲ್ಲಿ ಕರ್ನಾಟಕತ್ವದ ಬೀಜಗಳನ್ನು ಬಿತ್ತುವದು ನನ್ನ ಕಾರ್ಯಮಾಡುವದರ ಮುಖ್ಯ ಧೋರಣ.

ಆದರೆ ಕರ್ನಾಟಕಕ್ಕಾಗಿ ಕಾರ್ಯ ಮಾಡುವಾಗ ರಾಷ್ಟ್ರೀಯತ್ವವನ್ನೆಂದಿಗೂ ಕಣ್ಮರೆ ಮಾಡಿಲ್ಲ. ನನಗೆ ಆವೆರಡರಲ್ಲಿ ವಿರೋಧವೇ ಕಾಣುವದಿಲ್ಲ. ನನಗೆ ಕರ್ನಾಟಕವೆಂದರೆ ಅದೊಂದು 'ಕಿರಣಕೇಂದ್ರದ ಕಾಜು.' ಅದರೊಳಗಿಂದ ನನಗೆ ಭರತಭೂಮಿಯು ಮಾತ್ರವೇ ಏಕೆ? ಇಡೀ ವಿಶ್ವವೇ ಕಾಣುತ್ತದೆ. ವಿಶ್ವದ ಕಿರಣಗಳೂ ಭಾರತದ ಕಿರಣಗಳೂ ನನ್ನ ಕರ್ನಾಟಕದಲ್ಲಿ ಕೇಂದ್ರೀಕೃತವಾಗಿವೆ; ಅಂತರ್ಯಾಮಿಯಾಗಿವೆ. "ಕರ್ನಾಟಕತ್ವದ ದಿವ್ಯ ದೃಷ್ಟಿ"ಯು ಆ ಕಿರಣಗಳನ್ನು ಕಾಣಬಹುದು. ಅದೊಂದು ಕಿಡಿಕೆಯು ಮುಂದೆ ನಾನು ತೆಗೆದ ಜಯಕರ್ನಾಟಕವೆಂಬ ಮಾಸಪತ್ರಿಕೆಯ ಒಂದನೇ ವರ್ಷದ ಒಂದನೇ ಸಂಚಿಕೆಯಲ್ಲಿಯ "ಪರಮಾತ್ಮಪ್ರೇರಣೆ ಆತ್ಮನಿವೇದನ"ವೆಂಬ ಒಂದನೆಯ ಲೇಖದಲ್ಲಿ ನಾನು ಇದನ್ನೇ ಕೆಳಗಿನ ಶಬ್ದಗಳಲ್ಲಿ ಹೇಳಿರುವೆನು.

"ಕರ್ನಾಟಕವೇ ನಮ್ಮ ಕರ್ಮಭೂಮಿ. ಅದು ಮಹಾಮಹಿಮರ ಪಾದಧೂಳಿಯಿಂದ ಪುನೀತವಾದ ಭೂಮಿಯಲ್ಲವೇ? ಇಂತಹ ಚಾರುತಮವಾದ ಭೂಮಿಯನ್ನು, ಭರತಖಂಡದ ನಿರ್ಜೀವವಾದ ಭಾಗವನ್ನಾಗಿ ಇಡುವದಕ್ಕೆ ಯಾವ ಭಾರತೀಯನು ಒಪ್ಪುವನು? ಆದುದರಿಂದ ಕನ್ನಡಿಗರೆಲ್ಲರೂ ಇವಳ ಪುನರುಜ್ಜೀವನಕ್ಕಾಗಿ ಯತ್ನಿಸಬೇಕೆಂಬುದೇ ನಮ್ಮ ಉದ್ದೇಶ.

ಹೀಗೆ ನಮ್ಮ ಕಾರ್ಯಕ್ಷೇತ್ರವು ಕರ್ನಾಟಕವಾದರೂ ಭರತಭೂಮಿಯೇ ಧರ್ಮಕ್ಷೇತ್ರವು. ಕನ್ನಡ ನುಡಿಯೂ ನಾಡೂ ನಮ್ಮ ನಡು-ಮನೆಯಾದರೂ

ವಿಶ್ವವೆಂಬೀ ಪಗಡೀಪಟ್ಟದಲ್ಲಿ ಭರತಭೂಮಿಯೇ ನಮ್ಮ ಕಟ್ಟೆಯ ಮನೆ ಎಂಬು ದನ್ನು ಮರೆತಿಲ್ಲ........

........ಭರತಭೂಮಿಯು ಹೇಗೆ ಇಡೀ ವಿಶ್ವದ ಮೂರ್ತಿಯೋ, ಹಾಗೆ ಈ ಕರ್ನಾಟಕವು ಭರತಖಂಡದ ' ಉತ್ಸವಮೂರ್ತಿ '........ಏವಂಗುಣವಿಶಿಷ್ಟ ವಾದ ಕರ್ನಾಟಕವೇ ಕನ್ನಡಿಗರ ಇಷ್ಟದೇವತೆ. ಭಾರತಮಾತೆಯ ಚಿಕ್ಕ ಪ್ರತಿಮೆ.

ಸಾರಾಂಶ, ಒಂದು ಉಪಮೆಯನ್ನು ಕೊಟ್ಟು ಹೇಳುವದಾದರೆ ಆನೇ ಗೊಂದಿಯ ದರ್ಶನವು ಅಡಿಹಾಕಿದ ನನ್ನ ಜೀವನದ ಪಾಡುಮಾವು, ನಾಲ್ಕೆಂಟು ತಿಂಗಳಲ್ಲಿ ಹಣ್ಣಾಯಿತು. ಇನ್ನು ಮುಂದೆ ನಾನು ಕಾರ್ಯಮಾಡಿದ ವಿವಿಧ ಕ್ಷೇತ್ರಗಳು ಯಾವವು? ಅವುಗಳಲ್ಲಿ ನಾನು ಮಾಡಿದ ಕಾರ್ಯವಾವುದು? ಮಾಡದೇ ಉಳಿದ ಕಾರ್ಯವಾವುದು? ಇವನ್ನೆಲ್ಲ ಮುಂದೆ ಹೇಳುವೆ.

ಇಲ್ಲಿಗೆ ನನ್ನ ಜೀವನದಲ್ಲಿಯ ಒಂದನೇ ಅಂಕ ಸಮಾಪ್ತವಾಯಿತು.



# ೫ನೆಯ ಪ್ರಕರಣ

## ಕರ್ನಾಟಕತ್ವದ ಅದೃಶ್ಯ ಉಗಮ

**ಪ್ರಸ್ತಾವನೆ:**— ನಾನು ನನ್ನ ವಿದ್ಯಾರ್ಥಿದಸೆಯ ಬಗ್ಗೆ ಕೆಲವು ಮಾತು ಹೇಳಿರುವೆನಷ್ಟೇ! ನನ್ನ ಗೃಹಸಂಸ್ಕಾರಗಳೂ ನನ್ನ ಮನಸ್ಸಿನ ಮೇಲೆ ಪರಿಣಾಮವನ್ನುಂಟುಮಾಡಿದ್ದರಿಂದ ಕರ್ನಾಟಕದ ಸೇವೆಯನ್ನು ಮಾಡಬೇಕೆಂಬ ಉತ್ಕಟೇಚ್ಛೆ ಉಂಟಾಯಿತು. ಆದರೆ ಆ ಬಗ್ಗೆ ನನ್ನಲ್ಲಿ ಸ್ಪಷ್ಟವಾದ ಕಲ್ಪನೆಯಿದ್ದಿಲ್ಲ. ನನ್ನ ಸುದೈವದ ಮೂಲಕ ನನ್ನ ಜೀವನಕ್ಕೆ ಒಂದು ವಿಶಿಷ್ಟ ಸ್ಥಾನವು ನನಗೂ ಕೂಡ ತಿಳಿಯದಂತೆ ತಾನಾಗಿಯೇ ಪ್ರಾಪ್ತವಾಗಿದೆ. ಆಗ ಕರ್ನಾಟಕವು ಪ್ರತ್ಯೇಕ ಪ್ರಾಂತವಾಗಬೇಕೆಂಬ ಕಲ್ಪನೆ ಹುಟ್ಟಿರಲಿಲ್ಲ. ನಾನು ದೇಶಸೇವೆಯನ್ನು ಮಾಡುವ ಕಾರ್ಯಕ್ಷೇತ್ರವು ಕರ್ನಾಟಕವು ಎಂಬ ಕಲ್ಪನೆಯು ಅಂಥವಾಗಿ ಮಂದವಾಗಿ ನನ್ನ ಮನದಲ್ಲಿ ಮೂಡಹತ್ತಿತ್ತು. ದೇಶದ ಸ್ವಾತಂತ್ರ್ಯವನ್ನು ಪಡೆಯುವದಕ್ಕೆ ಕಂಕಣಬದ್ಧರಾಗಿದ್ದ ಶ್ರೀ. ಸಾವರಕರ, ಶ್ರೀ. ಬಾಪಟ ಮುಂತಾದ ವೀರರು ಕಾಲೇಜಿನಲ್ಲಿ ನನ್ನ ಜೀವದ ಗೆಳೆಯರಾಗಿದ್ದರು. ಅವರ ಸಮೀಪ ಸಹವಾಸದ ಮೂಲಕ ಜಾತ್ಯಾ ಕ್ಷತ್ರಿಯನಲ್ಲದಿದ್ದ ನನ್ನಲ್ಲಿ ಕೂಡ ವೀರಾವೇಶವು ತುಂಬಿ ತುಳುಕುತ್ತಿತ್ತು. ದೇಶೋನ್ನತಿಗಾಗಿ ನಾನು ನನ್ನ ಜೀವಿತ ಸರ್ವಸ್ವವನ್ನು ಅರ್ಪಿಸಬೇಕೆಂಬ ಆತುರತೆಯು ನಡುನಡುವೆ ತೀಕ್ಷ್ಣವಾಗಿ ಪ್ರಜ್ವಲಿತವಾಗುತ್ತಿತ್ತು. ಆದರೆ ಅದು ಕೂಡಲೆ ಆರಿಯೂ ಹೋಗುತ್ತಿತ್ತು. ಇಂಥ ಸ್ಥಿತಿಯಲ್ಲಿ ನಾನು ಎಲ್‌ಎಲ್. ಬಿ. ಪರೀಕ್ಷೆಯನ್ನು ಮುಗಿಸಿಕೊಂಡು ಕರ್ನಾಟಕಕ್ಕೆ ಅಂದರೆ ಧಾರವಾಡಕ್ಕೆ ಬಂದೆನು. ರಾಜಕಾರಣದಲ್ಲಿ ಸೇರಬೇಕೆಂದು ನಿಶ್ಚಯಿಸಿದೆನು. ಆದರೆ ಕಾಲೇಜದಿಂದ ಬಂದ ಕೂಡಲೆ ಕತ್ತಲುಗವಿದ ಕಟ್ಟಡವಿಯಲ್ಲಿ ಕಣ್ಣು ಕಟ್ಟಿ ಬಿಡಲ್ಪಟ್ಟಂತೆ ನನ್ನ ಅವಸ್ಥೆ ಆಯಿತು. ಏಕೆಂದರೆ ಕರ್ನಾಟಕದಲ್ಲಿ ಆಗ ಯಾವ ಚಳವಳಿಯೂ

ತರುಣರನ್ನು ದೇಶಸೇವೆಗೆ ಆಕರ್ಷಿಸುವಷ್ಟು ಪ್ರಬಲವಾಗಿರಲಿಲ್ಲ. ದೇಶಸೇವೆಗಾಗಿ ತಮ್ಮ ಜೀವನಸರ್ವಸ್ವವನ್ನು ಅರ್ಪಿಸಿದ ಒಬ್ಬ ವ್ಯಕ್ತಿಯೂ ಕರ್ನಾಟಕದಲ್ಲಿ ಇರಲಿಲ್ಲ. ಸರಕಾರೀ ನವಕರಿಯಲ್ಲಿ ದೊಡ್ಡ ದೊಡ್ಡ ಸ್ಥಳಗಳನ್ನು ಆಕ್ರಮಿಸಿದವರೇ ಆಗಿನ ಕಾಲದ ಕರ್ನಾಟಕದ "ಶ್ರೇಷ್ಠರು." ಅವರ ಮಕ್ಕಳೂ ಮೊಮ್ಮಕ್ಕಳೂ ಅದೇ ಗುಂಗಿನಲ್ಲಿ ಮಗ್ನರಾದವರು. ನನ್ನ ಸುದೈವದಿಂದ ನನ್ನ ಗೃಹಸಂಸ್ಕಾರವು ಅದಕ್ಕೆ ವಿರುದ್ಧವಾಗಿದ್ದುದರಿಂದಲೇ ನನಗೆ ಸರಕಾರೀ ನವಕರಿ ಮಾಡುವ ಪ್ರಸಂಗ ಬರಲಿಲ್ಲ. ನಮ್ಮ ತಂದೆಯವರ ಮನದಲ್ಲಿ ನನ್ನನ್ನು ನವಕರಿಯಲ್ಲಿ ಸೇರಿಸಬೇಕೆಂದು ಬಂದಿದ್ದರೆ ನಾನೂ ಯೋಗ್ಯತೆಯ ಬಲದಿಂದಲ್ಲದಿದ್ದರೂ ಕಾಲಬಲದಿಂದ ಒಬ್ಬ ದೊಡ್ಡ ನವಕರನಾಗುತ್ತಿದ್ದೆ. ಮತ್ತು ನವಕರಿಯಲ್ಲಿ ಸೇರಲೇಬಾರದೆಂಬುವಷ್ಟು ಉಜ್ವಲವಾದ—ಪ್ರಸಂಗ ಬಂದರೆ ಹಿರಿಯರನ್ನೂ ಕೂಡ ಇದಿರಿಸುವಷ್ಟು ದೇಶಾಭಿಮಾನವು ನನ್ನಲ್ಲಿ ಆಗ ಅಂಕುರಿತವಾಗಿದ್ದಿಲ್ಲವೆಂಬುದನ್ನು ನಾನು ಒಪ್ಪಲೇ ಬೇಕು. ನಾನು ವಿದ್ಯಾರ್ಥಿದಸೆಯಿಂದ ೧೯೦೫ನೆಯ ಇಸ್ವಿಯಲ್ಲಿ ಹೊರಬಿದ್ದಾಗ ಧಾರವಾಡದಲ್ಲಿ ಒಬ್ಬಿಬ್ಬ ವಕೀಲರು ಆರಾಮುಕಾಲದಲ್ಲಿ ವಾಙ್ಮಯ ಚಳವಳಿಯನ್ನು—ಸೇವೆಯನ್ನಲ್ಲ—ಅಲ್ಪಮಟ್ಟಿಗೆ ಮಾಡುತ್ತಿದ್ದರೇನೋ ನಿಜ. ಅದೇ ಪ್ರಕಾರ ಕೆಲವು ತರುಣರು ಸಾರ್ವಜನಿಕ ಚಟುವಟಿಕೆಗಳನ್ನು ಕೈಕೊಂಡಿದ್ದರೇನೋ ನಿಜ. ಆದರೆ ಅವರ ಜೀವನದ ಪರಿಣಾಮವು ನನ್ನ ಮೇಲೆ ಆಗಲಿಲ್ಲವೆಂಬುದಷ್ಟೇ ಅಲ್ಲ, ಕೆಲಮಟ್ಟಿಗೆ ವಿಪರೀತವಾಗಿಯೇ ಆಯಿತೆಂದು ಕೂಡ ಹೇಳಬಹುದು. ಇದಕ್ಕೆ ಕಾರಣವೇನಂದರೆ ಆ ಮುಖಂಡರು, ಸಾರ್ವಜನಿಕ ಜೀವನವು ವಿರಾಮಕಾಲದ ಒಂದು ಆಟ,-ಲೀಲೆಯೆಂಬ ಭಾವನೆಯಿಂದ ಅದನ್ನು ನಡೆಸಿದ್ದರು. ಶ್ರೀ. ಗುರುನಾಥರಾವ ಘಾಟಕ, ಮತ್ತು ಶ್ರೀ. ಭೀಮರಾವ ಕಮಲಾಪುರ ಇವರಿಬ್ಬರೇ, ಆಯುಷ್ಯದಲ್ಲಿ ತಮಗೇನೋ ಒಂದು ಗಂಭೀರವಾದ ಕಾರ್ಯ ಮಾಡತಕ್ಕದ್ದಿರುವದೆಂಬ ಭಾವನೆಯಿಂದ ನಡೆಯುತ್ತಿದ್ದರು. ಸಾರಾಂಶ, ೧೯೦೫ನೆಯ ಇಸ್ವಿಯ ಸುಮಾರಿಗೆ ನಾನು ಕರ್ನಾಟಕಕ್ಕೆ ಬಂದಾಗ ನನ್ನ ಕಣ್ಣೆದುರಿಗೆ ಆದರ್ಶ ಪುರುಷರೊಬ್ಬರೂ ಇರಲಿಲ್ಲ. ತದ್ವಿರುದ್ಧವಾಗಿ ನನ್ನನ್ನು ಸಾರ್ವಜನಿಕ ಸೇವೆಯಿಂದ ಹಿಂಜಗ್ಗುವ ಸಂಗತಿಗಳೇ ಕಣ್ಣುಮುಂದೆ ಕಟ್ಟಿದ್ದವು. ರಾಜಕಾರಣದ ಚಳವಳಿ ಶೂನ್ಯವಾಗಿತ್ತು. ಶ್ರೀ. ರಾಮಚಂದ್ರ ಹನುಮಂತ

ದೇಶಪಾಂಡೆಯವರ ಉತ್ಕಟವಾದ ಕನ್ನಡದ ಅಭಿಮಾನವು, ೧೮೯೦ರಲ್ಲಿ ಕರ್ನಾಟಕ ವಿದ್ಯಾವರ್ಧಕ ಸಂಘವನ್ನು ಹುಟ್ಟಿಸಿದ್ದರೂ ನವಕರಿಯಲ್ಲಿದ್ದ ಅವರು ಧಾರವಾಡ ಜಿಲ್ಹೆಯನ್ನು ಬಿಟ್ಟು ಹೊರಟು ಹೋಗಿ ಕೆಲವು ವರ್ಷ ಆಗಿದ್ದರಿಂದ " ಸಂಘ "ವು ನಿಸ್ಸಂಗವಾಗಿತ್ತು. ಧಾರವಾಡ ಜಿಲ್ಹೆಯ ಆಗಿನ ಮುಖಂಡರ ನೈತಿಕ ಜೀವನವು ವಿಪರೀತವಾಗಿಯೇ ಇತ್ತು. ಹೀಗೆ ರಾಜ ಕಾರಣದಲ್ಲಿ ಸಂಪೂರ್ಣ ಕತ್ತಲು; ವಾಙ್ಮಯ ಜೀವನವು ನಿರ್ಜೀವ ಜೀವ ನವು; ಸಾರ್ವಜನಿಕ ಜೀವನವು ನಿಸ್ಸಾರ ಜೀವನವು; ಕರ್ನಾಟಕದ ಕಲ್ಪನೆ ಯಂತೂ ಯಾರ ಕನಸು ಮನಸಿನಲ್ಲಿಯೂ ಮೂಡಿದ್ದಿಲ್ಲ. ಇಂಥ ಪರಿಸ್ಥಿತಿ ಯಲ್ಲಿ ನಾನು ಕರ್ನಾಟಕಕ್ಕೆ ಬಂದುದು. ಮೊದಲಿಗೆ ನಾನು ದೇಶಸೇವೆಗಾಗಿ ಧಾರವಾಡಕ್ಕೆ ಬಂದವನಲ್ಲ. ಹೊಟ್ಟೆಹೊರಕೊಳ್ಳುವದಕ್ಕೆ ಇಲ್ಲಿಗೆ ಬಂದವನು. ಆಗ ನನ್ನಲ್ಲಿ ಉದಾತ್ತವಾದ ನಿಶ್ಚಿತ ಧ್ಯೇಯಗಳಿರಲಿಲ್ಲ; ಉಜ್ವಲವಾದ ದೇಶ ಭಕ್ತಿ ಇರಲಿಲ್ಲ; ನಿಸ್ಸೀಮವಾದ ಸ್ವಾರ್ಥತ್ಯಾಗ ಮಾಡಬೇಕೆಂಬ ಉತ್ಕಟ ವಾದ ಇಚ್ಛೆ ಇರಲಿಲ್ಲ. ಆಗಿನ ನನ್ನ ಬಂಡವಲವೆಂದರೆ, ನನ್ನ ಆತ್ಮದ ಮೂಲಶಕ್ತಿ, ಮತ್ತು ಆ ಮೂಲಶಕ್ತಿಗೆ ನನ್ನ ಗೃಹಸಂಸ್ಕಾರ ಮತ್ತು ಬಾಹ್ಯ ಸಂಸ್ಕಾರಗಳಿಂದ ದೊರೆತ ಅಸ್ಪಷ್ಟವಾದ ಪುಷ್ಟಿ. ಇವೇ ಮುಂದೆ ನನ್ನ ಇಡೀ ಜೀವನಕ್ರಮವನ್ನು ಬೇರೊಂದು ದಿಸೆಗೆ ಹಚ್ಚಲಿಕ್ಕೆ ಹೇಗೆ ಕಾರಣೀಭೂತವಾದು ವೆಂಬುದರ ಇತಿಹಾಸವು ಮನೋರಂಜಕವೂ ಬೋಧಪ್ರದವೂ ಆಗಿದೆ. ಅದನ್ನು ಈಗ ಹೇಳುವೆ.

**ನನ್ನ ಜೀವನದಲ್ಲಿಯ ಕ್ರಾಂತಿಕಾಲ** :— ೧೯೦೫–೬ನೆಯ ಇಸ್ವಿ ಸುಮಾರಕ್ಕೆ ನನ್ನ ಜೀವನಪ್ರವಾಹವು ಉತ್ತರದಿಸೆಯಲ್ಲಿ ( ನದಿಗಳು ಉತ್ತರಕ್ಕೆ ಹರಿದಿರುವದು ಅಪರೂಪ. ಅಂಥ ಸಂದರ್ಭಗಳು ಅತ್ಯಂತ ಪವಿತ್ರ ಸ್ಥಳ ಗಳೆಂದು ಜನರ ಭಾವನೆ. ) ಪ್ರವಹಿಸಲಿಕ್ಕೆ ಪ್ರಾರಂಭವಾಯಿತು. ಹೀಗೆ ನನ್ನ ಜೀವನವು ಉತ್ತರವಾಹಿನಿಯಾಗುವದಕ್ಕೆ ಯಾವ ಕಾರಣಗಳುಂಟಾದುವೆಂಬ ದನ್ನು ಈ ಪ್ರಕರಣದಲ್ಲಿ ಹೇಳುವೆ.

ಮನುಷ್ಯನ ಜೀವಿತದಲ್ಲಿ ಕೆಲವೊಂದು ಕಾಲಕ್ಕೆ ಇಡೀ ಜೀವಿತದ ಪ್ರವಾಹವೇ ಕೆಳದಿಸೆಯಿಂದ ಮೇಲ್ದಿಸೆಗೆ ಬದಲಾಗುವ ಪ್ರಸಂಗ ಬರುತ್ತದೆ.

ಅಂಥದೊಂದು ಕ್ರಾಂತಿಬಿಂದುವು ನನ್ನ ಆಯುಷ್ಯದಲ್ಲಿ ನನಗೆ ೧೯೦೫–೬ನೆಯ ಇಸವಿಯಲ್ಲಿ ದೊರೆಯಿತು. ೧೯೦೫ನೆಯ ಇಸವಿಯ ಮೇ ತಿಂಗಳ ೪ನೆಯ ತಾರೀಖಿನ ದಿವಸವೇ ಅಂಥ ದಿವಸ. ಆ ದಿವಸ ನಾನು ಆನೆಗೊಂದಿಗೆ ಹೋಗಿದ್ದೆ. ಅಲ್ಲಿಗೆ ಹೋದದ್ದು ಆಕಸ್ಮಿತ ಕಾರಣಕ್ಕಾಗಿ. ಆನೆಗೊಂದಿಯಲ್ಲಿ ನನ್ನ ಸಮೀಪದ ಆಪ್ತರಾದ ಶ್ರೀ. ರಾಮರಾವ ಬಲಕುಂದಿ ಇವರು ಆ ಚಿಕ್ಕ ಸಂಸ್ಥಾನದ ಕಾರಭಾರಿಗಳು. ಆನೆಗೊಂದಿಯು ಒಂಬತ್ತು ಪ್ರಸಿದ್ಧ ವೈಷ್ಣವ ಸ್ವಾಮಿಗಳ ನವವೃಂದಾವನಗಳುಳ್ಳ ಸ್ಥಳವು. ನನ್ನ ಸಮೀಪದ ಆಪ್ತರೂ ಮನೆತನದ ಗುರುಗಳೂ ಆದ ವೇ. ಸಮೀರಣಾಚಾರ್ಯ ಪಾಂಗರಿ ಇವರು ವೇ. ಗಜೇಂದ್ರಗಡಕರ ಬಾಳಾಚಾರ್ಯ (ಈಗಿನ ಹೈ. ಕೋ. ಜಡ್ಜ ಗಜೇಂದ್ರಗಡಕರ ಇವರ ತಂದೆ) ಇವರೊಡನೆ ವಹಿವಾಟದಂತೆ ನನ್ನ ಊರಾದ ಹೊಳೆ-ಆಲೂರಲ್ಲಿ ಬಂದು ನಮ್ಮಲ್ಲಿದ್ದರು. ಅವರು ನನ್ನನ್ನು ಸಹಜವಾಗಿ ಆನೆಗೊಂದಿಗೆ ಕರೆದುಕೊಂಡು ಹೋದರು. ಆಗ ನನಗೆ ಹಂಪಿಯ ಹತ್ತಿರವೇ ಆನೆಗೊಂದಿಗಳಲ್ಲಿಯೇ ವಿಜಯನಗರದ ಅರಸರಿದ್ದರೆಂಬುದೂ ಗೊತ್ತಿರಲಿಲ್ಲ. ಆ ಐತಿಹಾಸಿಕ ವಿಜಯನಗರವು, ಪೂರ್ವದಂಡೆಯ ಸಮೀಪದಲ್ಲಿರುವ ಆಂಧ್ರದಲ್ಲಿರುವ ವಿಜಯಾನಗರವೇ ಎಂದು ನಮ್ಮ ತಿಳುವಳಿಕೆ. ಕರ್ನಾಟಕಕ್ಕೂ ಆ ಹಂಪೆ ಆನೆಗೊಂದಿಗಳಿಗೂ ಏನಾದರೂ ಐತಿಹಾಸಿಕ ಸಂಬಂಧ ಇತ್ತೆಂಬುದರ ಅರಿವೂ ನನಗಿರಲಿಲ್ಲ. ಗದುಗಿನಿಂದ ಎಡವಿಬಿದ್ದರೆ ಅಂದರೆ ಎರಡೇ ಗಂಟೆಗಳ ಹಾದಿಯಲ್ಲಿ ಇರುವ ಈ ಹಂಪೆ ಆನೆಗೊಂದಿಗಳಿಗೇನೇ ವಿಜಯನಗರ ಎನ್ನುತ್ತಾರೆಂಬ ಕಲ್ಪನೆಯೂ ಕನಸುಮನಸಿನಲ್ಲಿ ಕೂಡ ಬಂದಿರಲಿಲ್ಲ. ವಿಜಯನಗರದ ಇತಿಹಾಸವು ನಮಗೆ ಆಧುನಿಕ ಇತಿಹಾಸವಾಗಿರದೆ ರಾಮಾಯಣ ಮಹಾಭಾರತದ ಕಥೆಗಳಂತೆ ಪೌರಾಣಿಕ ಇತಿಹಾಸ ಮಾತ್ರವೇ ಆಗಿತ್ತು. ಸಾರಾಂಶ, ನಮ್ಮ ಕರ್ನಾಟಕಸ್ಥರಲ್ಲಿ ನಮ್ಮ ಇತಿಹಾಸದ ಬಗ್ಗೆ ಅಷ್ಟೊಂದು ಅಜ್ಞಾನ ತುಂಬಿತ್ತು! ಆದರೆ ಆ ದಿವಸ ನಾನು ನೋಡುತ್ತೇನೆ, ನಮ್ಮ ವಿಜಯನಗರವು ಅಲ್ಲಿ ಪ್ರತ್ಯಕ್ಷವಾಗಿಯೂ, ವಿಸ್ತಾರವಾಗಿಯೂ ನನ್ನ ಮುಂದೆ ಬಿದ್ದಿದೆ. ಆ ದಿವಸದ ದರ್ಶನವು ನನ್ನ ಮನದಲ್ಲಿ ವಿದ್ಯುದ್ದೀಪದ ಸಂಚಾರವನ್ನು ಮಾಡಿಸಿತು. ಚಲಚ್ಚಿತ್ರಪಟದಲ್ಲಿ ವಿದ್ಯುದ್ದೀಪದ ಬಲದಿಂದ ಮೂರ್ತಿಗಳು ಮೂಡುವಂತೆ, ನನ್ನ ಹೃದಯದಲ್ಲಿ ಕರ್ನಾಟಕದೇವಿಯ ಸುಂದರವಾದ ಮೂರ್ತಿಯು

ಒಡಮೂಡಹತ್ತಿತು. ಆ ದಿವಸದ ದರ್ಶನವು ನನ್ನ ತಲೆಯಲ್ಲಿ ನಾನಾವಿಧ ವಿಚಾರತರಂಗಗಳಿಗೆ ಇಂಬುಗೊಟ್ಟಿತು! ಹೃದಯ ಸಮುದ್ರವು ಅಲ್ಲೋಲ ಕಲ್ಲೋಲವಾಯಿತು! ಆ ದಿವಸವು ನನ್ನ ಜೀವನಕ್ರಮದಲ್ಲಿ ಕ್ರಾಂತಿಯನ್ನು ಮಾಡಲಿಕ್ಕೆ ಕಾರಣವಾಯಿತು! ಆ ದಿನದ ಭಾವನೆಗಳು ಇಂದಿಗೂ ನನ್ನ ಕಣ್ಣಮುಂದೆ ಕಟ್ಟಿವೆ. ಇಂದಿಗೂ ಅವು ನನ್ನ ಚೇತನವನ್ನು ಚೇತರಿಸು ತ್ತವೆ. ಅಂದು ನನ್ನ ಹೃದಯಕ್ಕೆ ಸಿಕ್ಕ ಆಘಾತಶಕ್ತಿಯು, ಇಂದಿನ ವರೆಗೆ ನನ್ನ ಜೀವನಪ್ರವಾಹವನ್ನು ಮುಂದೂಡುತ್ತ ಬಂದಿರುವದು. ಆ ಸಂಸ್ಮರಣೀಯ ದಿನವನ್ನು ನಾನು ಎಂದಿಗೂ ಮರೆಯಲಾರೆ.

ಆ ದಿನ ನನ್ನ ಮನದಲ್ಲಿ ಹುಟ್ಟಿದ ವಿಚಾರತರಂಗಗಳು ಪೂರ್ಣವಾಗಿ ರೂಪಗೊಂಡು ನನ್ನ ಜೀವನಪ್ರವಾಹವನ್ನು ಉತ್ತರದಿಶೆಗೆ ಪ್ರವಹಿಸುವಂತೆ ಮಾಡುವದಕ್ಕೆ ಮುಂದೆ ಕೆಲವು ತಿಂಗಳುಗಳು ಬೇಕಾದವು. ಧಾರವಾಡದಲ್ಲಿ ನಾನು ವಕೀಲಿಯ ಉದ್ಯೋಗ ಪ್ರಾರಂಭ ಮಾಡಿದೆನು. ಆದರೆ ಮಾಡು ಮಾಡುವಷ್ಟರಲ್ಲಿ ವಂಗಭಂಗ ಚಳವಳಿಯ ಪ್ರಚಂಡ ತೆರೆಗಳು ಭೋರ್ಗರೆದು ಕರ್ನಾಟಕಕ್ಕೆ ಧಡಧಡ ಅಪ್ಪಳಿಸಿದವು. ಆಗ ಆ ದೈವೀಪ್ರೇರಣೆಯಿಂದ ಕರ್ನಾಟಕದಂಥ ಕತ್ತಲುಗವಿದ ಪ್ರಾಂತದಲ್ಲಿಯೂ ನವರಾಜಕೀಯ ಚೈತನ್ಯವು ಪ್ರಸ್ಫುರಿಸಹತ್ತಿತು. ಅದೂ ನನ್ನ ಜೀವನಪ್ರವಾಹದ ದಿಸೆಯನ್ನು ಬದಲಿಸ ಲಿಕ್ಕೆ ಬಹುಮಟ್ಟಿಗೆ ಕಾರಣವಾಯಿತು. ಈ ಬಗೆಯಾಗಿ ನನ್ನ ಜೀವನಪ್ರವಾ ಹವು ಉತ್ತರವಾಹಿನಿಯಾಗಿ ಹರಿಯುವದಕ್ಕೆ ಎರಡು ಸಂಗತಿಗಳು ಮುಖ್ಯವಾಗಿ ಕಾರಣವಾದವು. (೧) ಆನೆಗೊಂದಿಯ ಆಕಸ್ಮಿಕ ದರ್ಶನ. (೨) ವಂಗ ಭಂಗದ ಪ್ರಚಂಡ ಚಳವಳಿ (ಆ ಬಗ್ಗೆ ಮುಂದೆ ಹೇಳಿರುವೆ). ಹಾಗೆ ಉತ್ತರ ವಾಹಿನಿಯಾಗಿ ಹರಿಯುವಲ್ಲಿ ಇರುವ ಸ್ಥಳಗಳು ಕ್ಷೇತ್ರಗಳೆಂದೆಣಿಸಲ್ಪಡು ತ್ತವೆ. ನನ್ನ ಜೀವನದ ಪ್ರವಾಹವೂ ಹೀಗೆ ತನ್ನ ಪೂರ್ವದಿಸೆಯನ್ನು ಬದಲಿಸಿ, ಬೇರೆ ದಿಸೆಗೆ ಹರಿದು, ನನ್ನ ಜೀವನದಲ್ಲಿ ವಿವಿಧ ಕ್ಷೇತ್ರಗಳನ್ನು ಹುಟ್ಟಿಸಿತು. ಆ ವಿವಿಧ ಕ್ಷೇತ್ರಗಳು ಯಾವವು? ಅವುಗಳಲ್ಲಿ ಸ್ನಾನಮಾಡಿ, ನನ್ನ ಜೀವನ ವನ್ನು ಹೇಗೆ ಪವಿತ್ರವನ್ನಾಗಿ ಮಾಡಿಕೊಳ್ಳುವದಕ್ಕೆ ಪ್ರಯತ್ನಿಸಿದೆನು ಎಂಬು ದನ್ನು ಮುಂದೆ ಹೇಳುವೆ. ಇರಲಿ, ಹೀಗೆ ಆಗಿದೆ ನನ್ನ ಜೀವನದಲ್ಲಿ ಕರ್ನಾ ಟಕತ್ವದ ಅದೃಶ್ಯ ಉಗಮ.

**ನನ್ನ ಜೀವನದಲ್ಲಿಯ ಕ್ರಾಂತಿಕಾಲ** (೧೯೦೫-೬):—೧೯೦೫-೬ನೆಯ ಇಸ್ವಿಯಲ್ಲಿ ನನ್ನ ಜೀವನಕ್ರಮದಲ್ಲಿ ಕ್ರಾಂತಿಯಾಗುವದಕ್ಕೆ (೧) ಆನೆಗೊಂದಿಯ ಆಕಸ್ಮಿಕ ದರ್ಶನ. (೨) ವಂಗಭಂಗ ಚಳವಳಿ. ಮುಂಚೆ ಆನೆಗೊಂದಿಯ ದರ್ಶನದ ಸಲುವಾಗಿ ಹೇಳಿರುವೆ. ೧೯೦೫ನೆಯ ಇಸವಿಯ ಮೇ ತಿಂಗಳ ೪ನೆಯ ತಾರೀಖು, ನನ್ನ ಜೀವನದ ಕ್ರಾಂತಿಬಿಂದುವು; ಆ ದಿನವು ನನ್ನ ಜೀವನಪ್ರವಾಹದ ತಿರುಗಣಿಸುತ್ತು. ಅದೂ ವಂಗಭಂಗ ಚಳವಳಿಯೂ ನನ್ನ ಜೀವನದ ಧ್ಯೇಯ-ಧೋರಣೆಗಳನ್ನು ನಿಶ್ಚಯಿಸಲಿಕ್ಕೆ ಹೇಗೆ ಕಾರಣೀಭೂತವಾದುವೆಂಬುದನ್ನೂ, ಆ ಧ್ಯೇಯ-ಧೋರಣೆಗಳ ಸಾಮಾನ್ಯ ಸ್ವರೂಪವನ್ನೂ ಇಲ್ಲಿ ಹೇಳುವೆ. ಆನೆಗೊಂದಿಯ ದರ್ಶನವು, ಅಂದಿನಿಂದ ನನ್ನ ಮನದಲ್ಲಿ ಅನೇಕ ವಿಚಾರತರಂಗಗಳನ್ನು ಎಬ್ಬಿಸುತ್ತಿತ್ತು. ಅದರ ಮೂಲಕ ನಾನು ಒಮ್ಮೆ ಮಹತ್ವಾಕಾಂಕ್ಷೆಯ ಶಿಖರಕ್ಕೆ ಏರುತ್ತಿದ್ದೆ. ಮತ್ತೊಂದು ಕ್ಷಣದಲ್ಲಿ ನಿರಾಶೆಯ ಪಾತಾಳದಲ್ಲಿ ಬೀಳುತ್ತಿದ್ದೆ. ಆ ವಿಚಾರತರಂಗಗಳು ಜಲಪಾತಗಳಾಗಿ ಪರಿಣಮಿಸಿ, ನನ್ನ ಚಿತ್ತವನ್ನು ಘೋರವಾದ ಕಂದರದಲ್ಲಿ ಕೆಡಹುತ್ತಿದ್ದವು! ಆಸೆಯ ಬುಗ್ಗೆಗಳೂ ನಡನಡುವೆ ತಲೆದೋರುತ್ತಿದ್ದವು; ಕ್ಷಣಾರ್ಧದಲ್ಲಿ ಅಡಗುತ್ತಿದ್ದವು. ಆಗ “ಕರ್ನಾಟಕವು” ಇನ್ನೂ ಹುಟ್ಟಿದ್ದಿಲ್ಲವಾದ ಕಾರಣ, ಅದು ನನಗೆ ಕಾಣಿಸಲೇ ಇಲ್ಲ. ಆದಕಾರಣ, ಅದನ್ನು ಕಲ್ಪನೆಯಿಂದ ನನ್ನ ಹೃದಯದಲ್ಲಿ ಮೂಡಿಸಿಕೊಂಡೆ. ಹೀಗೆ ನನ್ನ ಹೃದಯದಲ್ಲಿ ಒಡಮೂಡಿದ ಆ ನನ್ನ ಕಲ್ಪನೆಯ “ಕರ್ನಾಟಕ” ಸೇವೆಯನ್ನು ಮಾಡುವದನ್ನು ನಿರ್ಧರಿಸಿದೆ. ಈ ಬಗೆಯಾಗಿ ಕರ್ನಾಟಕದೇವಿಯ ಮೂರ್ತಿಯನ್ನು ನನ್ನ ಹೃದಯದಲ್ಲಿ ಒಡಮೂಡಿಸಿಕೊಂಡದ್ದೇ ಆ ದರ್ಶನದಿಂದ ಆದ ಮುಖ್ಯ ಪರಿಣಾಮ. ಅಲ್ಲಿಯ ವರೆಗೆ ನನಗೆ ಕರ್ನಾಟಕದ ಬಗ್ಗೆ ತೀಕ್ಷ್ಣವಾದ ಅಭಿಮಾನವು ಹುಟ್ಟಿರಲಿಲ್ಲ. ಕಾಲೇಜದಲ್ಲಿ ಮರಾಟಿಗರು ತಮ್ಮ ಭಾಷೆಯ ಅಭಿಮಾನ ಹಿಡಿಯುತ್ತಾರೆ. ಹಾಗೆ ನಾವೂ ನಮ್ಮ ಭಾಷೆಯ ಅಭಿಮಾನ ಹಿಡಿಯಬೇಕು ಎಂಬುದಷ್ಟೇ ಆಗಿನ ನನ್ನ ವಿಚಾರ. ಅದು ಆಳವಾದ ವಿಚಾರವಾಗಿರಲಿಲ್ಲ. ಮೇಲೆ ಮೇಲೆ ತೇಲುವ ವಿಚಾರ ಮಾತ್ರವೇ ಆಗಿತ್ತು. ಆದರೆ ಆನೆಗೊಂದಿಯ ಅಂದಿನ ನೋಟವು, ಕರ್ನಾಟಕದ ಬಗ್ಗೆ ಗಹನವಾಗಿ ವಿಚಾರ ಮಾಡುವದಕ್ಕೆ ನನ್ನನ್ನು ಹಚ್ಚಿತು. ಕರ್ನಾಟಕವು ಹಿಂದಕ್ಕೆ ಎಲ್ಲಿ ಇತ್ತು, ಈಗ

ಎಲ್ಲಿದೆ? ಎಂಬುದನ್ನು ಹೊಸದಾಗಿ ಹುಡುಕಿ ತೆಗೆಯಬೇಕಾಯಿತು. ಹನ್ನೆರಡು ವರುಷ ಸತತವಾಗಿ ಅಭ್ಯಾಸ ಮಾಡಿದಾಗ ಮಾತ್ರ ಅದು ನನ್ನ ಕಣ್ಣಿಗೆ ಸ್ಪಷ್ಟವಾಗಿ ಬಿತ್ತು. ವಂಗಭಂಗ ಚಳವಳಿಯು ನನ್ನ ಮೇಲೆ ಉಂಟುಮಾಡಿದ ವಿಶಿಷ್ಟ ಪರಿಣಾಮವೆಂದರೆ, ಕರ್ನಾಟಕವು ಹರಿದು ಹರಿಪಡಿಯಾಗಿ ಹೋಗಿರುವ ದೆಂಬ ಚಿತ್ರವು, ನನ್ನ ಮನದ ಮುಂದೆ ನಿಚ್ಚಳವಾಗಿ ಒಡಮೂಡಿದ್ದು. ಬಂಗಾಲವು ಎರಡೇ ಭಾಗಗಳಾಗಿ ಮಾಡಲ್ಪಟ್ಟರೆ ಬಂಗಾಲಿಗಳು ವಿಲಕ್ಷಣವಾದ ಚಳವಳಿಯನ್ನು ಮಾಡುತ್ತಿರಲು ಕರ್ನಾಟಕವು ಛಿನ್ನವಿಚ್ಛಿನ್ನವಾಗಿ ಹೋಗಿದ್ದರೂ ನಾವು ಎಚ್ಚತ್ತೇ ಇಲ್ಲವಲ್ಲ! ಎಂಬ ವಿಚಾರವು ನನಗೆ ನಿದ್ದೆಮಾಡಗೊಡಲಿಲ್ಲ. ಕರ್ನಾಟಕವು ಒಡೆದು ತುಂಡುತುಂಡಾಗಿರುವದೇ ಅದರ ದುರ್ದಶೆಗೆ ಮುಖ್ಯ ಕಾರಣವೆಂಬ ಕಲ್ಪನೆಯು ಆಗ ನನ್ನ ಮನಸ್ಸಿನಲ್ಲಿ ಝುಗ್ಗನೆ ಮಿಂಚಿನಂತೆ ಹೊಳೆಯಿತು! ನನ್ನಲ್ಲಿ ಆ ಮಿಂಚು ಮಾಯವಾಗಲಿಲ್ಲ. ಕೋಲಂಬಸನು ಅಮೇರಿಕೆಯನ್ನು ಹುಡುಕಿ ತೆಗೆದಂತೆ, ನಾನೂ "ಕರ್ನಾಟಕ"ವನ್ನು ಹೊಸದಾಗಿ ಹುಡುಕಿ ತೆಗೆಯಬೇಕಾಯಿತು. ದೀರ್ಘ ವಿಚಾರ ಮಾಡಿ, ಮತ್ತು ಅಭ್ಯಾಸ ಮಾಡಿ ಹುಡುಕಿ ತೆಗೆದೆ. ೧೯೦೫–೬ರ ಸುಮಾರಕ್ಕೆ ನಾನು ದೂರದಲ್ಲಿ ಒಂದು ಬೆಳಕನ್ನು ಕಂಡೆ. ಅದು ಬಲು ದೂರದಲ್ಲಿತ್ತು. ಅತಿ ಚಿಕ್ಕದಾಗಿ ಕಾಣುತ್ತಿತ್ತು. ಮಿಣಿಮಿಣಿಯಾಗಿ ಮಿಂಚುತ್ತಿತ್ತು. ಕರ್ನಾಟಕದ ಆಗಿನ ಕಗ್ಗತ್ತಲೆಯಲ್ಲಿ ಅದೇ ನನಗೆ ಕಣ್ಣುದೀಪವಾಯಿತು. ಬೆಳಕಿನಲ್ಲಿ ಬೆಳಕಿಗೆ ಬೆಲೆಯಿಲ್ಲ; ಕತ್ತಲೆಯಲ್ಲಿ ಕಿರುದೀಪಕ್ಕೆ ಕೂಡ ಹಿರಿಬೆಲೆ. ಆ ದೀಪವು ಯಾವುದೆಂದರೆ, ಕರ್ನಾಟಕದ ಬಗ್ಗೆ ಉತ್ಕಟವಾದ ಅಭಿಮಾನ. ನಾನು ಆ ದೂರದ ಬೆಳಕಿನ ಕಡೆ ಎಡವುತ್ತ ಮುಗ್ಗರಿಸುತ್ತ ಸಾಗಿ, ನನ್ನ ಆತ್ಮಕ್ಕೆ ಆ ದೀಪವನ್ನು ಹೊತ್ತಿಸಿಕೊಂಡೆ. ಆಗ ಹೊತ್ತಿಸಿಕೊಂಡ ಅಗ್ನಿಯಿಂದ ನಾನು ಅಗ್ನಿಹೋತ್ರವನ್ನು ಇಂದಿನ ವರೆಗೆ ಇಟ್ಟಿರುವೆ. ಆ ದೀಪಕ್ಕೆ ಹೊತ್ತಿಸಿದ ನನ್ನ ಆತ್ಮದ ಹೂಬತ್ತಿಯನ್ನು ಇಂದಿನ ವರೆಗೆ ನಂದಾದೀಪವಾಗಿಟ್ಟುಕೊಂಡು ಆರಿಸಗೊಡದಿರುವದಕ್ಕೆ ಸತತ ಪ್ರಯತ್ನ ಮಾಡುತ್ತಿರುವೆ. ದೂರದಲ್ಲಿ ಕಾಣುತ್ತಿದ್ದ ದೀಪದಿಂದ ಆತ್ಮಜ್ಯೋತಿಯು ಹೊತ್ತಿದಾಗ ಮಾತ್ರ, ಆತ್ಮವಿಕಾಸದ ದಾರಿ ಕಾಣುತ್ತದೆ. ಆ ಬೆಳಕಿನಗುಂಟ ಸಾಗುವದೇ ಮನುಷ್ಯನು ಮಾಡತಕ್ಕ ಮುಖ್ಯ ಸಾಧನ. ಬಾಹ್ಯದೃಷ್ಟಿಯು ಅಂತರ್ಮುಖವಾದಾಗ ಮಾತ್ರವೇ

ಸಾಧನದ ನಿಜವಾದ ಮರ್ಮವು ಗೊತ್ತಾಗುತ್ತದೆ. ದೇವರ ಗರ್ಭಗುಡಿಯಲ್ಲಿ ಪ್ರವೇಶಿಸುವ ಮುಂಚೆ ಗಂಟೆಗಳನ್ನು ಬಾರಿಸುವದರ ಉದ್ದೇಶವು ಇದೇ. ಗಂಟೆ ಹೊಡೆದ ಕೂಡಲೆ ಮನಸ್ಸಿನ ಮಿಕ್ಕ ಬಾಗಿಲುಗಳೆಲ್ಲವೂ ಮುಚ್ಚಲ್ಪಡಬೇಕು. ಆ ಗರ್ಭಗುಡಿಯು ಕತ್ತಲಿನಲ್ಲಿ ನಮ್ಮ ಆತ್ಮದ ಮಿಣಿಮಿಣಿ ದೀಪದಲ್ಲಿ ನಮಗೆ ನಮ್ಮ ಧ್ಯೇಯಮೂರ್ತಿಯೊಂದೇ ಸದಾ ಕಾಣುತ್ತಿರಬೇಕು. ನಮ್ಮ ಮನದ ಅದೊಂದೇ ಕಿಂಡಿಯನ್ನು ತೆರೆದಿಟ್ಟು, ಮಿಕ್ಕೆಲ್ಲವುಗಳನ್ನು ಮುಚ್ಚಿಡಬೇಕು. ಇರಲಿ, ನನ್ನ ಆ ನಂದಾದೀಪದ ಹೂಬತ್ತಿಯು ಬೆಳಕಿನಲ್ಲಿ ಇಂದಿನವರೆಗೆ ನಾನು ಧ್ಯೇಯಮೂರ್ತಿಯಾದ ಕರ್ನಾಟಕದೇವಿಯ ಮೂರ್ತಿಯನ್ನು ಪೂಜಿಸುತ್ತಿರುವೆ, ಆರಾಧಿಸುತ್ತಿರುವೆ. ನಾನು ಆಗ ನನ್ನ ಉಪಾಸನಾಮೂರ್ತಿಯಾಗಿ ಇಟ್ಟು ಕೊಂಡ ವಿಭೂತಿರೂಪವು, ಬಲು ಚಿಕ್ಕದು. ಕರ್ನಾಟಕದೇವಿಯೇ ಆ ಚಿಕ್ಕ ಮೂರ್ತಿಯು; ನನ್ನ ಉಪಾಸ್ಯ ದೇವತೆಯು. ಅವಳೇ ಭುವನೇಶ್ವರೀ ರೂಪ ದಿಂದ ಹಂಪೆಯ ವಿರೂಪಾಕ್ಷ ದೇವಾಲಯದಲ್ಲಿ ಇಂದಿಗೂ ಪ್ರತಿಷ್ಠಿತಳಾಗಿರು ತ್ತಾಳೆ. ನನ್ನ ಸುದೈವದಿಂದ ಅವಳನ್ನು ಪ್ರತ್ಯಕ್ಷವಾಗಿ ಪೂಜಿಸುವ ಯೋಗವು, ನನ್ನ ತರುಣ ಮಿತ್ರರ ಅಪೇಕ್ಷೆಯಂತೆ ೧–೧೧–೫೬ನೆಯ ಅಂದರೆ, ಕರ್ನಾಟಕ ರಾಜ್ಯೋದಯದ ಶುಭಮುಹೂರ್ತದಲ್ಲಿ ನನಗೆ ಸಿಕ್ಕಿತು! ವಿದ್ಯಾರಣ್ಯರು ಹನ್ನೆ ರಡು ವರ್ಷ ತಪಶ್ಚರ್ಯ ಮಾಡಿ ಅವಳ ಪ್ರಸಾದದಿಂದ ವಿಜಯನಗರ ಸಾಮ್ರಾಜ್ಯ ವನ್ನು ಕಟ್ಟಿರುತ್ತಾರೆ. ಇರಲಿ, ಕರ್ನಾಟಕದ ಸರ್ವಾಂಗೀಣ ಉನ್ನತಿಯಷ್ಟೇ ನನ್ನ ಆಯುಷ್ಯದ ಧ್ಯೇಯವು. ಅದಕ್ಕಿಂತ ಹೆಚ್ಚಿನ ವಿಭೂತಿರೂಪವನ್ನು ನಾನು ಇಟ್ಟುಕೊಂಡಿಲ್ಲ. ಇಟ್ಟುಕೊಳ್ಳುವ ಯೋಗ್ಯತೆಯು ನನ್ನಲ್ಲಿ ಇಲ್ಲ. ಈ ನನ್ನ ಇಷ್ಟದೇವತೆಯ ಮುಖಾಂತರವಾಗಿಯೇ ನಾನು ಸಕಲ ಪುರುಷಾರ್ಥ ಗಳನ್ನು ಸಾಧಿಸಲೆತ್ನಿಸಿರುವೆನು. “ಕರ್ನಾಟಕದ ಸರ್ವಾಂಗೀಣ ಉನ್ನತಿ” ಎಂಬೀ ಮೂರು ಶಬ್ದಗಳಲ್ಲಿ ನನ್ನ ಜಗತ್ತೆಲ್ಲವೂ ಅಡಕವಾಗಿವೆ. ಈ ಮೂರು ಪಾದಗಳಿಂದ ನಾನು ತ್ರಿವಿಕ್ರಮನಂತೆ ಮೂರು ಲೋಕಗಳನ್ನು ಅಳೆಯ ಬಲ್ಲೆನು. ಆ ಮೂರು ಜಗತ್ತುಗಳು ಯಾವವೆಂಗರೆ, (೧) ಕರ್ನಾಟಕ, (೨) ಭರತಖಂಡ, (೩) ವಿಶ್ವ. ಕರ್ನಾಟಕದೇವಿಯ ಉಪಾಸನೆಯ ಬಲದಿಂದ ಈ ಮೂರು ಜಗತ್ತುಗಳ ಕಲ್ಯಾಣವನ್ನು, ಕರ್ನಾಟಕರು ಸಾಧಿಸ ಬಲ್ಲರೆಂಬ ಭರವಸೆ ಎನಗಿದೆ. ಪರಮಾತ್ಮನ ಯಾವದೇ ಪ್ರತಿಮೆಯಿರಲಿ, ಎಷ್ಟೆ

ಚಿಕ್ಕ ಪ್ರತಿಮೆ ಇರಲಿ ಆದರಲ್ಲಿ ಪರಮಾತ್ಮನ ವಿಶ್ವಶಕ್ತಿಯೆಲ್ಲವೂ ಅಡಗಿರುತ್ತ ದೆಂಬ ತತ್ವದ ಮರ್ಮವನ್ನು ಅರಿತವರಿಗೆ ಮಾತ್ರ ಕರ್ನಾಟಕತ್ವವು ಸಂಕುಚಿತ ವಾದ ಭಾವನೆ ಅಲ್ಲವೆಂಬುದು ಗೊತ್ತಾಗುವದು. ಒಂದು ಹುಲ್ಲುಕಡ್ಡಿಯ ಲ್ಲಿಯೂ ಪರಮಾತ್ಮನ ವಿಶ್ವಶಕ್ತಿಯನ್ನು, ಸರ್ವಸಾನ್ನಿಧ್ಯವನ್ನು ಕಾಣಬಹುದು. ಅಂದ ಬಳಿಕ ಕರ್ನಾಟಕದೇವಿಯಲ್ಲಿ ನಾವು ಅವನ್ನು ಕಾಣಲಾರೆವೇ ? ಇರಲಿ.

೧೯೦೫-೬ನೆಯ ಇಸ್ವಿ ಸುಮಾರಕ್ಕೆ ನನ್ನ ಜೀವನದಪ್ರವಾಹವು ಉತ್ತರ ವಾಹಿನಿಯಾಗಿ ಹರಿಯಹತ್ತಿ ಕರ್ನಾಟಕದ ಸರ್ವಾಂಗೀಣ ಉನ್ನತಿ ಎಂಬ ಸಮುದ್ರದ ಕಡೆಗೆ ಧಾವಿಸಹತ್ತಿತೆಂಬುದು ನಿಜ. ಈಗಂತೂ ಆಗಿನ ನಾನೊಬ್ಬನೇ ಆದರಸಂಗಮವನ್ನೂ ಕೂಡ ಕಂಡಿರುವೆನಲ್ಲ ! ಇದು, ನನಗೆ ಮಿಕ್ಕೆಲ್ಲವರಿ ಗಿಂತಲೂ ಎಂಥ ಆನಂದದ ಸಂಗತಿಯು !

ಇಂಥ ದಿವಸವೇ ಆ ಪ್ರವಾಹದ ದಿಸೆಯು ಹೀಗೆ ಪೂರಾ ಬದಲಾಯಿ ತೆಂಬುದನ್ನು ಹೇಳುವದು ನನಗೆ ಶಕ್ಯವಿಲ್ಲದ್ದರಿಂದ ಹೇಳಲಿಲ್ಲ. ಕಾಯಿಯು ಹೋಗಿ ಇಂಥ ದಿವಸವೇ ಅದು ಹಣ್ಣಾಗಲಿಕ್ಕೆ ಪ್ರಾರಂಭವಾಯಿತೆಂಬುದನ್ನು ಯಾರು ನಿಶ್ಚಿತವಾಗಿ ಹೇಳಬಲ್ಲರು ! ೪-೫-೧೯೦೫ನೆಯ ದಿವಸ ಆನೆಗೊಂದಿಗೆ ಹೋಗಿದ್ದೆ. ಆ ದಿವಸವು ನನ್ನ ವಿಚಾರಗಳಿಗೆ ಪುಟಕೊಟ್ಟಿತೆಂದೂ ಆ ಬೀಜ ಗಳು ಪರಿಪಕ್ವವಾಗುವದಕ್ಕೆ ನಾಲ್ಕೆಂಟು ತಿಂಗಳುಗಳು ಬೇಕಾದವೆಂದೂ ಮಾತ್ರ ಸ್ಥೂಲವಾಗಿ ಹೇಳಬಲ್ಲೆ. ಆದಕಾರಣ ಆ ದಿವಸಕ್ಕೆ ನನ್ನ ಜೀವನದಲ್ಲಿಯ ತಿರುಗಣಿ ( R. Reversing Station ) ಸ್ಟೇಶನ್ನು ಎಂದು ಕರೆಯಬಹುದು.

# ೬ನೆಯ ಪ್ರಕರಣ

## ಕರ್ನಾಟಕತ್ವದ ಅರುಣೋದಯ

**ಶ್ರೀ ವಿದ್ಯಾರಣ್ಯರ ಚರಿತೆ ೧೯೦೭** :— ಕರ್ನಾಟಕತ್ವದ ಅಭಿಮಾನವನ್ನು ಹುಟ್ಟಿಸುವದಕ್ಕೆ ನಾನು ಬರೆದ ಮೊಟ್ಟಮೊದಲಿನ ಸಣ್ಣ ಪುಸ್ತಕವೆಂದರೆ ಶ್ರೀ ವಿದ್ಯಾರಣ್ಯಚರಿತೆ. ಅದರ ಒಂದೂ ಪ್ರತಿ ಸಿಕ್ಕುವದಿಲ್ಲ. ಆದಕಾರಣ ಮುಂದೆ ಆದರ ಭಾಷಾಂತರವನ್ನು ಶ್ರೀ. ಮಣ್ಣೂರಕರ ಎಂಬವರು ಮರಾಠಿಯಲ್ಲಿ ಮಾಡಿ, ಅದನ್ನು ೧೯೧೬ನೆಯ ಇಸವಿಯಲ್ಲಿ ಪ್ರಕಟಿಸಿದರು. ಆದರಿಂದ ನನ್ನ ಕೆಲವು ವಾಕ್ಯಗಳನ್ನು ಆಯ್ದು ಇಲ್ಲಿ ಕೊಡುತ್ತೇನೆ. ನಿಜವಾಗಿ ಅದು ಚರಿತ್ರೆಯಷ್ಟೇ ಅಲ್ಲ. ಕರ್ನಾಟಕತ್ವದ ಸ್ಫೂರ್ತಿಯನ್ನೂ ಅಭಿಮಾನವನ್ನೂ ಕನ್ನಡಿಗರಲ್ಲಿ ತುಂಬಿದ ಈಗಲೂ ತುಂಬಬಹುದಾದ ಪ್ರಥಮ ಪುಸ್ತಕ. ಆದರಲ್ಲಿ ಹೀಗೆ ಬರೆದಿರುವೆ. " ಯತ್ರ ಯೋಗೀಶ್ವರಃ ಕೃಷ್ಣಃ....ಎಂಬ ಗೀತಾವಾಕ್ಯಗನುಸರಿಸಿ, ಕೃಷ್ಣಾರ್ಜುನರ ಜೋಡಿಯಂಥ ಜೋಡಿಗಳು ನಮ್ಮ ದೇಶದಲ್ಲಿ ಕಾಲಕಾಲಕ್ಕೆ ಹುಟ್ಟುತ್ತಲೇ ಬಂದಿರುತ್ತವೆ. ಅತಿ ಪ್ರಾಚೀನ ಕಾಲದಲ್ಲಿ ದೇವೇಂದ್ರನಿಗೆ ಬೃಹಸ್ಪತ್ಯಾಚಾರ್ಯರೂ, ಜನಕರಾಜನಿಗೆ ಯಾಜ್ಞವಲ್ಕ್ಯರೂ, ಶ್ರೀ ರಾಮಚಂದ್ರನಿಗೆ ವಶಿಷ್ಠ ಮಹಾಮುನಿಗಳೂ, ಅರ್ಜುನನಿಗೆ ಶ್ರೀ ಕೃಷ್ಣಪರಮಾತ್ಮನೂ ರಾಜಕೀಯ ಗುರುಗಳಾಗಿದ್ದರು. ಇಂಥ ಮಹಾ ವಿಭೂತಿಗಳ ಉಪದೇಶ ಮತ್ತು ಅನುಗ್ರಹದ ಮೂಲಕವೇ ದೇವೇಂದ್ರ, ಜನಕ, ಶ್ರೀ ರಾಮಚಂದ್ರ ಮತ್ತು ಅರ್ಜುನಾದಿ ಪ್ರಭೃತಿ ಸತ್ಪುರುಷರು ತಮ್ಮ ತಮ್ಮ ಲೋಕೋದ್ಧಾರದ ಕೃತ್ಯಗಳನ್ನು ನಿರ್ವಿಘ್ನದಿಂದ ಕೊನೆಮುಟ್ಟಿಸುವದಕ್ಕೆ ಸಮರ್ಥರಾದರು. ಪಾಪನಿರತರಾದ ಮತ್ತು ಪರಪೀಡನದಲ್ಲಿ ಮಗ್ನರಾದ ಪಾಪಿಷ್ಠ ಜನರಿಗೆ ಶಾಸನ ಮಾಡಿ ಭೂಮಾತೆಯ ಭಾರವನ್ನು ಹಗುರು ಮಾಡಲು ಸಮರ್ಥರಾದರು.

ಇದಾಯಿತು ಪ್ರಾಚೀನ ಇತಿಹಾಸದ ಕಥೆ. ಅರ್ವಾಚೀನ ಇತಿಹಾಸದಲ್ಲಿ ಕೂಡ ಇಂಥ ಉದಾಹರಣೆಗಳು ಹೇರಳವಾಗಿ ದೊರೆಯುತ್ತವೆ. ಚಂದ್ರ

ಗುಪ್ತನಿಗೆ ಚಾಣಿಕ್ಯ ಮುನಿಯೂ, ಹೊಯ್ಸಳ ಅರಸನಾದ ವಿಷ್ಣುವರ್ಧನನಿಗೆ ಶ್ರೀ ರಾಮಾನುಜಾಚಾರ್ಯರೂ, ವಿಜಯನಗರದ ಹುಕ್ಕ-ಬುಕ್ಕರಿಗೆ ಶ್ರೀ. ವಿದ್ಯಾರಣ್ಯಸ್ವಾಮಿಗಳೂ, ಶಿವಾಜಿ ಮಹಾರಾಜನಿಗೆ ಶ್ರೀ. ರಾಮದಾಸರೂ, ಮೊದಲನೆಯ ಬಾಜೀರಾಯನಿಗೆ ಶ್ರೀ. ಬ್ರಹ್ಮೇಂದ್ರಸ್ವಾಮಿಗಳೂ ಇಂಥ ಗುರುಗಳಾಗಿದ್ದರು. ಈ ಮಹಾತ್ಮರ ಪುಣ್ಯಪ್ರಭಾವದಿಂದಲೇ ಆಯಾ ಕ್ಷತ್ರಿಯ ವೀರರು ಹೊಸ ಸಾಮ್ರಾಜ್ಯ ಕಟ್ಟುವದಕ್ಕೆ ಸಮರ್ಥರಾದರು.

ದಕ್ಷಿಣ ಹಿಂದುಸ್ತಾನದಲ್ಲಿ ಇಂದಿನ ವರೆಗೆ ಆಗಿಹೋದ ಯಚ್ಚಾವತ್ ಸಾಮ್ರಾಜ್ಯಗಳಲ್ಲಿ ಶ್ರೇಷ್ಠವೆಂದೆನಿಸಿಕೊಂಡ ಮತ್ತು ಅತ್ಯಂತ ವಿಸ್ತೃತವಾದ ವಿಜಯನಗರ ಸಾಮ್ರಾಜ್ಯರೂಪ ಮಹೋದಧಿಗೆ ಚಂದ್ರೋದಯದಂತಿರುವ ನಮ್ಮ ಚರಿತ್ರನಾಯಕರಾದ ಶ್ರೀ. ವಿದ್ಯಾರಣ್ಯ ಮಹಾಮುನಿಗಳ ಚರಿತ್ರೆಗೆ ಮಿಕ್ಕೆಲ್ಲವುಗಳಿಗಿಂತಲೂ ಕೆಲವು ಕಾರಣಗಳ ಮೂಲಕ ಎಲ್ಲಕ್ಕೂ ಹೆಚ್ಚಿನ ಮಹತ್ವವು ಪ್ರಾಪ್ತವಾಗಿದೆ. ಅವುಗಳಲ್ಲಿ ಮುಖ್ಯವಾದವುಗಳೆಂದರೆ— (೧) ಉತ್ತರ ಕಡೆಯಿಂದ ಒತ್ತಿ ಬಂದ ಮುಸಲ್ಮಾನರನ್ನು ಹಿಮ್ಮೆಟ್ಟಿಸಿದ ಮೊಟ್ಟ ಮೊದಲಿನ ಸಾಮ್ರಾಜ್ಯವೆಂದರೆ ಕರ್ನಾಟಕದ ಈ ವಿಜಯನಗರದ ಸಾಮ್ರಾಜ್ಯ ಒಂದೇ! ಕರ್ನಾಟಕಸ್ಥರಿಗೆ, ಆದೇಕೆ ಇಡೀ ಭಾರತಕ್ಕೇನೇ ಇದೇನು ಕಡಿಮೆ ಅಭಿಮಾನದ ಸಂಗತಿಯೇ? ಆದರೆ ನಮ್ಮ ಕರ್ನಾಟಕಸ್ಥರ ಕಡುತರವಾದ ದುರ್ಭಾಗ್ಯದ ಮೂಲಕ, ಸ್ವತಃ ಕನ್ನಡಿಗರಿಗೇನೇ ಅದರ ಮಹತ್ವದ ಅರಿವೂ ಇಲ್ಲ; ಅಭಿಮಾನವೂ ಇಲ್ಲ. ಇದೆಂಥ ಲಜ್ಜಾಸ್ಪದ ಸ್ಥಿತಿ! ಮತ್ತು ಶೋಚನೀಯವೂ ಕರುಣಾಸ್ಪದವೂ ಆದ ಸ್ಥಿತಿ! ಆ ಶ್ರೀ. ವಿದ್ಯಾರಣ್ಯರು ಉದ್ದಾಮ ರಾಜಕಾರಣಿಗಳು. ಅವರು ಹುಕ್ಕ-ಬುಕ್ಕರಲ್ಲಿ ಸ್ಫೂರ್ತಿ ತುಂಬಿ ಮುಸಲ್ಮಾನರನ್ನು ಹೊಡೆದೋಡಿಸಿ ಸಾಮ್ರಾಜ್ಯವನ್ನು ಕಟ್ಟಿಸಿದರು. (೨) ಅಲ್ಲದೆ, ಶ್ರೀ ಶಂಕರಾಚಾರ್ಯರ ಧರ್ಮಸಾಮ್ರಾಜ್ಯವನ್ನು ಪ್ರಸಾರ ಮಾಡಿದರು. (೩) ಅವರು ಎಷ್ಟು ಸಂಸ್ಕೃತ ಗ್ರಂಥಗಳನ್ನು ಬರೆದಿರುವರೋ ಅಷ್ಟೊಂದು ಗ್ರಂಥಗಳನ್ನು ಬಹುಶಃ ಇಡೀ ಭಾರತದಲ್ಲಿ, ಆದೇಕೆ ಜಗತ್ತಿನಲ್ಲಿ ಮತ್ತಾರೂ ಬರೆದಿರುವದಿಲ್ಲೆಂದು ಹೇಳಬಹುದು. ಆದರೆ ಕನ್ನಡಿಗರಿಗೊಬ್ಬರಿಗಾದರೂ ಅವರ ಇತಿಹಾಸವು ಗೊತ್ತಿದೆಯೇ? ಅಭಿಮಾನವಿದೆಯೇ? ಇಲ್ಲ; ಅವರ ಹೆಸರೂ ಕೂಡ ನಮ್ಮವರು ಇನ್ನೂ ಕೇಳಿಲ್ಲ.—ಇತಿಹಾಸವಂತೂ ಒತ್ತಟ್ಟಿಗಿರಲಿ; ನಮ್ಮಲ್ಲಿ ಇತಿ

ಹಾಸವನ್ನು ಬರೆಯುವ ಕಲೆಯೇ ಆಗ ಇರಲಿಲ್ಲ. ಅಲ್ಲದೆ ಆಗಿನ ಕಾಲದ ಶತ್ರುಗಳಾದ ಮುಸಲ್ಮಾನರು ನಿರ್ದಯತೆಯಿಂದ ವಿಜಯನಗರವನ್ನು ವಿಧ್ವಂಸ ಮಾಡಿದ್ದರಿಂದಲೂ ಮತ್ತು ಕೆಲವಂಶದಿಂದ ಸರ್ವಭಕ್ಷಕ ಕಾಲನ ದವಡೆಯಲ್ಲಿ ಸಿಕ್ಕಿದ್ದರಿಂದಲೂ ಸಾಧನಗಳು ಪೂರ್ಣವಾಗಿ ನಷ್ಟವಾಗಿ ಹೋಗಿವೆ. ಆದರೂ ಅಲ್ಲಲ್ಲಿ ಸಿಗುವ ತಾಮ್ರಪಟದ ಶಿಲಾಲಿಪಿಗಳು, ಪರಂಪರೆ ಕಥೆಗಳು, ಪರದೇಶೀ ಪ್ರವಾಸಿಗಳ ಉಲ್ಲೇಖಗಳು, ಶತ್ರುಗಳ ಜಾತೀಯರು ಬರೆದ ಏಕದೇಶೀ ಇತಿಹಾಸಗಳು ಇವುಗಳ ಮೇಲೆ ಅವಲಂಬಿಸಿ, ನಾನು ಈ ಚರಿತ್ರೆಯನ್ನು ಬರೆದಿರುತ್ತೇನೆ ಎಂದು ಮುಂತಾಗಿ ಆ ಪುಸ್ತಕದಲ್ಲಿ ಹೇಳಿರುವೆ. ಮತ್ತು ನಾನು ೪-೫-೧೯೦೫ ರಲ್ಲಿ ಪ್ರತ್ಯಕ್ಷವಾಗಿ ಕಂಡುಬಂದ ವಿಜಯನಗರ ಪಟ್ಟಣವನ್ನು ವರ್ಣಿಸಿರುವೆ. ವಿಜಯನಗರಕ್ಕೆ ಈಗಲೂ ಹೋಗಿ ನೋಡಿ ಬರ್ರಿ. ಅಲ್ಲಿ ನಿಮಗೆ ಕಾಣುವ ದಿವ್ಯ ಕಟ್ಟಡಗಳೂ, ವಿಶಾಲವಾದ ಕಲ್ಲು ಅಂಗಡಿ ಸಾಲುಗಳೂ, ಅರಸುಮನೆಗಳೂ, ಕೋಟಿಕೊತ್ತಳಗಳೂ ಇವೆಲ್ಲವುಗಳು ಹಿಂದೂ ಜನರ ವೈಭವದ ಹಾಗೂ ವಿದ್ವತ್ತೆಯ ಸಾಕ್ಷಿಯನ್ನು ಕೊಡುವವು. ಅವುಗಳ ಮೇಲಿಂದ ಇವೆಲ್ಲವುಗಳಿಗೆ ಕಾರಣೀಭೂತವಾದ ಮಹಾಪುರುಷರ ಅತುಲ ವಿದ್ವತ್ತೆ, ಅನುಪಮ ರಾಜಕಾರಣಪಟುತ್ವ, ಅಸಮಾನ ಧೈರ್ಯ ಮತ್ತು ಅಕೃತ್ರಿಮ ಭಕ್ತಿ ಮುಂತಾದ ಅನೇಕ ಸದ್ಗುಣಸಮೂಹದ ಕಲ್ಪನೆ ನಿಮಗೆ ಚೆನ್ನಾಗಿಯೇ ಆಗುತ್ತದೆಂಬುದು ನಿರ್ವಿವಾದವಿದೆ. ಈ ಸಾಮ್ರಾಜ್ಯದ ಸೂತ್ರಗಳನ್ನು ಸುಮಾರು ೫೦ ವರ್ಷಗಳ ವರೆಗೆ ಹಿಡಿದ ರಾಜಗುರುಗಳು ಅವರು. ಅಂತೇ ಅವರಿಗೆ '**ಕರ್ನಾಟಕ ಸಿಂಹಾಸನ ಸ್ಥಾಪನಾಚಾರ್ಯ**' ಎಂಬ ಬಿರುದು ಬಂದಿದೆ. ಮತ್ತು ಶ್ರೀ ಶಂಕರಾಚಾರ್ಯರ ಪೀಠವನ್ನು ಆರೋಹಣ ಮಾಡಿ ವೇದಾಂತರಾಜ್ಯ ಪರಿಪಾಲನ ಮಾಡಿದ್ದರಿಂದ 'ಜಗದ್ಗುರುಗಳು' ಎಂಬ ಗೌರವದ ಬಿರುದು ಬಂದಿದೆ. ಅವರು, ಚದರಿ ಹೋದ ಸಣ್ಣ ಸಣ್ಣ ರಾಜ್ಯಗಳನ್ನೆಲ್ಲ ಒಟ್ಟುಗೂಡಿಸಿ, ಕರ್ನಾಟಕದ ಅಭಿಮಾನವನ್ನು ತುಂಬಿ, ಭವ್ಯವಾದ ಸಾಮ್ರಾಜ್ಯವನ್ನು ಕಟ್ಟಿದ್ದಾರೆ. ವೇದಾಂತ, ನ್ಯಾಯ, ಮೀಮಾಂಸೆ, ವ್ಯಾಕರಣ, ಜ್ಯೋತಿಷ, ಆಯುರ್ವೇದ, ರಾಜಕಾರಣ, ಯುದ್ಧಕಲೆ, ರಸಾಯನಶಾಸ್ತ್ರ, ಚರಿತ್ರೆ ಮುಂತಾದ ವಿಷಯಗಳ ಮೇಲೆ ಅವರ ಗ್ರಂಥಗಳಿವೆ. "ಜೀವನ್ಮುಕ್ತಿವಿವೇಕ" ಎಂಬ ಗ್ರಂಥವನ್ನು ಅವರು ವೀರ ಬುಕ್ಕಮಹಾರಾಜನ ಹೇಳಿಕೆಯಿಂದ ಬರೆದಿದ್ದಾರೆ.

ಅವರ 'ಸರ್ವದರ್ಶನ ಸಂಗ್ರಹ'ದಲ್ಲಿ ಮಧ್ವಾಚಾರ್ಯರವರೆಗಿನ ಎಲ್ಲ ಮತೀಯರ ದರ್ಶನಗಳು ಬಂದಿವೆ.

ಆ ಕಾಲದಲ್ಲಿ ರಾಜಕಾರಣಕ್ಕೆ ಅತ್ಯಂತ ಮಹತ್ವದ ಸ್ಥಾನವಿತ್ತು. ಏಕೆಂದರೆ ಭರತಭೂಮಿ ಪಾರತಂತ್ರ್ಯದಲ್ಲಿ ಸಿಕ್ಕು ವಿಲಿವಿಲಿ ಒದ್ದಾಡುವ ಪ್ರಸಂಗ ಬಂದಿತ್ತು. ಮತ್ತು ಹಿಂದೂ ಧರ್ಮವೂ ನಷ್ಟ ಹೊಂದುತ್ತಿತ್ತು. ವಿದ್ಯಾರಣ್ಯರ ಉದಯ ಕಾಲದ ಸುಮಾರಕ್ಕೆ ಉತ್ತರ ಹಿಂದುಸ್ತಾನವೆಲ್ಲ ಪರತಂತ್ರವಾಗಿತ್ತು. ದಕ್ಷಿಣದಲ್ಲಿ ಕೂಡ ದೇವಗಿರಿ, ಒರಂಗಲ್ಲು ರಾಜ್ಯಗಳು ನುಂಗಲ್ಪಟ್ಟಿದ್ದವು, ಅವರು ಕೃಷ್ಣಾನದಿಯ ವರೆಗೆ ಕಾಲು ಚಾಚಿದ್ದರು. ಮುಂತಾಗಿ– ಈ ಪ್ರಕಾರವಾಗಿ ಆ ಚಿಕ್ಕ ಪುಸ್ತಕದಲ್ಲಿ ಹುರಿದುಂಬಿಸಿ ಬರೆದದ್ದರಿಂದ ಅದು ಚಿಕ್ಕ ಪುಸ್ತಕವಾದರೂ ಕರ್ನಾಟಕದಲ್ಲಿ ವಿಲಕ್ಷಣ ಜಾಗ್ರತಿಯಾಗುವದಕ್ಕೆ ಕಾರಣವಾಯಿತು! ಇದನ್ನು ಬರೆಯುವ ಮೊದಲು ಎರಡು ಮೂರು ಸಲ ಹಂಪೆಗೆ ಹೋಗಿ, ಅಲ್ಲಿಯ ಸ್ಥಿತಿಗತಿಗಳನ್ನು ತಿಳಕೊಂಡಿದ್ದೆ. ಇದು ಹೊರಟ ಮೇಲೆ ಹಿಂಡುಗಟ್ಟಲೆ ಜನರನ್ನು ಹಂಪೆಗೆ ಕಳಿಸಿದೆ. ನೂರಾರು ಹಾಯಸ್ಕೂಲ ವಿದ್ಯಾರ್ಥಿಗಳನ್ನು ಸ್ವತಃ ನಾನೇ ಕರೆದುಕೊಂಡು ಹೋಗಿ ತೋರಿಸಿಕೊಂಡು ಬಂದೆ. ಶ್ರೀ. ವಿದ್ಯಾರಣ್ಯ ಉತ್ಸವವನ್ನು ಕರ್ನಾಟಕದ ರಾಷ್ಟ್ರೀಯ ಉತ್ಸವವಾಗಿ ಏರ್ಪಡಿಸಿದೆ. ಒಂದೊಂದು ಸಲ ತಕ್ಕೊಂಡು ಹೋದ ತರುಣರ ತಂಡದಲ್ಲಿ ನೂರಾರು ಹಾಯಸ್ಕೂಲ ವಿದ್ಯಾರ್ಥಿಗಳೂ ಇರುತ್ತಿದ್ದರು. ನಾನು ಕನಿಷ್ಠ ೧೦–೧೨ ಸಲವಾದರೂ ಹಂಪಿಗೆ ಹೋಗಿ ಬಂದಿರುವೆನು. ಅವುಗಳಲ್ಲಿ ಮೊದಲಿನ ೫–೬ ಪ್ರವಾಸಗಳು ಕೇವಲ ಸಂಶೋಧನಕ್ಕಾಗಿ ಕೈಕೊಳ್ಳಲ್ಪಟ್ಟವುಗಳು. ನಾನು ಮೊದಲು ೩–೪ ಸಲ ಹೋದಾಗ ಹಂಪಿಯು ನೆಲದಲ್ಲಿ ಬಹುಶಃ ಪೂರಾ ಹೂಳಿಹೋಗಿತ್ತು. ೧೯೦೩ರಲ್ಲಿ ಲಾರ್ಡ ಕರ್ಝನರು ಮೊದಲು ಹಂಪಿಯನ್ನು ಸಂದರ್ಶಿಸಿ ಅದರ ವೈಭವಕ್ಕೆ ಬೆರಗುಗೊಂಡು ಅಲ್ಲಿಯ ಕಟ್ಟಡಗಳನ್ನು ಸಂರಕ್ಷಿಸುವದು ಅವಶ್ಯವೆಂದು ಮನಗಂಡು ಹಳೆಯ ಕಟ್ಟಡಗಳ ಸಂರಕ್ಷಣ ಕಾಯದೆಯನ್ನು ಅದೇ ಆಗ ಪಾಸು ಮಾಡಿಕೊಂಡಿದ್ದರು. ನಾನು ಅಲ್ಲಿಗೆ ಮೊದಲು ಸಲ ಹೋದಾಗ ಆ ಹೂಳಿಹೋದ ಹಾಳು ಹಂಪೆಯನ್ನು ಅಗೆದು ತೆಗೆಯುವ ಕಾರ್ಯ ಅದೇ ಪ್ರಾರಂಭವಾಗಿತ್ತು. ಕೃಷ್ಣದೇವರಾಯನ ಗುಡಿಯ ಎದುರಿನ ರಸ್ತೆಯು ೨೫–೩೦ ಫೂಟು ಕೆಸರಿನಲ್ಲಿ ಹೋದದ್ದನ್ನು

ಅಗೆದು ತೆಗೆಯಹತ್ತಿದ್ದರು. ಹಂಪಿ ಶ್ರೀ ವಿರೂಪಾಕ್ಷ ದೇವಾಲಯದ ಮುಂದಿನ ರಸ್ತೆ ೧೦೦ ಫೂಟು ಅಗಲಾಗಿದ್ದರೆ, ನಾನು ಈ ಕೃಷ್ಣದೇವರಾಯನ ದೇವಾಲಯದ ಮುಂದಿನ ರಸ್ತೆಯನ್ನು ಆಗ ಅಳೆದು ನೋಡಿದಾಗ, ಅದು ಸುಮಾರು ೧೫೫ ಫೂಟು ಅಗಲವಾಗಿತ್ತು. ಉದ್ದಕ್ಕೆ ಸರಳವಾಗಿ ಹೋಗಿದೆ. ಹಂಪಿಯಂಥ ಕಲ್ಲು ದಿಬ್ಬಗಳಲ್ಲಿ ಕೂಡ ಶೀರ ಸರಳ ರಸ್ತೆಗಳನ್ನು ನೋಡಿ ಆಶ್ಚರ್ಯಪಟ್ಟೆನು. ಹಂಪಿಯ ಉದ್ದಗಲುಗಳ ಅಳತೆ ಸುಮಾರು ೧೨ ಮೈಲುಗಳು. ಅಡ್ಡಗಲುಗಳ ಅಳತೆ ಅದೂ ಸುಮಾರು ೧೦-೧೨ ಮೈಲುಗಳು. ಜನಸಂಖ್ಯೆ ಬಿ. ಸೂರ್ಯ ನಾರಾಯಣರಾಯರ ಅಭಿಪ್ರಾಯದಂತೆ ಸುಮಾರು ೫೦ ಲಕ್ಷ. ಆದರ ರಚನೆಯನ್ನು ಅಭ್ಯಸಿಸಲಿಕ್ಕೆ ಕುತೂಹಲವುಳ್ಳವನಾದೆನು. ಹಾಗೆ ಮಾಡುವಾಗ ನನಗೆ ಮತ್ತೊಂದು ವಿಶೇಷ ಸಂಗತಿಯು ಗೊತ್ತಾಯಿತು. ಅದೆಂದರೆ ಪ್ರತಿಯೊಂದು ರಸ್ತೆಯ ಮಗ್ಗುಲಿಗೆ ಕಮಲಗಳಿಂದ ತುಂಬಿದ ಒಂದು ಕೊಳ; ಅಂದರೆ ಸರೋವರವಿದ್ದು, ಆದರ ಸುತ್ತಲು ಪಾವಟಿಗೆಗಳು; ಮೇಲ್ಗಡೆಗೆ ಚಿಕ್ಕ ಚಿಕ್ಕ ಸುಂದರವಾದ ದೇವಾಲಯಗಳು. ಆಗ ನನಗೆ ಗದುಗಿನ ಕೊನ್ನೇರಿ ಚಿಕ್ಕ ಹೊಂಡವು ಮನಸ್ಸಿನಲ್ಲಿ ಬಂದಿತು. ಮತ್ತೊಂದು ಸಲ ಹೋದಾಗ, ಅರಮನೆಯಲ್ಲಿಯ ಒಳಕಾಲುವೆಗಳ ದಂಡೆಯ ಮೇಲೆ ಕಲ್ಲುಬಾಳೆ ಎಲೆಗಳನ್ನು ಕಂಡದ್ದಲ್ಲದೆ ಅಲ್ಲಿ ೩ ಕೊಳವೆಗಳುಳ್ಳ ಪಾಯಿಪುಗಳನ್ನು ಕಂಡೆ. ಆ ಮುರುಕ ಒಂದು ಪಾಯಿಪನ್ನು ಮುಂದೆ ತಂದು ನನ್ನ ಇತಿಹಾಸ ಮಂಡಲದಲ್ಲಿ ಇಟ್ಟುಕೊಂಡಿದ್ದೆ. ೩ ಕೊಳವೆಗಳನ್ನು ಕೂಡಿಸಿದ್ದರ ಮರ್ಮ ತಿಳಿಯಲಿಲ್ಲ. ಮತ್ತೊಂದು ಸಲ ಹೋದಾಗ ಶ್ರೀ ವಿರೂಪಾಕ್ಷ ದೇವಾಲಯದ ಕಲ್ಯಾಣ ಮಂಟಪದ ಮೇಲ್ಬದಿಗೆ ಒಂದು ಪಲ್ಲಕ್ಕಿಯಲ್ಲಿ ಸ್ವಾಮಿಗಳೊಬ್ಬರು ಕುಳಿತು ಕೊಂಡದ್ದನ್ನೂ ಆ ಪಲ್ಲಕ್ಕಿಯ ಹಿಂದುಗಡೆಗೆ ಅರಸರ ಬಣ್ಣದ ಚಿತ್ರಗಳನ್ನೂ ಕಂಡೆ. ಆಗ ತಟ್ಟನೆ ಅದು ಶ್ರೀ ವಿದ್ಯಾರಣ್ಯರ ಚಿತ್ರವಿರಬೇಕೆಂದು ತಿಳಿದು ಆನಂದವಾಯಿತು. ಆದರೆ ಅದು ಇದ್ದುದು ಅತಿ ಎತ್ತರದ ಮೇಲೆ. ಆಗ ಅದರ ಫೋಟೊ ತಕ್ಕೊಳ್ಳುವದು ಆಗಲಿಲ್ಲ. ಮುಂದೆ ಮತ್ತೊಂದು ಸಲ ವ್ಹಿಕ್ಟೋರಿಯಾ (ಈಗಿನ ವಿದ್ಯಾರಣ್ಯ) ಹಾಯಸ್ಕೂಲಿನ ನೂರಾರು ವಿದ್ಯಾರ್ಥಿಗಳನ್ನು ಆಗ ಅದರ ಪ್ರಿನ್ಸಿಪಾಲರಾಗಿದ್ದ ಹುಕ್ಕೇರಿ ರಾಮರಾಯರೂ ಗುತ್ತಲ ರಂಗಾಚಾರ್ಯರೂ ನಾನೂ ಕೂಡಿ ಕರಕೊಂಡು ಹೋದೆವು. ಆರೇಳು ದಿನ

ಅಲ್ಲಿ ತಳವೂರಿದ್ದೆವು. ಆಗ ನನಗೆ ಆ ವಿದ್ಯಾರಣ್ಯರ ಫೋಟೋ ತಕ್ಕೊಳ್ಳುವ ಸಂಧಿ ಲಭಿಸಿತು. ಆದರೆ ಆಗ ಒಂದು ತಪ್ಪಾಯಿತು. ಕೆಲವು ವಿದ್ಯಾರ್ಥಿಗಳಿಗೆ ಬಲು ದೊಡ್ಡದಾದ ನಿಚ್ಚಣಿಕೆಯನ್ನು ನೀಟಾಗಿ ಹಿಡಿದುಕೊಂಡು ಒಬ್ಬನು ಮೇಲ್ಬದಿಗೆ ಏರಿ ಹೋಗಿ ಆ ಚಿತ್ರದ ಧೂಳಿಯನ್ನು ಝಾಡಿಸಲಿಕ್ಕೆ ಹೇಳಿದೆನು. ಆ ಪ್ರಕಾರ ಕೆಲ ಸಾಹಸೀ ವಿದ್ಯಾರ್ಥಿಗಳು ಕೂಡಿ ಅದನ್ನು ಮಾಡ ಹತ್ತಿದರು. ಇತ್ತ ನಾನು ನನ್ನ ಪೂಜೆಯಲ್ಲಿ ಕುಳಿತಿದ್ದೆ. ವಿದ್ಯಾರ್ಥಿಗಳು ಧೂಳ ಝಾಡಿಸಬೇಕೆಂದು ಒದ್ದೆಯಿಂದ ಒರೆಸುತ್ತಿದ್ದರು. ಆದರಿಂದ ಸ್ವಲ್ಪ ಬಣ್ಣ ಅವರ ಕೈಗೆ ಹತ್ತಿತು. ಅವರು, ಪೂಜೆಯಲ್ಲಿ ಕುಳಿತ ನನಗೆ ಅದನ್ನು ತಿಳಿಸಿದರು. ಕೂಡಲೇ ಅದನ್ನು ನಿಲ್ಲಿಸಿಬಿಟ್ಟೆನು. ಏಕೆಂದರೆ, ನೀರಿನಿಂದ ಅಳಿಸಿ ತೆಗೆಯುವದು ಹಳೆಯ ಚಿತ್ರಗಳಿಗೆ ಹಾನಿಕರವಾದದ್ದು. ಮುಂದೆ ಹಾಗೆಯೇ ಅದರ ಫೋಟೋ ತೆಗೆದುಕೊಳ್ಳಲಿಕ್ಕೆ ಹೇಳಿದೆ. ಅದು ಬಹಳ ಕಠಿಣದ ಕೆಲಸ. ಅಂತೂ ಇಂತೂ ತಕ್ಕೊಂಡರು. ಆ ಮಸಕಾದ ಫೋಟೋ ತಂದು ' ಸಂಘ 'ದಲ್ಲಿ ಇಟ್ಟಿರುವೆ. ಮುಂದೆ ಅದರ ಚಲೋ ಫೋಟೋ ತೆಗೆಯಲಿಕ್ಕೆ ಕೆಲ ಫೋಟೋಗ್ರಾಫರರಿಗೆ ( ಆಗ ಫೋಟೋಗ್ರಾಫರರು ಬಹಳ ಮಂದಿ ಇದ್ದಿಲ್ಲ) ಹೇಳಿದೆ. ಇನ್ನೂ ವರೆಗೂ ಅಭಿಮಾನಿಗಳಾರೂ ಅದರ ಫೋಟೋ ತಕ್ಕೊಂಡಿಲ್ಲ. ಇದೇ ಕಾಲಕ್ಕೇನೇ ನಾನೂ ಗುತ್ತಲ ರಂಗಾಚಾರ್ಯರೂ ಸಂಸ್ಕೃತ ರಾಮಾಯಣವನ್ನು ತಕ್ಕೊಂಡು ಅದರಲ್ಲಿಯ ವರ್ಣನೆಗಳಿಗೂ ಈಗಿದ್ದ ಸ್ಥಿತಿಗೂ ಹೋಲಿಸಿ ನೋಡಿದೆವು. ಈಗಲೂ ಋಷ್ಯಮೂಕ ಪರ್ವತ, ಮಾತಂಗ ಪರ್ವತ, ಆಂಜನೇಯ ಬೆಟ್ಟ, ಪಂಪಾ ಸರೋವರ, ವಾಲಿಕಾಷ್ಠ, ವಾಲಿಭಾಂಡಾರ ಮುಂತಾದವುಗಳೂ, ಶಬರಿ ಗುಹೆಯೂ ಇವೆ. ಇವೆಲ್ಲವುಗಳನ್ನು ನೋಡಿ ಆಶ್ಚರ್ಯಪಟ್ಟೆವು. ಆ ಶಬರಿ ಗುಹೆಯಲ್ಲಿ ನಾವು ಒಳಹೊಕ್ಕಾಗ ಒಬ್ಬ ಹರೆಯದ ಹೆಣ್ಣುಮಗಳು ಒಳಗಿನಿಂದ ಮುಂದೆ ಬಂದು, "ಹಂ ಶಬರಿ ಹೈ." ಅಂದು ನಕ್ಕಳು. ಅವಳು ಉತ್ತರ ಹಿಂದುಸ್ತಾನದಿಂದ ಕಿಷ್ಕಿಂಧಾ ನೋಡಲಿಕ್ಕೆ ಬಂದ ಒಬ್ಬ ವಿರಾಗಿಣಿ. ಉತ್ತರ ಹಿಂದುಸ್ತಾನದಿಂದ ಇಂಥ ಸನ್ಯಾಸಿಗಳು ಕಿಷ್ಕಿಂಧೆಯನ್ನು ನೋಡಲಿಕ್ಕೆ ಬಂದೇ ಬರುತ್ತಿರುವರು. ನಮ್ಮ ಕನ್ನಡಿಗರು ಕಿಷ್ಕಿಂಧೆಯನ್ನು ನೋಡಲಿಕ್ಕೆ ಎಷ್ಟು ಜನರು ಹೋಗುತ್ತಿರುವರು ?

ಮುಂದೆ ಹಲವು ಸಲ ಹಂಪೆಗೆ ನಾನು ಹೋಗಿದ್ದರೂ ಅದನ್ನು ಕೇವಲ

ತಂಡಗಳಿಗೆ ತೋರಿಸುವದರಲ್ಲಿಯೇ ಹೋಯಿತಲ್ಲದೆ ಸಂಶೋಧನೆಯಾಗಲಿಲ್ಲ. ಅಲ್ಲದೆ ಇಷ್ಟೊತ್ತಿಗೆ ಕರ್ನಾಟಕತ್ವದ ಕಲ್ಪನೆ ತರುಣರಲ್ಲಿ ಬೇರುಬಿಡಹತ್ತಿತ್ತು. ಸಂಶೋಧನೆಗಿಂತ ಪ್ರಚಾರ ಕಾರ್ಯಕ್ಕೆ ನಾನು ಹೆಚ್ಚು ಗಮನಕೊಡಬೇಕಾಯಿತು. ಆ ದೃಷ್ಟಿಯಿಂದ ೧೯೧೩ರಲ್ಲಿ ನಾನೂ ನರಗುಂದಕರ ರಾಮರಾಯರೂ "ಕನ್ನಡಿಗರ ಭ್ರಮರನಿರಸನ" ವೆಂಬ ಅತಿ ಚಿಕ್ಕ ಪುಸ್ತಕವನ್ನು ಕೇವಲ ಹಾಯಸ್ಕೂಲಗಳ ವಿದ್ಯಾರ್ಥಿಗಳು ನಾಟಕ ಪ್ರಯೋಗ ಮಾಡುವದಕ್ಕೆಂದು, ಹುಕ್ಕೇರಿ ರಾಮರಾಯರ ಹೇಳಿಕೆಯ ಪ್ರಕಾರ ಬರೆದೆವು. ಆದರ ಉದ್ದೇಶ ವಿದ್ಯಾರ್ಥಿಗಳಲ್ಲಿ ಭಾಷಾಭಿಮಾನವನ್ನು ಹುಟ್ಟಿಸುವದು; ಮತ್ತು ಮರಾಠಿಯ ಮೋಹಕ್ಕೆ ಬಲಿಬಿದ್ದು ಲಗ್ನಪತ್ರ ಮುಂತಾದವುಗಳನ್ನು ಸೊಟ್ಟಪಟ್ಟ ಮರಾಠಿಯಲ್ಲಿ ಬರೆಯುವದನ್ನು ಅಣಕಿಸುವದು. ಅದು ಅಂಥ ಸೊಟ್ಟಪಟ್ಟ ಮರಾಠಿ ಮಿಶ್ರಿತ ಕನ್ನಡ ನಾಟಕ. ಅದೇ ಆಗ, ನಾನು ಮುಂಬಯಿ ಹತ್ತಿರಿರುವ ಕಾರ್ಲೆ ಕಾನ್ಹೇರಿಗಳಿಗೆ ಹೋಗಿ ನೋಡಿ ಬಂದಿದ್ದೆ. ಅವು ನಮ್ಮ ಕರ್ನಾಟಕ ರಾಜರೂ ಶಿಲ್ಪಿಗಳೂ ಇವರಿಂದ ನಿರ್ಮಿತವಾದವೆಂಬುದನ್ನು ಸಂಶೋಧಿಸಿದ್ದೆ. ಅದನ್ನು ವಿದ್ಯಾರ್ಥಿಗಳಿಗೆ ತಿಳಿಸಿ ಹೇಳಿ ಅಭಿಮಾನ ತುಂಬಿಸುವದೂ ಆ ಪುಸ್ತಕದ ಮತ್ತೊಂದು ಉದ್ದೇಶವಾಗಿತ್ತು. ಮತ್ತು ಅದನ್ನು ಬರೆಯುವದರಲ್ಲಿ ಮತ್ತೂ ಒಂದು ನನ್ನ ಸ್ವಂತ 'ವಿಕ್ಷಿಪ್ತ' ವಿಚಾರವನ್ನು ತಿಳಿಸುವದಾಗಿತ್ತು. ಅದೆಂದರೆ, ವಿದ್ಯಾರ್ಥಿಗಳು ವಿಶೇಷತಃ ಹಾಯಸ್ಕೂಲ ವಿದ್ಯಾರ್ಥಿಗಳು ಹೆಣ್ಣು ಪಾತ್ರಗಳನ್ನು ವಹಿಸಬಾರದೆಂಬುದು. ಸಂಸ್ಕೃತದಲ್ಲಿ ಕೂಡ ಈ ತರಹದ ನಾಟಕಗಳು ಇದ್ದಿಲ್ಲ. ಇರಲಿ, ಈ ಪುಸ್ತಕವು ಅತಿ ಚಿಕ್ಕದಾದರೂ ಆ ಕಾಲದಲ್ಲಿ ಕರ್ನಾಟಕತ್ವವನ್ನು ಬೆಳಿಸುವದರಲ್ಲಿ ಅತ್ಯಂತ ಪರಿಣಾಮಕಾರಿಯಾದ ಸಾಧನವಾಗಿತ್ತು. ಅದು ಮುಂದೆ ಅನೇಕ ಹಾಯಸ್ಕೂಲ ವಿದ್ಯಾರ್ಥಿಗಳಿಂದ ಆಡಲ್ಪಟ್ಟಿತು.



## ೯ನೆಯ ಪ್ರಕರಣ

### ಕರ್ನಾಟಕತ್ವದ ಬಗ್ಗೆ ನನ್ನ ತಪಶ್ಚರ್ಯ (ಐತಿಹಾಸಿಕ) (೧೯೦೫-೧೯೧೭)

**ನನ್ನ ಐತಿಹಾಸಿಕ ಜೀವನದ ಉಗಮ** :— ೧೯೦೫ರಲ್ಲಿ ಆನೇಗೊಂದಿಯ ಆಕಸ್ಮಿಕ ದರ್ಶನದಿಂದ ನನ್ನ ಜೀವನದಲ್ಲಿ ಐತಿಹಾಸಿಕ ಸೆಲೆ ಒಡೆಯಿತೆಂಬುದನ್ನು ಹಿಂದೆ ಹೇಳಿಯೇ ಇರುವೆ. ೧೯೦೭ರಲ್ಲಿ ನಾನು ವಾಗ್ಭೂಷಣ ಮಾಸಪತ್ರಿಕೆಗೆ ಸಂಪಾದಕನಾದಾಗ ಆ ಸೆಲೆಯು ಪುಟಚಿಮ್ಮಲಾರಂಭಿಸಿತು. ಕರ್ನಾಟಕ ವಿದ್ಯಾವರ್ಧಕ ಸಂಘವು ೧೮೯೦ರಲ್ಲಿ ಸ್ಥಾಪಿತವಾಗಿ, ೧೫ ವರ್ಷ ಅಸ್ತಿತ್ವದಲ್ಲಿದ್ದರೂ ಕನ್ನಡ ನುಡಿಯ ಅಭಿಮಾನ ಕೂಡ ಏಕೆ ಹುಟ್ಟಲಿಲ್ಲವೆಂಬುದನ್ನು ನಾನು ಯೋಚಿಸಿದಾಗ, ನಮ್ಮವರಲ್ಲಿ ತಮ್ಮ ಪೂರ್ವಜರ ಬಗ್ಗೆ ಇದ್ದ ತಿರಸ್ಕಾರಬುದ್ಧಿಯೇ ಕಾರಣವೆಂಬ ಮಾತು ನನಗೆ ಆಗ ಹೊಳೆಯಿತು. ಅಲ್ಲಿಯವರೆಗೆ ಅದು ಯಾರ ಲಕ್ಷ್ಯದಲ್ಲೂ ಬಂದಿರಲಿಲ್ಲ. ನನ್ನಲ್ಲಿ ಕೂಡ ಆ ನಿರಭಿಮಾನದ ಛಾಯೆ ಇದ್ದೇ ಇತ್ತು. ಶಾಲೆಯಲ್ಲಿ ನಾವು ಕಲಿತ ಇತಿಹಾಸದಲ್ಲಿ "ಕರ್ನಾಟಕ"ದ ಹೆಸರು ಶೂನ್ಯ. ಪರದಾಸ್ಯದಲ್ಲಿ ಸಿಕ್ಕಾಗಿನಿಂದ ಅಂದರೆ, ಮುಸಲ್ಮಾನರ ಕಾಲದಿಂದ ಪ್ರಾರಂಭವಾದ ಇತಿಹಾಸ ಅದು. ನಡುವೆ, ವಿಜಯನಗರದ ಹೆಸರೇನೋ ಸ್ವಲ್ಪ ಬರುತ್ತಿತ್ತು. ಆದರೆ ವಿಜಯನಗರದ ಅರಸರು ಕನ್ನಡಿಗರೆಂಬ ಕಲ್ಪನೆ ನಮಗಿರಲಿಲ್ಲ. ಮರಾಟರ ಕಾಲದಲ್ಲಿ ಕನ್ನಡಿಗರು ಅವರ ಆಡಳಿತಕ್ಕೆ ಒಳಪಟ್ಟ ಕಾರಣ ನಮ್ಮ ದಾಸ್ಯಮನೋವೃತ್ತಿ ಬೆಳೆಯಿತು. ನಾವು ಕಡಿಮೆಯವರು, ಮರಾಟರು ಮೇಲಿನವರು ಎಂಬ ಆತ್ಮಘಾತಕವಾದ ಭಾವನೆ ನಮ್ಮವರ ತಲೆಯಲ್ಲಿ ಬಲವಾಗಿ ಬೇರೂರಿತು. ಇಂಥ ಸ್ಥಿತಿಯಲ್ಲಿ ಕನ್ನಡದ ಅಭಿಮಾನ ಬೆಳೆಯದಿದ್ದರೆ ಆಶ್ಚರ್ಯವೇನು! ಆದುದರಿಂದ ನಾನು ಕೂಡಲೆ, ನಮಗೆ ಇತಿಹಾಸವು ಏನಾದರೂ ಉಂಟೋ ಎಂಬುದರ ಸಂಶೋಧನಕ್ಕೆ ಹತ್ತಿದೆ. **ಮುಂಚೆ ಆತ್ಮವಿಕಾಸ, ಆ ಬಳಿಕ ಪ್ರಚಾರ**, ಇದು ನನ್ನ ಮುಖ್ಯ ತತ್ವ. ನಮ್ಮ ವೈಭವವನ್ನು ಹುಡುಕುವದು, ತಿಪ್ಪೆಯೊಳ

ಗಿಂದ ಮುತ್ತನ್ನು ಆರಿಸುವಷ್ಟು ಕಠಿಣ ಕೆಲಸವಾಗಿತ್ತು. ಐತಿಹಾಸಿಕ ಸ್ಥಳಗಳಿಗೆ ಪ್ರವಾಸ, ಶಿಲಾಲಿಪಿಗಳ ಅಭ್ಯಾಸ ಇವುಗಳಿಂದ ಆ ಕಾರ್ಯ ಸಾಧಿಸಿದೆ. ಅರ್ಥಾತ್ **ನನ್ನ ಸಾರ್ವಜನಿಕ ಜೀವನವೆಲ್ಲವೂ ನನ್ನ ಸ್ವಂತ ಖರ್ಚಿನಿಂದಲೇ.** ಅದಕ್ಕಾಗಿ ಸಾಲವನ್ನೂ ಮಾಡಿದೆ. ಇರಲಿ, ನಾನು ಅಭ್ಯಾಸದಲ್ಲಿ ಹಿಂದೆ ಹಿಂದೆ ಹೋದಂತೆ, ನಮ್ಮ ವೈಭವವು ಹೆಚ್ಚು ಹೆಚ್ಚು ಉಜ್ವಲವಾಗಿತ್ತೆಂಬುದು ಗೊತ್ತಾಯಿತು. ಹೀಗೆ, ನಾನು ಗತವೈಭವದ ಉಗಮುವನ್ನು ೧೦೦೦ ವರ್ಷ ಹಿಂದಕ್ಕೆ ಒಯ್ದೆ; ಅಂದರೆ ನಮ್ಮ ಕನ್ನಡ ನಾಡು ಒಂದು ಸಾವಿರ ವರ್ಷಗಳ ವರೆಗಾದರೂ ಅತ್ಯಂತ ಘನತೆಯಲ್ಲಿತ್ತೆಂಬುದನ್ನು ಕಂಡು ಹಿಡಿದೆ. ಎಲ್ಲ ಪ್ರಾಂತಗಳನ್ನೂ ಮೀರಿಸುವಷ್ಟು ನಮ್ಮ ವೈಭವವಿತ್ತೆಂಬುದನ್ನು ಕನ್ನಡಿಗರ ಮುಂದಿಟ್ಟೆ. ಇಷ್ಟು ಕೆಲಸವಾಗಲಿಕ್ಕೆ ೧೨ ವರ್ಷಗಳು ಹಿಡಿದವು. ನನ್ನ ಕರ್ನಾಟಕ ಗತವೈಭವ ಪುಸ್ತಕವು, ನನ್ನ ಈ ೧೨ ವರ್ಷಗಳ ತಪಶ್ಚರ್ಯದ ಫಲ.

**ನನ್ನ ಐತಿಹಾಸಿಕ ಪ್ರವಾಸಗಳು** :— ಇವುಗಳಿಗೆ ನನ್ನ ಜೀವನದಲ್ಲಿ ಅತ್ಯಂತ ಮಹತ್ವದ ಸ್ಥಾನವಿದೆ. ನಾನು ಮಾಡಿದಷ್ಟು ಪ್ರವಾಸವನ್ನು ಯಾವ ಖಾಸಗೀ ವ್ಯಕ್ತಿಯೂ ಮಾಡಿಲ್ಲವೆಂದು ಹೆಮ್ಮೆಯಿಂದ ಹೇಳುವೆ. ನನ್ನ ಸ್ಫೂರ್ತಿ ಬೆಳೆಯುತ್ತ ಹೋದುದು ಈ ಪ್ರವಾಸಗಳ ಮೂಲಕವೇ. ಆ ಸ್ಥಳಗಳು ಕ್ಷೇತ್ರಗಳೆಂಬ ಭಕ್ತಿಭಾವನೆಯಿಂದ ಅವನ್ನು ಕೈಕೊಂಡೆ. ೧೯೦೭ರಲ್ಲಿ ಶ್ರೀ.ವಿದ್ಯಾರಣ್ಯ ಚರಿತ್ರೆಯನ್ನು ಬರೆದು ಕನ್ನಡಿಗರ ಮುಂದಿಟ್ಟದ್ದೇ ನಾನು ಮಾಡಿದ ಮೊದಲಿನ ಮಹತ್ವದ ಕೆಲಸ. ಅದರ ಸಾಮಗ್ರಿ ಸಿದ್ಧವಿತ್ತು. ನನಗೆ ಆ ಬಗ್ಗೆ ಶ್ರಮಬೀಳಲಿಲ್ಲ. ಮುಂಚೆ, ನಮಗೆ ರಾಮದಾಸ, ಶಿವಾಜಿ ಇವರದಷ್ಟೇ ಗೊತ್ತು. ಅವರನ್ನು ಎಲ್ಲ ವಿಧದಲ್ಲಿಯೂ ಮೀರಿಸುವ ಮಹಾಪುರುಷರು ಅನೇಕರು ನಮ್ಮಲ್ಲಿರುವರೆಂಬ ಕಲ್ಪನೆ ಕೂಡ ಕನ್ನಡಿಗರಿಗಿರಲಿಲ್ಲ. ನನ್ನ ವಿದ್ಯಾರಣ್ಯಚರಿತ್ರೆಯು ಚಿಕ್ಕ ಪುಸ್ತಕ. ಆದರೆ ಅತ್ಯಂತ ಸ್ಫೂರ್ತಿಯನ್ನು ಹುಟ್ಟಿಸಿದ ಪುಸ್ತಕ. ಅದರ ಪ್ರತಿಗಳೆಲ್ಲವೂ ತೀರಿಹೋಗಿವೆ. ಈಗ ಸಿಗುವದಿಲ್ಲ. ಕೆಲವು ವರ್ಷಗಳ ಮೇಲೆ ಅಂದರೆ ೧೯೧೬ರಲ್ಲಿ ವೆಂಕಟೇಶ ಹಯಗ್ರೀವ ಮಣ್ಣೂರಕರ ಎಂಬವರು ಅದರ ಮರಾಠಿ ಭಾಷಾಂತರವನ್ನು ಮುದ್ರಿಸಿದ್ದಾರೆ. ಅದರ ಪ್ರತಿಗಳು ಕೆಲವು ನನ್ನ ಹತ್ತರ ಇನ್ನೂ ಇರುವವು.

ಮರಾಠೀ ಮೋಹವನ್ನು ಕಳಚುವ ಈ ನನ್ನ ಕೆಲಸವನ್ನು ನನ್ನ ಹತ್ತಿರವೇ ಇದ್ದ ಶ್ರೀ. ರಾಜಪುರೋಹಿತರು ಮುಂದುವರಿಸಿದರು. ಅವರು ಟಿಳಕರ ಕೇಸರಿ ಪತ್ರದಲ್ಲಿ ಮರಾಠಿಯಲ್ಲಿ ಲೇಖಗಳನ್ನು ಕೊಟ್ಟು, ಜ್ಞಾನೇಶ್ವರಿಯಲ್ಲಿ ಕನ್ನಡ ಪದಗಳು ಇದ್ದುದನ್ನು ಸಿದ್ಧಪಡಿಸಿದರು. ಶ್ರೀ. ರಾಜಪುರೋಹಿತರ ಚರಿತ್ರೆಯನ್ನು ಮುದ್ರಿಸುವದು ಅವಶ್ಯವಿದೆ. ಶ್ರೀ. ಐರಣಿ ಎಂಬವರು ಅವರ ಪರಿಚಯವನ್ನು ಹಿಂದಕ್ಕೆ ಸಂಯುಕ್ತ ಕರ್ನಾಟಕದಲ್ಲಿ ಕೊಟ್ಟಿದ್ದಾರೆ.

ಇತ್ತ ನಾನು ನಮ್ಮ ವೈಭವದ ಮೂಲ ಉಗಮವನ್ನು ಹುಡುಕುವದಕ್ಕೆ ಹತ್ತಿದೆ. ೧೯೧೦ರಿಂದ ೧೯೧೬ನೆಯ ಇಸವಿಯ ವರೆಗೆ ನಾನು ಅಣ್ಣೀಗೇರಿ, ಲಕ್ಕುಂಡಿ, ಗುಡಿಗೇರಿ, ಲಕ್ಷ್ಮೇಶ್ವರ, ಹಳೇಬೀಡು, ಬೇಲೂರು, ಮುಂಬಯಿ ಹತ್ತರದ ಕಾರ್ಲೆ, ಕಾನ್ಹೇರಿ, ಬಂಕಾಪುರ, ಬಾದಾಮಿ, ಪಟ್ಟದಕಲ್ಲು, ಐಹೊಳೆ, ಉತ್ತರದಲ್ಲಿ ವೇರೂಳ ಮುಂತಾದ ಊರುಗಳಿಗೆ ಹೋಗಿ ಬಂದುದರ ಉಲ್ಲೇಖವು, ನನ್ನ ಕರ್ನಾಟಕ ಗತವೈಭವ ಪುಸ್ತಕದ ಪ್ರಸ್ತಾವನೆಯಲ್ಲಿ ಬಂದೇ ಇದೆ. ಅನಂತರ ಶ್ರವಣಬೆಳಗುಳ, ಹಾಸನ, ಕಾರ್ಕಳ, ಚಿತ್ರದುರ್ಗ, ಮೂಡಬಿದರಿ, ಗೋವೆ, ಬನವಾಸಿ, ತುಮಕೂರು, ಮಳಖೇಡ, ಶೇಡಂ, ಎರಗೊಳ್ಳ ನಾಗಾವಿ, ಕೊಲ್ಹಾಪುರ, ಉಟಕಮುಂಡ ಹೀಗೆ ೫೦-೬೦ ಊರುಗಳಿಗೆ ಪ್ರವಾಸಕ್ಕೆ ಹೋಗಿ ಬಂದಿರುವೆ. ಶಾರೀರಿಕ ಶ್ರಮವು ಬಹಳಾಯಿತು. ಕೆಲವು ಊರುಗಳಿಗೆ ಮೂರು ನಾಲ್ಕು ಸಾರೆ ಹೋಗಿ ಬಂದೆ. ಬೇಲೂರು ಹಳೇಬೀಡುಗಳಿಗೆ ಬಾಣಾವರದಿಂದ ಬಂಡಿಯ ಮೇಲೆ ಹೋದೆ. ಆಗ ಮೋಟರ ಇದ್ದಿಲ್ಲ. ಈ ಎಲ್ಲ ಪ್ರವಾಸಗಳಿಗಾಗಿ ಒಟ್ಟಿಗೆ ಕನಿಷ್ಟ ೧೫೦೦-೨೦೦೦ ರೂ. ಖರ್ಚು ಮಾಡಿರಬಹುದು. ಆದರೆ ನಿಜವಾಗಿ ಹೇಳಬೇಕಾದರೆ ಆ ಖರ್ಚಿನ ಹತ್ತು ಪಟ್ಟಿನಷ್ಟು ಆ ಕ್ಷೇತ್ರಗಳಲ್ಲಿ ನನ್ನ ಮನೋವಿಕಾಸವಾಗಿದೆ. ಇಲ್ಲಿ ಕೆಲವೇ ಬೋಧಪ್ರದವಾದ ಸ್ಮೃತಿಗಳನ್ನು ಕೊಡುವೆ.

**ತಿರುಪತಿಯ ಪ್ರವಾಸ ಮತ್ತು ಕೃಷ್ಣದೇವರಾಯನ ಮೂರ್ತಿಯ ಶೋಧ :**— ೧೯೧೦ನೆಯ ಇಸವಿಯ ಕೊನೆಗೆ ನಾನು ತಿರುಪತಿಯ ಯಾತ್ರೆಗೆ ಹೋಗಿದ್ದೆ. ಅಲ್ಲಿ ನಮ್ಮ ಇತಿಹಾಸವು ಸಿಗುವದೆಂದು ನನ್ನ ಕನಸು ಮನಸಿನಲ್ಲಿರಲಿಲ್ಲ. ಆ ಗುಡಿಯಲ್ಲಿ ಅಡ್ಡಾಡುವಾಗ ಒಂದು ಗಂಡು ಶಿಲಾಮೂರ್ತಿ ಹಾಗೂ ಎಡಬಲಕ್ಕೆ ಎರಡು ಹೆಣ್ಣು ಮೂರ್ತಿಗಳೂ ಕಣ್ಣಿಗೆ ಬಿದ್ದವು. ಸಹಜವಾಗಿ ನೋಡುತ್ತೇನೆ, ಆ ಮೂರ್ತಿಗಳ ಭುಜಗಳ ಮೇಲೆ ಕನ್ನಡ ಅಕ್ಷರ

( ತೆಲುಗು ಅಲ್ಲ ) ! ಕೃಷ್ಣದೇವರಾಯ ಮತ್ತು ಚನ್ನಂಬಾ ತಿರುಮಲಾಂಬಾ ಇವರ ಮೂರ್ತಿಗಳು ಅವು. ಆ ಹೆಸರುಗಳು ಕನ್ನಡದಲ್ಲಿ ! ಆಗ ನನಗಾದ ಆನಂದವನ್ನು ವರ್ಣಿಸುವದು ಅಸಾಧ್ಯ ! ಐತಿಹಾಸಿಕ ಕ್ಷೇತ್ರಗಳ ಹುಚ್ಚು ಆಗ ನನಗೆ ಹಿಡಿಯಿತು.

**ಶ್ರೀವಿದ್ಯಾರಣ್ಯರ ಬಣ್ಣದ ಚಿತ್ರದ ಶೋಧ**:— ನಾನು ಹಂಪೆಗೆ ೧೦-೧೨ ಸಾರೆ ಹೋಗಿದ್ದೇನೆ. ಕೆಲವು ಸಲ ಸಂಶೋಧನಕ್ಕಾಗಿ, ಕೆಲವು ಸಲ ಮಿಕ್ಕವರನ್ನು ಕರಕೊಂಡು ತೋರಿಸುವದಕ್ಕಾಗಿ. ಮುಂಚೆ ನಾನು ಹೋದಾಗ ಅಲ್ಲೆಲ್ಲಾ ಮುಳ್ಳುಕಂಟೆಗಳು. ಈಗ ಕಂಡುಬರುವ ಅನೇಕ ಗುಡಿಗಳೂ ಬೀದಿಗಳೂ ಹೂತುಹೋಗಿದ್ದವು. ಲಾರ್ಡ ಕರ್ಝನನು ಆ ಪಟ್ಟಣವನ್ನು ಅಗೆದು ತೆಗೆಯಿಸುವ ಪುಣ್ಯ ಕಟ್ಟಿಕೊಂಡನು. ವಿದ್ಯಾರಣ್ಯರ ಮೂರ್ತಿ ಸಿಗ ಬಹುದೋ ಏನೋ ಎಂದು ಬಹಳ ಹುಡುಕಿದೆ. ಮೊದಲಿನ ಎರಡು ಮೂರು ಪ್ರವಾಸಗಳಲ್ಲಿ ಸಿಗಲಿಲ್ಲ. ವಿರೂಪಾಕ್ಷ ದೇವರ ಗುಡಿಯ ಹತ್ತಿರಿರುವ ವಿದ್ಯಾ ರಣ್ಯರ ಗುಡಿಯಲ್ಲಿ ಇರುವದು ಪುರಾತನದ್ದು ಅಲ್ಲವೆಂದು ಕೇಳಿದೆ. ಆನೆಯು ಸಲ ೧೯೧೧ರಲ್ಲಿ ಪ್ರವಾಸ ಮಾಡಿದಾಗ ಅದೇ ವಿರೂಪಾಕ್ಷ ದೇವಾಲಯದಲ್ಲಿಯ ಮೇಲ್ಗಡೆಗೆ ಒಂದು ಭವ್ಯವಾದ ಚಿತ್ರಪಟ ಹುಡುಕಿದೆ. ಪಲ್ಲಕ್ಕಿಯಲ್ಲಿ ಒಬ್ಬ ಸ್ವಾಮಿಗಳು, ಹಿಂದೆ ಅನೇಕ ಅರಸರೂ ಕುದುರೆ ಕಾಲಾಳು ಮುಂತಾದವರ ಪಟಾಲಂಬ. ಅದು ಬಣ್ಣದ ಚಿತ್ರ. ಮುಂದೆ ವ್ಹಿಕ್ಟೋರಿಯಾ ಹಾಯಸ್ಕೂಲಿನ ಹುಡುಗರೆಲ್ಲರನ್ನು ಕರೆದುಕೊಂಡು ಹೋಗಿ, ಆ ಚಿತ್ರದ ಫೋಟೋ ತಕ್ಕೊ ಳ್ಳಲು ಪ್ರಯತ್ನಿಸಿರುವೆ. ಅದು ಅತಿಶಯ ಎತ್ತರದ ಮೇಲೆ ಇದ್ದುದರಿಂದ ಬಣ್ಣದ ಮೇಲೆ ಧೂಳು ಕೂತು ಹೊಲಸಾದ್ದರಿಂದ ಚಿತ್ರ ಚೆನ್ನಾಗಿ ಹೊರಡಲಿಲ್ಲ. ಆದು ವಿದ್ಯಾರಣ್ಯರ ಮತ್ತು ಹುಕ್ಕ-ಬುಕ್ಕರದು ಇರಬೇಕೆಂದು ನನ್ನ ತರ್ಕ.

**ಅಣ್ಣೀಗೇರಿ, ಲಕ್ಕುಂಡಿಗಳ ಸ್ಮೃತಿ**:— ೨೬—೮—೧೯೧೨ನೆಯ ದಿವಸ ಮುಂಬಯಿಯಿಂದ ಕಾವಸಜಿ ಉದಲಜಿ ಕೊತವಾಲ ಎಂಬೊಬ್ಬ ಪೋಸ್ಟ ಮಾಸ್ತರರ ಪತ್ರ ಬಂದಿತು. ತಮ್ಮಲ್ಲಿ ಕನ್ನಡ ಅಕ್ಷರಗಳುಳ್ಳ ಅನೇಕ ಹಳೆಯ ನಾಣ್ಯಗಳ ಸಂಗ್ರಹವಿದೆಯೆಂದೂ ಅವನ್ನು ಬೇಕಾದರೆ ಕೊಡುವೆ ವೆಂದೂ ತಿಳಿಸಿದ್ದರು. ಆದರೆ ಅವನ್ನು ತರಿಸಿಕೊಂಡು ನನ್ನಲ್ಲಿ ಇಟ್ಟು ಕೊಳ್ಳುವ ಶಕ್ತಿಯು ಇದ್ದಿಲ್ಲ. ಮುಂದೆ ತರಿಸಿಕೊಳ್ಳುವೆನೆಂದು ಅವರಿಗೆ

ನಾನು ಉತ್ತರ ಕೊಟ್ಟೆ. ಧಾರವಾಡದ ಹತ್ತಿರ ಮುಗದದಲ್ಲಿ ಕೆಲವು ಬಂಗಾರದ ನಾಣ್ಯಗಳು ಸಿಕ್ಕಿದ್ದವು. ಆ ಬಗ್ಗೆ ಕೆಲವರ ಮೇಲೆ ಟ್ರೇಝರ ಟ್ರೋವ್ಹ ಆ್ಯಕ್ಟಿನ ಪ್ರಕಾರ ಖಟ್ಲೆ ನಡೆಯಿತು. ಶ್ರೀ. ಕರಿಗುದರಿ ನಾರಾಯಣರಾಯರು ಸರಕಾರೀ ವಕೀಲರು. ಅವರು ಆ ನಾಣ್ಯ ನನಗೆ ತೋರಿಸಿದರು. ರ್ಯಾಪ್ಸನ್ನರ ನಾಣ್ಯದ ಗ್ರಂಥ ಕೊಂಡು ಓದಿ, ಅವು ಗಂಗರ ನಾಣ್ಯಗಳೆಂದು ಹೇಳಿದೆ. ಮುಂದೆ ಅವುಗಳ ಅವಸ್ಥೆ ಏನಾಯಿತೋ ಗೊತ್ತಿಲ್ಲ. ಈ ಸುಮಾರಕ್ಕೆ ನಾನು ಧಾರವಾಡ ಜಿಲ್ಹೆಯಲ್ಲೆಲ್ಲ ತಿರುಗಾಡಿ ಶಿಲಾಲಿಪಿ ಮುಂತಾದವುಗಳ ಸರ್ವೆ ಮಾಡಬೇಕೆಂದು ಗೊತ್ತು ಮಾಡಿ, ಅಣ್ಣೀಗೇರಿ, ಲಕ್ಕುಂಡಿ ಮುಳಗುಂದ ಮುಂತಾದ ಊರುಗಳಿಗೆ ಹೋಗಿ ಬಂದೆ. ಅಣ್ಣೀಗೇರಿಯಲ್ಲಿ ಕಲ್ಲಿನ ಸುಂದರವಾದ ಒಂದು ಆನೆ ಸಿಕ್ಕಿತು. ಆದರೆ ಆ ಆನೆಯನ್ನು ಕಟ್ಟುವರಾರು ! ಕೈಬಿಟ್ಟೆ. ಧಾರವಾಡ ಕಲೆಕ್ಟರರಿಗೆ ಪತ್ರ ಬರೆದೆ. ಅವರು ಅದನ್ನು ಹೊತ್ತುಕೊಂಡು ಪರದೇಶಕ್ಕೆ ಏನೋ ಕಳಿಸಿದರೆಂದು ಮುಂದೆ ಕೇಳಿದೆ. ಲಕ್ಕುಂಡಿಯಲ್ಲಿ ಒಂದು ನಾಗರ ಹೆಡೆಯ ರತ್ನದ ಉಂಗುರ ಸಿಕ್ಕಿದ್ದನ್ನು ಒಬ್ಬರು ನನಗೆ ಹೇಳಿದರು. ಆದರೆ ಹೀಗೆ ಸಿಕ್ಕಿದ್ದನ್ನು ಇಟ್ಟುಕೊಳ್ಳಬಾರದೆಂದು ಅದನ್ನು ಶ್ರೀ ಶಂಕರಾಚಾರ್ಯರ ಮಠಕ್ಕೆ ಕೊಟ್ಟುಬಿಟ್ಟದ್ದಾಗಿ ಹೇಳಿದರು.

**ಕನ್ನಡಿಗರ ಭ್ರಮನಿರಸನ ಸ್ಮೃತಿ:**—೧೯೧೩ರಲ್ಲಿ ನಾನೂ ನರಗುಂದ ರಾಮರಾಯರೂ ಕನ್ನಡಿಗರ ಭ್ರಮನಿರಸನ ಎಂಬ ಚಿಕ್ಕ ನಾಟಕ ಬರೆದೆವು. ಅದರ ಉದ್ದೇಶ ಕನ್ನಡದ ಬಗ್ಗೆ ಅಭಿಮಾನ ಹುಟ್ಟಿಸುವದಾಗಿತ್ತು. ಕಾರ್ಲೆ, ಕಾನ್ಹೇರಿ, ಅಜಂತಾ, ವೇರೂಳ ಮುಂತಾದ, ಹಿಂದುಸ್ತಾನದಲ್ಲಿಯೇ ಅತ್ಯಂತ ಪ್ರಸಿದ್ಧವಾದ ದೇವಾಲಯಗಳನ್ನು ಕಟ್ಟಿಸಿದವರೂ ನಮ್ಮ ಕನ್ನಡಿಗರೇ ಎಂಬುದನ್ನು ಹೇಳುವದೇ ಆ ಹೊತ್ತಿಗೆಯ ಉದ್ದೇಶ. ಇದರ ಬಗ್ಗೆಯೂ ಹಿಂದಿನ ಪ್ರಕರಣದಲ್ಲಿ ಬಂದೇ ಇದೆ.

**ಟ್ರೇನಿಂಗ್ ಕಾಲೇಜ ವಿದ್ಯಾರ್ಥಿಗಳಿಗೆ ಶಿಲಾಲಿಪಿಗಳ ಶಿಕ್ಷಣ :**– ೧೯೧೩ರಲ್ಲಿ ಶ್ರೀ. ವಿನಾಯಕರಾವ ಜೋಶಿ ಇವರು ಆ ಕಾಲೇಜದ ಪ್ರಿನ್ಸಿಪಾಲರು. ಅವರನ್ನು ಕೇಳಿಕೊಂಡು, ಟ್ರೇನಿಂಗ್ ಕಾಲೇಜದ ವಿದ್ಯಾರ್ಥಿಗಳನ್ನೆಲ್ಲ ನರೇಂದ್ರಕ್ಕೆ ಕರೆದುಕೊಂಡು ಹೋಗಿ, ಶಿಲಾಲಿಪಿ ಪ್ರತಿತಕ್ಕೊಳ್ಳುವ ಕಲೆ ಕಲಿಸಿದೆ. ಏಕೆಂದರೆ ಇಷ್ಟರಲ್ಲಿ ಇತಿಹಾಸ ಸಂಶೋಧನದ ಬಗ್ಗೆ ಕೆಲಮಟ್ಟಿಗೆ ನನ್ನದೂ

ಭ್ರಮನಿರಸನವಾಗಿತ್ತು! ನಮ್ಮ ಇತಿಹಾಸವು ಶಿಲಾಲಿಪಿ, ತಾಮ್ರಪಟಗಳಲ್ಲಿರುವ ಮೂಲಕ ನನ್ನಂಥ ಪಾಮರನ ಶಕ್ತಿಗೆ ಅದು ಮೀರಿದ್ದೆಂಬ ಅನುಭವವು ನನಗೆ ಬರಹತ್ತಿತ್ತು! ಒಬ್ಬನೇ ಹಣ ವೆಚ್ಚ ಮಾಡುವದೆಷ್ಟು? ಆಗ ನನಗೆ ಒಂದು ಯುಕ್ತಿ ತೋಚಿತು. ಲಿಪಿಗಳೆಲ್ಲವೂ ಕನ್ನಡದಲ್ಲಿ. ಅಂದ ಬಳಿಕ ಕನ್ನಡ ಶಿಕ್ಷಕರಿಗೆ ಲಿಪಿಮುದ್ರಣ ಕಲೆ ಕಲಿಸಿಬಿಟ್ಟರೆ, ಹೇಗೂ ಅವರು ಹಳ್ಳಿಗಳಲ್ಲಿ ವಾಸ ಮಾಡುವವರು, ಅವರು ಅಲ್ಲಿದ್ದ ನಾಲ್ಕೆಂಟು ಶಿಲಾಲಿಪಿಗಳ ಮುದ್ರಣವನ್ನು ಅನಾಯಾಸವಾಗಿ ತಕ್ಕೊಳ್ಳಬಹುದಲ್ಲವೇ ಎಂದೆನಿಸಿತು. ಕಲಿಸಿದೆ. ಆದರೆ ಮುಂದೆ ಟ್ರೇನಿಂಗ್ ಕಾಲೇಜದ ಆ ವರ್ಗವನ್ನೇ ಸರಕಾರದವರು ನಿಲ್ಲಿಸಿಬಿಟ್ಟರು. ಆ ಕೆಲಸ ಅಲ್ಲಿಗೇ ಉಳಿಯಿತು. ಇಲ್ಲಿ ನಾನು ಈಗಿನ ಕನ್ನಡಿಗರಿಗೆ ಪುನಃ ಒಂದು ಮಾತಿನ ನೆನಪು ಕೊಡುವೆ. ಭಾರತ ಸರಕಾರದವರು ಇಡೀ ಭಾರತದ ಇತಿಹಾಸವನ್ನು ಬರೆಸುವದಕ್ಕೆ ಸಿದ್ಧರಾಗಿರುವರು. ಕಮಿಟಿ ನೇಮಿಸಿರುವರು. ಆದರೆ ಪ್ರತಿಯೊಂದು ಪ್ರಾಂತದ ಸರ್ವೆಯಾಗಿ ಸಾಮಗ್ರಿಯು ಸಿದ್ಧವಾದ ಹೊರತು ಆ ಇತಿಹಾಸವು ಪೂರ್ಣವಾಗುವದೆಂತು! ನಮ್ಮ ಸುದೈವದಿಂದ ಮೈಸೂರ ಸರಕಾರದವರು ಅಲ್ಲಿಯ ಶಿಲಾಲಿಪಿಗಳ ಕೆಲಸವನ್ನು ಮುಗಿಸಿಬಿಟ್ಟಿದ್ದಾರೆ. ಆದರೆ ಹೈದರಾಬಾದ ಉತ್ತರ ಕರ್ನಾಟಕ ಮುಂತಾದವುಗಳಲ್ಲಿಯ ಶಿಲಾಲಿಪಿಗಳ ಅವಸ್ಥೆ ಏನು? ಎರಡು ವರ್ಷಗಳ ಹಿಂದೆ ಮಂತ್ರಿಗಳಾದ ಲಾಲಬಹಾದ್ದೂರ ಶಾಸ್ತ್ರಿಗಳು ಧಾರವಾಡಕ್ಕೆ ಬಂದಾಗ ಅವರ ಸಭೆಗೆ ನಾನು ಅಧ್ಯಕ್ಷನಾಗಿದ್ದೆ; ಆಗ ನಾನು ನನ್ನ ಭಾಷಣದಲ್ಲಿ ಈ ಸಂಗತಿಯನ್ನು ಅವರ ಲಕ್ಷ್ಯಕ್ಕೆ ಎಳೆದಿರುವೆ. ಕರ್ನಾಟಕದಲ್ಲಿಯ ಹತ್ತೆಂಟು ಸಾವಿರ ಅಚ್ಚಾಗದೆ ಉಳಿದಿರುವ ಶಿಲಾಲಿಪಿಗಳು ಅಚ್ಚಾಗದೆ ಕರ್ನಾಟಕ ಇತಿಹಾಸವೂ ಪೂರ್ಣವಾಗಲಾರದು. ರಾಜ್ಯಪಾಲ ಮುನಸಿಯವರು ಭಾರತ ಇತಿಹಾಸವನ್ನು ಖಂಡಖಂಡವಾಗಿ ಬರೆಯಿಸಲಿಕ್ಕೆ ಹೊರಟಿರುವದು ಬಹಳ ಸ್ತುತ್ಯ ಕೆಲಸ. ಆದರೆ ಕನ್ನಡಿಗರೇ ಎಚ್ಚರ! ಕರ್ನಾಟಕ ಇತಿಹಾಸದ ಒಂದು ಸಾವಿರಾರು ವರ್ಷದ ಇತಿಹಾಸವನ್ನೇ ಅವರು ಹಾರಿಸಿಬಿಡುವಂತೆ ತೋರುತ್ತದೆ. ಹಿಂದಕ್ಕೆ ಅವರು ಐತಿಹಾಸಿಕ ನಾಟಕದಲ್ಲಿ ಗುಜರಾಥದ ಒಣ ಅಭಿಮಾನದಿಂದ ಕರ್ನಾಟಕಕ್ಕೆ ಅಪಮಾನವಾಗುವಂಥ ಸಂಗತಿಗಳನ್ನು ಸೇರಿಸಿದ್ದರಂತೆ! ಆಗ ಕನ್ನಡಿಗರು ಅದನ್ನು ಸರಕಾರದ ಲಕ್ಷಕ್ಕೆ ತಂದುಕೊಟ್ಟು ಆ ಭಾಗವನ್ನು ತೆಗೆಯಿಸಲಿಕ್ಕೆ ಹಚ್ಚಿದ್ದರು.

ಶ್ರೀ. ಮುನಸಿಯವರು ಗುಜರಾಥದ ಕಟ್ಟಭಿಮಾನಿಗಳು. ಯಾರಿಗೂ ಪಕ್ಷ ಪಾತವಾಗದಂತೆ ಭಾರತ ಇತಿಹಾಸವನ್ನು ಬರೆಯಿಸುವ ಭಾರವು ಸರಕಾರದ ಮೇಲಿರುತ್ತದೆ.

ಹಿಂದಿನ ಹೈದರಾಬಾದ ಸಂಸ್ಥಾನದಲ್ಲಿಯ ಶಿಲಾಲಿಪಿಗಳು ನಮ್ಮ ಇತಿಹಾಸಕ್ಕೆ ಅತ್ಯಂತ ಮಹತ್ವವಾದವುಗಳು. ಏಕೆಂದರೆ ರಾಷ್ಟ್ರಕೂಟ ಮತ್ತು ಚಾಲುಕ್ಯರ ರಾಜಧಾನಿಗಳಾದ ಮಳಖೇಡ-ಕಲ್ಯಾಣಗಳು ಅಲ್ಲಿಯೇ ಇರುವವು. ಅಲ್ಲಿಯ ಶಿಲಾಲಿಪಿಗಳನ್ನು ತಕ್ಕೊಳ್ಳುವ ಪ್ರಯತ್ನ ಮಾಡಿದೆವು. ಇಲ್ಲಿಯ ಕರ್ನಾಟಕ ಇತಿಹಾಸ ಮಂಡಳಕ್ಕೆ ನಾನು ಅಧ್ಯಕ್ಷನು. ಶ್ರೀ. ಡಿ. ಪಿ. ಕರಮರಕರ ( ಈಗಿನ ಕೇಂದ್ರ ವಾಣಿಜ್ಯ ಮಂತ್ರಿ ) ಇವರು ಕಾರ್ಯದರ್ಶಿಗಳು. ನಾನು ಸ್ವತಃ ಮಳಖೇಡದ ಹತ್ತರಿರುವ ಸಾಗಾವಿ, ಶೇಡಂ ( = ಖೇಡ ಮಳಖೇಡದ ಭಾಗವಾಗಿರಬೇಕು. ) ಅಲ್ಲಿಗೆ ನಾನು ಹೋಗಿ ಶಿಲಾಲಿಪಿಗಳನ್ನು ನೋಡಿ ಬಂದಿದ್ದೆ. ಅವನ್ನು ತಕ್ಕೊಳ್ಳಲಿಕ್ಕೆ ಪರವಾನಿಗೆ ಕೊಡಿರೆಂದು ಸರಕಾರಕ್ಕೆ ಅರ್ಜಿ ಮಾಡಿಕೊಂಡೆವು. ವರ್ಷೆರಡು ವರ್ಷಗಳ ಮೇಲೆ " ನಾವೇ ಅವುಗಳನ್ನು ತೆಗೆಯಿಸಿಕೊಳ್ಳುತ್ತೇವೆ, ನೀವೇನೂ ಬರುವ ಕಾರಣವಿಲ್ಲ." ಎಂದು ನಿಕ್ಷುಣ್ಣ ಉತ್ತರ ಬಂತು. ನಿರ್ವಾಹವಿಲ್ಲದೆ ಇಲ್ಲಿಯ ವರೆಗೆ ಸ್ವಸ್ಥ ಕುಳಿತುಕೊಂಡಿದ್ದೇವೆ. ಈ ಹೊಸ ಅಖಂಡ ಕರ್ನಾಟಕ ರಾಜ್ಯವಾದರೂ ಎಲ್ಲ ಶಿಲಾಲಿಪಿ ಮುಂತಾದವುಗಳನ್ನು ಅಚ್ಚುಮಾಡಿಸುವ ವ್ಯವಸ್ಥೆ ಮಾಡುವದೋ? ಇದು ಅವರು ಮಾಡತಕ್ಕ ಪ್ರಥಮ ಕರ್ತವ್ಯ. ಇಲ್ಲಿ ಮತ್ತೂ ಒಂದು ಮಾತನ್ನು ಹೇಳಬಯಸುತ್ತೇನೆ. ಅದೆಂದರೆ ಕರ್ನಾಟಕತ್ವವು ರಾಷ್ಟ್ರೀಯತ್ವಕ್ಕಿಂತ ಸಂಕುಚಿತವಾದ ಕಲ್ಪನೆಯೆಂದೆನ್ನುವ ಮೂರ್ಖ ರಾಷ್ಟ್ರಾಭಿಮಾನಿಗಳು ಇದರಿಂದ ಬುದ್ಧಿಗಲಿಯುವರೋ ? ನಿಜವಾಗಿ, ಕರ್ನಾಟಕ ಸಂಸ್ಕೃತಿಯು ಭಾರತೀಯ ಸಂಸ್ಕೃತಿಗೆ ಪೋಷಕವಾಗುವದಲ್ಲದೆ ಅದಕ್ಕೆ ಯಾವ ರೀತಿಯಿಂದಲೂ ವೈಗುಣ್ಯವನ್ನು ತರಲಾರದು.

**ಸಾತಾರಾ ಪಟ್ಟಣವೂ ನಮ್ಮ ಇತಿಹಾಸವೂ :—** ೧೯೧೪ರಲ್ಲಿ ಸಾತಾರೆಯಲ್ಲಿ ಕೂಡಿದ ರಾಜಕೀಯ ಪರಿಷತ್ತಿಗೆ ಹೋಗಿದ್ದೆ. ೨೯-೪-೧೯೧೪ನೆಯ ದಿನ ನಾನೂ ಶ್ರೀ. ಫನಸಳಕರ ವಕೀಲರೂ ಅಲ್ಲಿಯ ಅಜಂತಾರಾ ಕಿಲ್ಲೆಯನ್ನು ನೋಡಲಿಕ್ಕೆ ಹೋದೆವು. ಮಾತು ಮಾತಿನಲ್ಲಿ ಆ ಕೋಟೆ

ಮೂಲತಃ ಚಾಲುಕ್ಯರಿಂದ ಕಟ್ಟಿಸಲ್ಪಟ್ಟಿತೆಂದು ಅವರು ಅಂದರು. ಕೂಡಲೆ ನನ್ನ ಕಿವಿ ನಿಗುರಿದವು. ಅಲ್ಲಿ ಶಿಲಾಲಿಪಿ ಸಿಗುವದೇನೋ ಎಂದು ಮುಳ್ಳು ಕಂಟಿಗಳಲ್ಲಿ ಹುಡುಕಿದೆ. ಸಿಗಲಿಲ್ಲ. ಮರುದಿವಸ ಮತ್ತೊಂದು ಕಡೆಗೆ ಮಾವಿನ ತೋಪಿನಲ್ಲಿ ನಮಗೆ ವಿಶೇಷ ಔತಣ ಮಾಡಿಸಲ್ಪಟ್ಟಿತ್ತು. ಶ್ರೀ. ದತ್ತಾತ್ರಯ ಬೆಳವಿ ಬೆಳಗಾವ, ಶ್ರೀ. ಶ್ರೀನಿವಾಸರಾವ ಕೌಜಲಗಿ ವಿಜಾಪುರ, ಮತ್ತು ಪುಣೆಯ ಶ್ರೀ. ನರಸಿಂಹ ಚಿಂತಾಮಣ ಕೇಳಕರ ( ಲೋಕಮಾನ್ಯ ಟಿಳಕರ ಸಾಕ್ಷಾತ್ ಶಿಷ್ಯರೂ ಕೇಸರಿ ಎಂಬ ಅವರ ಪತ್ರಿಕೆಯ ಸಂಪಾದಕರೂ ) ಮುಂತಾದವರು ಆ ತೋಟಕ್ಕೆ ಹೋದೆವು. ದಾರಿಯಲ್ಲಿ ಯವತೇಶ್ವರ ( ಯುವತೇಶ್ವರ? ) ಎಂಬ ಗುಡಿ ಹತ್ತಿತು. ಅದನ್ನು ನೋಡಿದೊಡನೆ ಅದು ಚಾಲುಕ್ಯರು ಕಟ್ಟಿದ ಗುಡಿಯೆಂದು ನನಗೆ ಗೊತ್ತಾಯಿತು. ಶಿಲಾಲಿಪಿ ಹುಡುಕಿದೆ; ಸಿಗಲಿಲ್ಲ. ಊಟವಾದ ಬಳಿಕ ತೋಪಿನಲ್ಲಿ ಆಡ್ಡಾಗಿದ್ದೆವು. ಶ್ರೀ. ಮುದವೇಡೆ ವೆಂಕಟರಾಯರಿಗೆ ಅಲ್ಲಿಯೇ ಹತ್ತರ ಇರುವ ವೀರಗಲ್ಲೊಂದು ದೃಷ್ಟಿಗೆಬಿತ್ತು. ಅವರು ಆನಂದದಿಂದ ನನ್ನನ್ನು ಕೂಗಿ ಅದನ್ನು ತೋರಿಸಿದರು. ಮರಾಠಿಗರಿಗೆ ಈ ವೀರಗಲ್ಲುಗಳ ಕಲ್ಪನೆ ಇರಲಿಲ್ಲ. ಆದ ಕಾರಣ ಶ್ರೀ. ಕೇಳಕರರು ಈ ಒಡಕು ಕಲ್ಲುಗಳ ಬಗ್ಗೆ ಇಷ್ಟೇಕೆ ಆನಂದ? ಇಂಥವು ನಮ್ಮ ದೇಶದಲ್ಲಿ ನೂರಾರು ಬಿದ್ದಿವೆ ಎಂದರು. ಹೌದು, ಮರಾಠಿಗರಿಗೆ ಶಿವಾಜಿ ಮಹಾರಾಜನ ಮುಂಚಿನ ಇತಿಹಾಸವೇ ಇಲ್ಲ. ಏಕೆಂದರೆ, ಟಿಳಕರು ಕಂಡುಹಿಡಿದಂತೆ, ಮುಂಚೆ ಮಹಾರಾಷ್ಟ್ರದಲ್ಲಿ ಕೂಡ ಮರಾಠೀ ಪ್ರಾಬಲ್ಯ ಇನ್ನೂ ಬೇರೂರಿದ್ದಿಲ್ಲ. ಜ್ಞಾನೇಶ್ವರಿ ಕಾಲದಿಂದಿತ್ತ ಅಂದರೆ ಸುಮಾರು ೧೪ನೆಯ ಶತಮಾನದಿಂದಿತ್ತ ಮರಾಠಿ ಭಾಷೆ ಬೆಳೆದದ್ದು. ಇರಲಿ, ಇಲ್ಲಿ ನಾನು ನನ್ನ ಕರ್ನಾಟಕ ಬಂಧುಗಳಿಗೆ ಎಚ್ಚರಿಕೆ ಕೊಡುವದೇನೆಂದರೆ, ಕರ್ನಾಟಕಸ್ಥರೇ ನಿಮ್ಮ ಇತಿಹಾಸವು ಪೂರ್ಣವಾಗಬೇಕಾದರೆ, ಈಗಿನ ಮಹಾರಾಷ್ಟ್ರದಲ್ಲಿ ಅಲ್ಲಲ್ಲಿ ಬಿದ್ದಿರುವ ಶಿಲಾಲಿಪಿಗಳನ್ನೂ ಮಾಸತಿಕಲ್ಲುಗಳನ್ನೂ ವೀರಗಲ್ಲುಗಳನ್ನೂ ತಾಮ್ರಪಟಗಳನ್ನೂ ಗುಡಿಗಳನ್ನೂ ಕೂಡ ಸಂಶೋಧಿಸಬೇಡವೇ ? ಮುಂದೆ ನಾನು ಆದಕ್ಕಾಗಿ ವೇರೂಳದ ಕೈಲಾಸಗುಡಿ ಎಂಬ ಪ್ರಸಿದ್ಧ ದೇವಾಲಯವನ್ನು ನೋಡಲಿಕ್ಕೆ ಹೋಗಿ ಬಂದೆ. ಅಲ್ಲಿ ಕನ್ನಡ ಶಿಲಾಲಿಪಿ ಆದೆ. ಆದು ರಾಷ್ಟ್ರಕೂಟರ ಕೃಷ್ಣರಾಜನು ಕಟ್ಟಿಸಿದ ಗುಡಿ. ಇರಲಿ.

**ಮುಂಬಯಿಯ ಹತ್ತರಿರುವ ಕಾರ್ಲೆ ಕಾನ್ಹೇರಿ ಗುಹೆಗಳ ಸ್ಮೃತಿ:** ಪುಣೆಯ ಹತ್ತರಿರುವ ಕಾರ್ಲೆಯ ಅತ್ಯಂತ ಸುಂದರವೂ ಭವ್ಯವೂ ಆದ ಚೈತ್ಯಾಲಯವನ್ನು ನೋಡಲಿಕ್ಕೆ ಹೋಗಿದ್ದೆ. ಅವನ್ನು ಬನವಾಸಿಯ ಒಬ್ಬ ಶೆಟ್ಟಿಯು ಕಟ್ಟಿಸಿದನೆಂದು ಹುಡುಕಿ ತೆಗೆದೆ. ಪುಣೆಯ ಹತ್ತರ ಕೆಂದೂರು ಎಂಬ ಗ್ರಾಮವಿದೆ. ಅದು ಕನ್ನಡದ ಹೆಸರು. ಕೂಡಲೆ ಶ್ರೀಮಂತ ಮುಜುಮದಾರರ ಮುಖಾಂತರವಾಗಿ ಮಹಾರಾಷ್ಟ್ರದ ಎಲ್ಲಾ ಜಿಲ್ಹೆಗಳ ನಕಾಶಗಳನ್ನು ಕೊಂಡುಕೊಂಡು ಅವುಗಳ ಮೇಲಿಂದ ಮಹಾರಾಷ್ಟ್ರದಲ್ಲಿಯ ನೂರಾರು ಹಳ್ಳಿಗಳ ಹೆಸರುಗಳು ಕನ್ನಡ ಹೆಸರುಗಳೆಂಬುದನ್ನು ಕಂಡುಹಿಡಿದೆ. ಆದರೆ ಲೋಕಮಾನ್ಯ ಟಿಳಕರು ಇತಿಹಾಸ ಸಂಶೋಧಕರಲ್ಲದಿದ್ದರೂ ಮಹಾರಾಷ್ಟ್ರವು ಕನ್ನಡಮಯವಾಗಿತ್ತೆಂಬ ಮಾತನ್ನು ನನಗಿಂತ ಮುಂಚೆಯೇ ಸಹಜ ನೋಟದಿಂದ ಕೆಂಡುಹಿಡಿದದ್ದು ಆಶ್ಚರ್ಯವಲ್ಲವೇ ? ಇರಲಿ.

೮—೫—೧೯೧೫ನೆಯ ಇಸವಿ ದಿವಸ ನಾನೂ ಮುದವೇಡಕರ ವೆಂಕಟರಾಯರೂ ಮುಂಬಯಿ ಸಮೀಪಕ್ಕೆ ಬೋರವಳ್ಳಿ (ವಲಿ=ಹಳಿ) ಸ್ಟೇಶನ್ನಿನಿಂದ ನಾಲ್ಕೈದು ಮೈಲು ದೂರ ಕಾಡಿನಲ್ಲಿರುವ ಕಾನ್ಹೇರಿ ಗುಹೆಗಳನ್ನು ನೋಡಲಿಕ್ಕೆ ಕಾಲುನಡಿಗೆಯಿಂದ ಹೋದೆವು. ಅವು ಕರ್ನಾಟಕದ ಶಿಲಾಹಾರ ಅರಸರಿಂದ ಕೊರೆಯಿಸಲ್ಪಟ್ಟವುಗಳು.

**ಡೆಕ್ಕನ್ ಕಾಲೇಜಿನಲ್ಲಿ ನನ್ನ ಉಪನ್ಯಾಸ** :— ೧೯೧೫ರಲ್ಲಿ ಪುಣೆ ಡೆಕ್ಕನ್ ಕಾಲೇಜದಿಂದ ನನಗೆ ಉಪನ್ಯಾಸ ಕೊಡಲಿಕ್ಕೆ ಕರೆಬಂದಿತು. ನನ್ನ ಇತಿಹಾಸದ ಅಭ್ಯಾಸವು ಅರಗಚ್ಚಾಗಿತ್ತು. ಆದರೂ ಅದನ್ನೇ ಹೇಳಬೇಕೆಂದು ನಿರ್ಧರಿಸಿದೆ. ೩—೮—೧೯೧೫ನೆಯ ಇಸವಿ ದಿವಸ ಆ ಕಾಲೇಜಿನಲ್ಲಿ (Past Glory of Karnatak) ಕರ್ನಾಟಕದ ಗತವೈಭವ ಎಂಬ ವಿಷಯದ ಮೇಲೆ ಪ್ರೊ. ಠಾಕೂರ ಎಂಬವರ ಅಧ್ಯಕ್ಷತೆಯಲ್ಲಿ ಇಂಗ್ಲಿಷನಲ್ಲಿ ನನ್ನ ಉಪನ್ಯಾಸವಾಯಿತು. ನನ್ನ ಅಪೇಕ್ಷೆ ಮೀರಿ, ಅಲ್ಲಿಯ ಕನ್ನಡ ವಿದ್ಯಾರ್ಥಿಗಳಲ್ಲಿ ಸ್ಫೂರ್ತಿ ಹುಟ್ಟಿತು. ಆ ವಿದ್ಯಾರ್ಥಿಗಳು ಗ್ರಂಥಗಳನ್ನು ಕೊಳ್ಳುವದಕ್ಕೆಂದು ನನಗೆ ೧೦೦ ರೂ. ಗಳನ್ನು ಸಮರ್ಪಿಸಿದರು. ಈ ಸಂಧಿಯನ್ನು ಸಾಧಿಸಿ, ಮುಂದೆ ನಾನು ಆ ವರ್ಷದ ದಸರೆಯ ದಿವಸ ಇತಿಹಾಸ ಮಂಡಳ ಸ್ಥಾಪಿಸಿದೆ. ಫರ್ಗ್ಯೂಸನ್ ಕಾಲೇಜದಲ್ಲಿ ಕರ್ನಾಟಕ ಸಂಘವನ್ನು ಸ್ಥಾಪಿಸಿದ್ದು ಇದೇ

ಸುಮಾರಕ್ಕೆ. ಆ ಕರ್ನಾಟಕ ಸಂಘಕ್ಕೆ ಅದೇ ಆಗ ಅಲ್ಲಿ ಪ್ರೊಫೆಸರರಾಗಿ ಬಂದಿದ್ದ ಶ್ರೀ. ಆರ್. ಡಿ. ರಾನಡೆಯುವರನ್ನು ( ಈಗ ಅವರು ಪ್ರಸಿದ್ಧ ಅನುಭಾವಿಗಳು ) ಆ ಸಂಘಕ್ಕೆ ಅಧ್ಯಕ್ಷರಾಗಲು ನಾನು ಕೇಳಿಕೊಂಡೆ. ಜಮುಖಂಡಿಯವರಾದ ಅವರು ಕನ್ನಡದ ಅಭಿಮಾನದಿಂದ ಒಪ್ಪಿಕೊಂಡರು.

**ಕರ್ನಾಟಕ ಇತಿಹಾಸಮಂಡಳದ ಸ್ಥಾಪನೆ :**— ಕರ್ನಾಟಕ ಇತಿಹಾಸಮಂಡಳದ ಸ್ಥಾಪನೆಗೆ ನನ್ನನ್ನು ಪ್ರೇರೇಪಿಸಿದವರು ಶ್ರೀ. ರುಕ್ಮಾಂಗದರಾವ ದೇಶಪಾಂಡೆ, ಶ್ರೀ. ರಂಗರಾವ ಅಸುಂಡಿ, ಆಲಬಾಲ, ಸಿದ್ಧಾಂತಿ, ಸಾಲಿ, ಮೊಹರೆ ಹನುಮಂತರಾಯರು ( ಸ. ಕ. ಎಡಿಟರ್) ಮುಂತಾದವರು. ಮೊಹರೆ ಹನುಮಂತರಾಯರು ಹಿಪ್ಪರಿಗೆಯಲ್ಲಿ ಒಂದು ಶಾಖೆಯನ್ನು ಕೂಡ ಸ್ಥಾಪಿಸಿದ್ದರು. ಡೆಕ್ಕನ್ ಕಾಲೇಜಿನಿಂದ ಬಂದ ಬಳಿಕ ಈ ವಿದ್ಯಾರ್ಥಿಗಳು ಕೊಟ್ಟ ೧೦೦ ರೂ.ಗಳನ್ನು ನಾನೊಬ್ಬನೇ ತಕ್ಕೊಳ್ಳುವದಕ್ಕಿಂತ, ಚಿಕ್ಕದೇ ಏಕಾಗಲೊಲ್ಲದು ಒಂದು ಸಂಸ್ಥೆ ಸ್ಥಾಪಿಸಬೇಕೆಂದು ಇಚ್ಛಿಸಿದೆ. ಡೆಕ್ಕನ್ ಕಾಲೇಜದಲ್ಲಿ ಕೊಟ್ಟ ಉಪನ್ಯಾಸದ ಸಿದ್ಧತೆಯನ್ನು ಮಾಡುವ ಕಾಲಕ್ಕೆ ಮಹಾರಾಷ್ಟ್ರ ದೇಶದ ಮೇಲೆ ಕನ್ನಡಿಗರೇ ೭-೮ ನೂರು ವರ್ಷ ಆಳಿದರೆಂಬ ಮಾತನ್ನು ಕಂಡುಹಿಡಿದಿದ್ದೆ. ೧೯೧೪ನೆಯ ಇಸವಿಯ ದಸರೆಯ ದಿವಸ ನಾನು ಒಂದು ನೂರು ರೂಪಾಯಿ ಪುನಃ ಹಾಕಿ ಆಜೀವ ಸಭಾಸದನಾದೆ. ಪ್ರಥಮ ಕಾರ್ಯದರ್ಶಿಗಳಾದ ರುಕ್ಮಾಂಗದ ದೇಶಪಾಂಡೆ( ಈಗ ಇವರು ನಿವೃತ್ತ ಮುಂಬೈ ಇಲಾಖಾ ಇನ್‌ಕಮ್ ಟ್ಯಾಕ್ಸ್ ಆಫೀಸರರು. ಮತ್ತು ಬ್ರಾಹ್ಮಣ ವಿದ್ಯಾರ್ಥಿ ಫಂಡಿನ ಅಧ್ಯಕ್ಷರು.) ಇವರಿಗೆ ಮತ್ತು ಮುಂದೆ ಕಾರ್ಯದರ್ಶಿಗಳಾದ ದತ್ತಾತ್ರೇಯ ಕರಮರಕರರಿಗೂ ( ಈಗಿನ ಕೇಂದ್ರಸರಕಾರದ ವಾಣಿಜ್ಯ ಮಂತ್ರಿಗಳು.) ಇವರಿಬ್ಬರಿಗೂ ಮುಂಬಯಿ ವಿಶ್ವವಿದ್ಯಾಲಯದಿಂದ ಸಂಶೋಧನ ಪಾರಿತೋಷಕ ದೊರೆತಿದೆ. ನಾನು ೧೬ ವರುಷ ಮಂಡಳಕ್ಕೆ ಅಧ್ಯಕ್ಷನಾಗಿದ್ದೆ. ಮುಂದೆ ರಾ. ಸಾ ಹಾಲಭಾವಿಯವರು ಅಧ್ಯಕ್ಷರಾಗಿದ್ದರು. ಈಗ ರಾಜ್ಯಪಾಲ ರಂಗರಾವ ದಿವಾಕರ ಇವರು ಅಧ್ಯಕ್ಷರು; ಶ್ರೀ. ನಿಟ್ಟೂರ ಶ್ರೀನಿವಾಸರಾವ ಹಾಯಕೋರ್ಟ ಜಜ್ಜ ಇವರು ಕಾರ್ಯಾಧ್ಯಕ್ಷರು; ವಿದ್ಯಾರತ್ನ ಪಂಚಮುಖಿಯವರು ಸಂಪಾದಕರು; ಶ್ರೀ. ವೆಂಕಟರಾವ ನಾಯಕರು ಕಾರ್ಯದರ್ಶಿಗಳು.

**ಬಾದಾಮಿ ಪಟ್ಟದಕಲ್ಲು ಇವುಗಳಿಗೆ ಪ್ರವಾಸ:**—೧೯೧೫-೧೬ನೆಯ

ಇಸವಿಯ ಸುಮಾರಕ್ಕೆ ಈ ಊರುಗಳಿಗೆ ಹೋಗಿ ಬಂದೆ. ಇದರ ಸ್ಮೃತಿ ಹಿಂದೆ ಬಂದೆಯೇ ಇದೆ. ಇಷ್ಟೆಲ್ಲ ತಯಾರಾದ ಬಳಿಕ ಕರ್ನಾಟಕ ಗತ ವೈಭವವು ಪ್ರಸಿದ್ಧವಾಗಿದೆ. ನಿಜವಾಗಿ, ಅದು ಗ್ರಂಥವು ಅಲ್ಲವೇ ಅಲ್ಲ ಡೆಕ್ಕನ್ ಕಾಲೇಜದಲ್ಲಿ ನಾನು ೧೯೧೧ರಲ್ಲಿ ಕೊಟ್ಟ ಇಂಗ್ಲಿಷ ಉಪನ್ಯಾಸವನ್ನೇ ಬೆಳಿಸಿ ಬರೆದದ್ದು. ಆಗ ನಾನು ರಾಜಕಾರಣದಲ್ಲಿ ಅತ್ಯಂತ ನಿಮಗ್ನನಾದವನು. ಆದ ಕಾರಣ, ಅವಸರದಿಂದಲೇ ಬೆಳಿಸಿ ಬರೆದ ಪುಸ್ತಕವು ಅದು. ಹೀಗೆ ನನ್ನ ಆಯುಷ್ಯ ದಲ್ಲಿ ಅನೇಕ ಸಲ ಸರ್ಕಸ್ಸಿನ ಆಟಗಾರನಂತೆ ಒಂದೊಂದು ಸಲ ಎರಡೂ ಮೂರೂ ಕುದುರೆಗಳ ಸವಾರಿ ಒಮ್ಮೆಲೆ ಮಾಡಬೇಕಾದುದು ನನ್ನ ಸಾರ್ವಜನಿಕ ಆಯುಷ್ಯದ ಒಂದು ವೈಶಿಷ್ಟ್ಯ ಮತ್ತು ವೈಗುಣ್ಯ. ಆದರೆ ಅದಕ್ಕೆ ಉಪಾಯ ವಿದ್ದಿಲ್ಲ. ಕಾರ್ಯಕರ್ತರ ಅಭಾವವೂ ಆಯಾ ಪರಿಸ್ಥಿತಿಯಲ್ಲಿಯ ವಿಶಿಷ್ಟ ಕಾರ್ಯಗಳ ಒತ್ತಡವೂ ಅದಕ್ಕೆ ಕಾರಣ. ಅವೆಲ್ಲ ಕುದುರೆಗಳನ್ನು ಒಮ್ಮೆಲೆ ಸವಾರಿಮಾಡಿದರೂ, ನಾನು ನನ್ನ ಮುಖ್ಯ ಧ್ಯೇಯವಾದ ಅಖಂಡ ಕರ್ನಾಟಕತ್ವ ವನ್ನು ಮರೆತಿರಲಿಲ್ಲ.

ಈ ಪ್ರಕರಣವನ್ನೂ ಮತ್ತು ೧೯೧೭ನೆಯ ಇಸವಿಯ ಮುಂಚಿನ ನನ್ನ ಸಾರ್ವಜನಿಕ ಜೀವನದ ಕಥೆಯನ್ನೂ ಈ ಪುಸ್ತಕದಲ್ಲಿ ಹೆಚ್ಚಿಗೆ ಹೇಳಿದ ಕಾರಣ ವೆಂದರೆ ನಾನು ಮೂರು ಪೀಳಿಗೆಯ ಹಿಂದಿನವನಾಗಿರುವದರಿಂದಲೂ ಇತ್ತೀಚಿನ ವರಿಗೆ ಕರ್ನಾಟಕತ್ವದ ಉಗಮವೂ ವಿಕಾಸವೂ ಗೊತ್ತಿರದೇ ಇರುವದರಿಂದಲೂ ಅನೇಕ ದೊಡ್ಡ ಮನುಷ್ಯರ ಇಚ್ಛೆಯ ಮೇರೆಗೆ ಆ ಹಿಂದಿನ ಕಥೆಯನ್ನು ಹೇಳಿ ರುವೆನು. ಕರ್ನಾಟಕ ಗತವೈಭವವೇ ಕರ್ನಾಟಕತ್ವದ ಮೂಲವೆಂದೂ ಅಂದಿ ನಿಂದಲೇ ಕರ್ನಾಟಕತ್ವವು ಬೆಳೆಯಿತೆಂದೂ ಅನೇಕರ ಭಾವನೆ. ಅದು ತಪ್ಪು. ಕರ್ನಾಟಕ ಗತವೈಭವವು ನನ್ನ ಸ್ವಂತ ಕರ್ನಾಟಕ ಅಭಿಮಾನದ ಕಳಸವು; ಮತ್ತು ಇಡೀ ಕರ್ನಾಟಕದಲ್ಲಿ ಕರ್ನಾಟಕತ್ವವು ಹಬ್ಬಲಿಕ್ಕೆ ಅದು ಮೂಲವು.



# ೧೦ನೆಯ ಪ್ರಕರಣ

## ಕರ್ನಾಟಕ ಗತವೈಭವಯುಗ (೧೯೧೪-೧೯೩೬)

ನಾನು ಡೆಕ್ಕನ್ ಕಾಲೇಜಕ್ಕೆ ೧೯೧೪ರಲ್ಲಿ ವ್ಯಾಖ್ಯಾನ ಕೊಡಲಿಕ್ಕೆ ಹೋದಾಗಿನಿಂದ ಕರ್ನಾಟಕ ಗತವೈಭವ ಯುಗಕ್ಕೆ ಪ್ರಾರಂಭವಾಯಿತೆನ್ನ ಬಹುದು. ಅಲ್ಲಿ ನಾನು Past Glory of Karnatak ಎಂಬ ವಿಷಯವನ್ನು ತಕ್ಕೊಂಡು ಉಪನ್ಯಾಸ ಕೊಟ್ಟಾಗ ಆ ವಿಷಯದ ನನ್ನ ಅಭ್ಯಾಸವು ಕೆಲಮಟ್ಟಿಗೆ ಮುಗಿದಿತ್ತು. ಆಗಿನಿಂದ ನಾನು ಅವುಗಳ ವಿಚಾರವನ್ನು ತರುಣರಲ್ಲಿ ಹರಡ ಲಿಕ್ಕೆ ಮೊದಲು ಮಾಡಿದೆನೆಂಬುದು ಈಗ ಸರ್ವರಿಗೂ ತಿಳಿದ ಮಾತೇ ಆಗಿದೆ. ಆ ಗ್ರಂಥದ ಪ್ರತಿಗಳು ತೀವ್ರವೇ ತೀರಿ ಹೋಗಿದ್ದರೂ ನನಗೆ ನನ್ನ ಆರ್ಥಿಕ ಅಡಚಣಿಯ ಮೂಲಕ ನಡುನಡುವೆ ಅನೇಕ ವರ್ಷ ಅದರ ಪುನರ್ಮುದ್ರಣ ಮಾಡಿಸದೆ ಸುಮ್ಮನೆ ಕೂಡ್ರಬೇಕಾಗಿತ್ತು. ಇಲ್ಲಿಯ ವರೆಗೆ ಆ ಗ್ರಂಥದ ಎಷ್ಟೋ ಪುನರ್ಮುದ್ರಣಗಳಾಗಿ ಹೋಗಬೇಕಾಗಿತ್ತು ಹಾಗೆ ಆಗಲಿಲ್ಲ. ಏಳೇ ಪುನರ್ಮುದ್ರಣಗಳಾಗಿವೆ. ನಿಜವಾಗಿ, ಅದು ಬಹಳ ಕಚ್ಚಾ ಗ್ರಂಥ. ಮತ್ತೊಂದು ಸುಧಾರಿಸಿದ ಗ್ರಂಥ ಹೊರಟರೆ ನನಗೆ ಸಂತೋಷ. ಇರಲಿ, ಈ ಪ್ರಕರಣದಲ್ಲಿ ಮುಂಚೆ, ನನ್ನ ಕರ್ನಾಟಕತ್ವದ ಜೀವನದ ತತ್ವಗಳನ್ನು ಹೇಳುವೆ.

**ನನ್ನ ಕರ್ನಾಟಕತ್ವದ ಜೀವನತತ್ವಗಳು** :— ರಾಷ್ಟ್ರೀಯತ್ವಕ್ಕೂ ಕರ್ನಾಟಕಕ್ಕೂ ನನಗೆ ವಿಶೇಷ ಭೇದವೇ ತೋರುವದಿಲ್ಲ. ಕರ್ನಾಟಕತ್ವ ವನ್ನಷ್ಟೇ ಕಾರ್ಯಕ್ಷೇತ್ರವನ್ನಾಗಿ ತಕ್ಕೊಂಡು, ರಾಷ್ಟ್ರೀಯತ್ವದಲ್ಲಿ ಕೆಲಸ ಮಾಡಿದೆನು. ಇದಕ್ಕೆ ಪ್ರಾದೇಶಿಕ ರಾಷ್ಟ್ರೀಯತ್ವ ಅಥವಾ ಕರ್ನಾಟಕ ರಾಷ್ಟ್ರೀಯತ್ವವೆಂದು ಕರೆಯಬಹುದು.

ಇದರಲ್ಲಿ (೧) ರಾಜಕಾರಣ. (೨) ಸ್ವದೇಶೀ ಚಳವಳಿ. (೩) ಬಹಿಷ್ಕಾರ ಚಳವಳಿ. (೪) ರಾಷ್ಟ್ರೀಯ ಶಿಕ್ಷಣ. (೫) ಸ್ವರಾಜ್ಯ ಚಳವಳಿ.

ಅಥವಾ ಹೋಮರೂಲ ಲೀಗ ಚಳವಳಿ. (೬) ಅಸಹಕಾರ ಚಳವಳಿ. (೭) ಅಖಂಡ ಕರ್ನಾಟಕ ನಿರ್ಮಾಣ. (೮) ಇತರ ಚಳವಳಿ. ಇವೆಲ್ಲವುಗಳಲ್ಲಿ ನಾನು ಭಾಗ ತೆಗೆದುಕೊಳ್ಳುತ್ತ ಬಂದಿದ್ದೇನೆ.

ಸಾಂಸ್ಕೃತಿಕ ರಾಷ್ಟ್ರೀಯತ್ವ ಅಂದರೆನೇ ಕರ್ನಾಟಕ ರಾಷ್ಟ್ರೀಯತ್ವ. ಇದರಲ್ಲಿ (೧) ವಾಙ್ಮಯ. (೨) ಇತಿಹಾಸ. (೩) ಅಖಿಲ ಕರ್ನಾಟಕ ವಿಶ್ವವಿದ್ಯಾಲಯ. (೪) ಅಖಂಡ ಕರ್ನಾಟಕಕ್ಕಾಗಿ ಮಿಕ್ಕ ಸಾಂಸ್ಕೃತಿಕ ಚಟುವಟಿಕೆಗಳು ಮತ್ತು ಇತರ ಚಟುವಟಿಕೆಗಳು. ಇದು ನನ್ನ ಮುಂದಿನ ಜೀವನದ ಮುನ್ನೋಟ. ನನ್ನ ಜೀವನದ ವೈಶಿಷ್ಟ್ಯವೇನೆಂದರೆ, ನಾನು ಮೇಲ್ಕಾಣಿಸಿದ ಯಾವತ್ತೂ ಚಟುವಟಿಕೆಗಳಲ್ಲಿ ಆಯಾ ಕಾಲದ ಮಾನದಿಂದ ಹೆಚ್ಚುಕಡಿಮೆ ಪಾತ್ರವನ್ನು ವಹಿಸಿದ್ದು. ನಾನು, ನನ್ನ ಅಭಿಪ್ರಾಯದಂತೆ ದಿನ ದಿನಕ್ಕೆ ಹೆಚ್ಚುಹೆಚ್ಚಿಗೆ ಮಹತ್ವವಾಗಿರುವ ವಿಷಯದ ಕಡೆಗೆ ಸಾಗಿದ್ದೇನೆ. ಮುಂದೆ ಮುಂದೆ ಅಥವಾ ಮೇಲೆ ಮೇಲಕ್ಕೆ ಹೋಗುವದು ನನ್ನ ರೀತಿ. ಈ ತರಹದ ಪದ್ಧತಿಗೆ ಸರ್ ಜೇಮ್ಸ್ ಜೀನ್ಸ ಎಂಬವರ ಮಾತಿನಲ್ಲಿ ಹೇಳುವದಾದಲ್ಲಿ ಗುಣೋತ್ಕರ್ಷ ಪದ್ಧತಿ ( Excelsior ) ಎಂದು ಕರೆಯಬಹುದು. ರಾಜಕೀಯ ರಣಕ್ಷೇತ್ರವೇ ಆಗಿನ ನಮ್ಮ ಯುಗಧರ್ಮವು. ಆದರೆ ಆ ರಣ ಕ್ಷೇತ್ರದಲ್ಲಿ ಕರ್ನಾಟಕವು ಸ್ವತಂತ್ರವಾಗಿ ಯುದ್ಧ ಹೂಡುವಷ್ಟು ಆಗ ಸಮರ್ಥವಾಗಿದ್ದಿಲ್ಲ. ಆದುದರಿಂದ ಕರ್ನಾಟಕದ ರಾಜಕಾರಣಕ್ಕೆ ಪ್ರತ್ಯೇಕವಾದ ಅಸ್ತಿತ್ವವು ಇದ್ದಿಲ್ಲ; ಇನ್ನೂ ಪ್ರಾಪ್ತವಾಗಿಲ್ಲ! ಆ ಕ್ಷೇತ್ರದಲ್ಲಿ ಅದು ಮಾಡತಕ್ಕ ಆಗಿನ ಮುಖ್ಯ ಕಾರ್ಯವೆಂದರೆ, ಹಿಂದುಸ್ಥಾನದ ಧುರೀಣರು ಹಾಕಿಕೊಟ್ಟ ಮಾರ್ಗದಲ್ಲಿ ಸಾಗಿ, ಕರ್ನಾಟಕವನ್ನು ಮಿಕ್ಕ ಪ್ರಾಂತಗಳಿಗೆ ಸರಿಜೋಡಿಯಾಗಿ ನಿಲ್ಲಿಸುವದು. ಈ ಕೆಲಸವನ್ನು ಕರ್ನಾಟಕಸ್ಥರು ಅತ್ಯಂತ ಶ್ರದ್ಧಾಪೂರ್ವಕವಾಗಿ ಇಂದಿನ ವರೆಗೆ ಮಾಡುತ್ತ ಬಂದಿರುವರು. ರಾಷ್ಟ್ರದ ಕರ್ಣಧಾರರು ಲೋಕಮಾನ್ಯ ಟಿಳಕರೇ ಇರಲಿ, ಅಥವಾ ಮಹಾತ್ಮಾ ಗಾಂಧೀಯವರೇ ಇರಲಿ, ಅವರು ಹಾಕಿಕೊಟ್ಟ ಧೋರಣವನ್ನು ಶ್ರದ್ಧೆಯಿಂದ ಕರ್ನಾಟಕವು ಪಾಲಿಸುತ್ತ ಬಂದಿದೆ. ಇಲ್ಲಿಯೂ, ಕೇವಲ ಅನುಕರಣವು ಉಪಯೋಗದ್ದಲ್ಲವೆಂದೂ ಆ ಸಾಮಾನ್ಯ ಚಟುವಟಿಕೆಗಳಿಗೆ ಕರ್ನಾಟಕತ್ವದ ವಿಶಿಷ್ಟಸ್ವರೂಪವನ್ನು ಕೊಡುವದು ಅತ್ಯವಶ್ಯವೆಂದೂ ನಾನು ಕನ್ನಡಿಗರಿಗೆ ಮನಗಾಣಿಸಿ ಕೊಡಲು ಪ್ರಯತ್ನಿಸಿದ್ದೇನೆ. ಕೇವಲ

ಅಂಧಶ್ರದ್ಧೆಯು ಉಪಯೋಗದ್ದಲ್ಲ. ನಮ್ಮ ಕರ್ನಾಟಕದ ವಿಶಿಷ್ಟ ಸುಖ-ದುಃಖಗಳನ್ನು ರಾಷ್ಟ್ರಮುಖಂಡರ ಮನಸ್ಸಿನಲ್ಲಿ ಬಿಂಬಿಸಬೇಕು. "ಕೇವಲ, ಹೌದಪ್ಪನವರ ಚಾವಡಿಯಲ್ಲಿ ಹೌದಪ್ಪನವರು, ಅಲ್ಲಪ್ಪನ ಚಾವಡಿಯಲ್ಲಿ ಅಲ್ಲಪ್ಪನವರು" ಆಗುವದು ಬೇಡ. ಇದಕ್ಕೇನೇ ನಾನು ಕರ್ನಾಟಕದಲ್ಲಿಯ ರಾಷ್ಟ್ರೀಯತ್ವ ಎನ್ನುತ್ತೇನೆ. ಅದನ್ನು ನಾನು ಮಾಡಲು ಯತ್ನಿಸಿದ್ದೇನೆ. ಇದೇ ಆ ನನ್ನ ಕ್ಷೇತ್ರದಲ್ಲಿ ನಾನು ಮಾಡಿದ ಕರ್ನಾಟಕದ ವಿಶಿಷ್ಟ ಕಾರ್ಯ. ಈ ಉದ್ದೇಶವನ್ನು ಅನುಸರಿಸಿ, ನಾನು ಎಲ್ಲಕ್ಕೂ ಮುಂಚೆ ಧುಮಕಿದ್ದು ಕರ್ನಾಟಕದ ರಾಜಕಾರಣದಲ್ಲಿ. ಧುಮುಕಿದೆನು ಎನ್ನುವದಕ್ಕಿಂತ, ೧೯೦೫-೬ನೆಯ ಇಸ್ವಿ ಸುಮಾರಕ್ಕೆ ರಾಷ್ಟ್ರದಲ್ಲೆಲ್ಲ ರಾಜಕಾರಣದ ತೆರೆಗಳು ನನ್ನನ್ನು ಪೂರಾ ಕೊಚ್ಚಿಕೊಂಡು ಹೋದವೆಂದೇ ಅನ್ನಬೇಕು. ಕರ್ನಾಟಕದ ರಾಜಕಾರಣದಲ್ಲಿ ಆ ತೆರೆಗಳನ್ನು ಚಿಮ್ಮಲಿಕ್ಕೆ ಪ್ರಯತ್ನಿಸಿದೆನು. ಹೀಗೆ ಈ ತೆರೆಗಳನ್ನು ಚಿಮ್ಮುತ್ತಿರುವಾಗಲೇ ನನ್ನ ಮನದಲ್ಲಿ ಕರ್ನಾಟಕತ್ವದ ವಿಚಾರಗಳು ಆಳವಾಗುತ್ತ ನಡೆದವು. ಭಾರತದ ಮುಖಂಡರ ಮೇಲೆ ತಮ್ಮ ವಿಚಾರಗಳ ವರ್ಚಸ್ಸನ್ನು ಕೂಡಿಸುವಂಥ ಮುಖಂಡರು ಹುಟ್ಟಿ, ಕರ್ನಾಟಕದ ಕಲ್ಯಾಣವನ್ನು ಮಾಡದಿದ್ದರೆ ಉಪಯೋಗವೇನು ? ಶಕ್ಯವಾದ ಮಟ್ಟಿಗೆ ನಾನು ಸ್ವತಃ ಹಾಗೆ ಮಾಡಿದೆನು. ಮತ್ತು ಅಲ್ಲಿ ನನ್ನ ಆಟವು ನಡೆಯದಾದಾಗ, ಕೇವಲ ಕರ್ನಾಟಕತ್ವದ ಚಳವಳಿಗೆ ಹೆಚ್ಚು ಪ್ರಾಶಸ್ತ್ಯವನ್ನು ಕೊಟ್ಟೆನು. ಮತ್ತು ನನ್ನ ಪ್ರಥಮ ಸಂಕಲ್ಪದಂತೆ ಧಾರ್ಮಿಕ ಜೀವನಕ್ಕೆ ಅಥವಾ ಏಕಾಂತದ ಸಾಧನ ಜೀವನಕ್ಕೆ ಪ್ರಾಧಾನ್ಯವನ್ನು ಕೊಟ್ಟು, ಸಾಧನಕೇರಿಯಲ್ಲಿ ಈಗ ವಾಸಿಸುತ್ತಿರುವೆನು. ಇದು ನನ್ನ ಮುಂದಿನ ಜೀವನದ ಮುನ್ನೋಟ. ಇರಲಿ.

**ನನ್ನ ಸಾರ್ವಜನಿಕ ಜೀವನದ ರಹಸ್ಯ :—** ನನ್ನ ಸಾರ್ವಜನಿಕ ಜೀವನವು ಅನೇಕರಿಗೆ ವಿಕ್ಷಿಪ್ತವಾಗಿ ತೋರುತ್ತಿರುವದು. ಅದು ಸ್ವಾಭಾವಿಕವು. ಏಕೆಂದರೆ, ನಾಲ್ಕು ಜನರ ಸಾರ್ವಜನಿಕ ಜೀವನದಂತೆ ನನ್ನ ಜೀವನ ಇಲ್ಲದಿರುವದೇ ಅದಕ್ಕೆ ಮುಖ್ಯ ಕಾರಣ. ನಾನು ನನ್ನ ಸಾರ್ವಜನಿಕ ಕಾರ್ಯದಲ್ಲಿ ಕೆಲವು ವಿಶೇಷ ತತ್ವಗಳನ್ನು ಇಟ್ಟುಕೊಂಡಿರುವೆನು. ಆ ತತ್ವಗಳು ಎಷ್ಟರ ಮಟ್ಟಿಗೆ ಸರಿಯಾದವು ಎಂಬುದನ್ನು ಹೇಳುವದು ನನ್ನ ಕೆಲಸವಲ್ಲ. ಅವುಗಳಲ್ಲಿ ನನಗೆ ಶ್ರದ್ಧೆಯಿದೆ ಎಂದು ಮಾತ್ರ ಹೇಳುತ್ತೇನೆ. ಅವನ್ನು

ಮುಂದೆ ಹೇಳುವೆ. ಇಲ್ಲಿ ಸಾಮಾನ್ಯ ರಹಸ್ಯವನ್ನು ಮಾತ್ರ ಹೇಳುತ್ತೇನೆ.

ವಾಚಕರು ನೆನಪಿನಲ್ಲಿಡತಕ್ಕ ಮೊದಲನೆಯ ಮಾತೆಂದರೆ ನಾನೊಬ್ಬನೇ ಅವನ್ನು ಮಾಡಿದೆನೆಂದು ಯಾರೂ ತಿಳಿಯಕೂಡದು. ಯಾವ ಚಟುವಟಿಕೆಗಾದರೂ ಮಿತ್ರರ ಬೆಂಬಲ ಬೇಕು; ಜನತೆಯ ಸಹಾನುಭೂತಿ ಬೇಕೇಬೇಕು. ಆದ ಕಾರಣ ನಾನು ಇಂಥ ಚಟುವಟಿಕೆಯನ್ನು ಮಾಡಿದೆನೆಂದು ಹೇಳುವದರಲ್ಲಿ ನನ್ನ ಮುಖ್ಯ ಉದ್ದೇಶವು, ಆ ಚಟುವಟಿಕೆಯಲ್ಲಿ ನಾನು ಪ್ರಮುಖ ಪಾತ್ರ ವಹಿಸಿದೆನು ಎಂದರ್ಥ. ಕೆಲವು ನನ್ನ ಸ್ವತಂತ್ರ ಕಲ್ಪನೆಯಿಂದ ಉದ್ಭವಿಸಿದವುಗಳು, ಕೆಲವು ಅನ್ಯರ ಪ್ರೇರಣೆಯಿಂದ ಉದ್ಭವಿಸಿದವುಗಳು.

ನನ್ನ ಪರಮ ಮುಖ್ಯ ಧ್ಯೇಯವು "ಆತ್ಮಜೀವನದ ಪರಮಾವಧಿ ಪಾವಿತ್ರ್ಯ." ಅಥವಾ "ಆತ್ಮದ ಪರಮಾವಧಿ ವಿಕಾಸ." ಈ ಮುಖ್ಯ ಧ್ಯೇಯವನ್ನು ಕೇಂದ್ರವಾಗಿಟ್ಟುಕೊಂಡೇ ನಾನು ನನ್ನ ಯಾವತ್ತೂ ಚಟುವಟಿಕೆಗಳನ್ನು ನಡೆಯಿಸಿದುವೆನೆಂಬುದು ಸೂಕ್ಷ್ಮವಾಗಿ ಅವಲೋಕಿಸುವವರಿಗೆ ಸಹಜವಾಗಿ ಕಂಡುಬರುವದು. ನಾನು ಮೂಲತಃ ರಾಜಕಾರಣ ಪುರುಷನೂ ಅಲ್ಲ; ಸಾಹಿತಿಯೂ ಅಲ್ಲ; ಇತಿಹಾಸಜ್ಞನೂ ಅಲ್ಲ; ರಾಷ್ಟ್ರೀಯನೂ ಅಲ್ಲ; ಕರ್ನಾಟಕಿಯೂ ಅಲ್ಲ; ಧಾರ್ಮಿಕ ಪುರುಷನೂ ಅಲ್ಲ. ಅವೆಲ್ಲ ಚಟುವಟಿಕೆಗಳನ್ನು ನಾನು ಕೈಕೊಂಡಿದ್ದರೆ, ಅವು ಆ ಕಾಲಮಾನ ಪರಿಸ್ಥಿತಿಗನುಸರಿಸಿ ಮತ್ತು ಆತ್ಮವಿಕಾಸಕ್ಕೆ ಸಹಾಯಕವೆಂದು; ಅಲ್ಲದೆ ಸಹಾಯಕ ಆಗುವ ಮಟ್ಟಿಗೆ ಮಾತ್ರ, ಅವು ಎಂದು ಅಡ್ಡಬರುವವೋ ಅಂದು ಅವನ್ನು ಬೀಸಾಡಿರುವೆನು; ಬೀಸಾಡುವೆನು. ಸಾರಾಂಶ, ಆಧ್ಯಾತ್ಮವು ನನ್ನ ಜೀವನದ ಮಲಸೂತ್ರ (ಮೂಲಸೂತ್ರ)ವು. ಅದು ನನ್ನ ಯಾವತ್ತೂ ಚಟುವಟಿಕೆಗಳಲ್ಲಿ ಅಂತರ್ಯಾಮಿಯಾಗಿದೆ. ನನ್ನ ಯಾವತ್ತೂ ಆಧಿಭೌತಿಕ; ಆಧಿದೈವಿಕ ಚಟುವಟಿಕೆಗಳಿಗೆ ಆಧ್ಯಾತ್ಮಜೀವನವು ಆಧಾರವು. ಈ ಮೂರೂ ತರಹದ ಜೀವನಗಳಿಂದ ಕೂಡಿದ ಜೀವನವೇ "ಪೂರ್ಣ ಜೀವನ"ವೆಂದು ನನ್ನ ಮತ. ಆದ ಕಾರಣವೇ ಕೇವಲ ವೇದಾಂತದ ಗೂಢದಂಥ ತತ್ವಗಳನ್ನು ಹೇಳಿ, ಜೀವನವನ್ನು ಬೇರೆ ರೀತಿಯಾಗಿ ನಡೆಯಿಸುವವರ ಬಗ್ಗೆ ನನಗೆ ತಿರಸ್ಕಾರವಿದೆ. ಜೀವನವು ತತ್ವಗಳ ಪ್ರಯೋಗಶಾಲೆಯು; ಪರೀಕ್ಷಾಮಂದಿರವು. ವೇದಾಂತ ತತ್ವಗಳ ಸತ್ಯತೆಯು, ಜೀವನದ ಒರೆಗಲ್ಲಿಗೆ ಹಚ್ಚಿ ನೋಡಿದಾಗ ನಿಚ್ಚಳವಾಗಿ ಗೊತ್ತಾಗುತ್ತದೆ.

ಅಲ್ಲಿಯ ವರೆಗೆ ಇಲ್ಲ. ಧಾತುಗಳ ಕಣಿಗಳಲ್ಲಿ ಬೆಳ್ಳಿ, ಬಂಗಾರ, ವಜ್ರ ಮುಂತಾದ ವುಗಳ ಕಣಗಳು ಇದ್ದರೇನಾಯಿತು ? ಅವುಗಳ ಉಪಯೋಗವಾಗಬೇಕಾದರೆ ಜಗತ್ತಿನಲ್ಲಿಯೇ ಅಲ್ಲವೇ ? ಹಾಗೆಯೇ ತತ್ವಗಳ ವಿಚಾರ. ಜೀವನದಿಂದ ಬೇರ್ಪಡಿಸಿದ ತತ್ವಗಳು ತತ್ವಗಳಲ್ಲ; ತತ್ವಗಳಿಂದ ಬೇರ್ಪಡಿಸಿದ ಜೀವನವು ಜೀವನವಲ್ಲ; ವೇದಾಂತದ ಉದಾತ್ತವಾದ ತತ್ವಗಳನ್ನು ವ್ಯಷ್ಟಿ ಮತ್ತು ಸಮಷ್ಟಿ ಜೀವನದ ವಿವಿಧ ಅಂಗಗಳಿಗೆ ಅನ್ವಯಿಸಿ ನೋಡುವದೊಂದು ಚಟವೇ ನನಗೆ ಬಿದ್ದಿದೆ. ಇದನ್ನು ನನ್ನ ಪ್ರತಿಯೊಂದು ಚಟುವಟಿಕೆಗಳಲ್ಲಿ ವಾಚಕರು ಕಾಣಬಹುದು.

ಇನ್ನು, ನಾನು ಕಾರ್ಯಮಾಡುವ ಪದ್ಧತಿಯನ್ನು ತುಸು ಹೇಳುವೆನು. ಪ್ರೇರಕಶಕ್ತಿಯನ್ನು ಮಾತ್ರ ಕೊಟ್ಟು ಆದಷ್ಟುಮಟ್ಟಿಗೆ ಹಿಂದಕ್ಕೆ ಸರಿದು ನಿಂತು ಕೆಲಸ ಮಾಡುವದು ನನ್ನ ಪದ್ಧತಿ. ಇದರಿಂದಾಗುವ ಲಾಭವೇ ನೆಂದರೆ ಆ ವಿಷಯದಲ್ಲಿ ಕಾರ್ಯಮಾಡುವ ಮಹತ್ವಾಕಾಂಕ್ಷೆ ಉಳ್ಳವರಿಗೆ ಆಸ್ಪದ ಮಾಡಿಕೊಟ್ಟಂತಾಗುವದು. ಆದ ಕಾರಣ ಹಿಮ್ಮೇಳದಲ್ಲಿರಲು ಇಚ್ಛಿಸುತ್ತಿದ್ದೆನು. ಮುಂದೆ ಬಂದು ಕುಣಿಯುವವನು ಅಲ್ಲ. ಸಾರ್ವಜನಿಕ ಕಾರ್ಯ ಮಾಡುವಾಗ ಸ್ಪರ್ಧೆಗೆ ತಿಲಮಾತ್ರವೂ ಅವಕಾಶವಿರಕೂಡದೆಂದು ನನ್ನ ತತ್ವ. ಒಬ್ಬನು ಒಂದು ಕಾರ್ಯ ಮಾಡಬಯಸಿದರೆ ತಾನು ಮತ್ತೊಂದು ಕಾರ್ಯ ಕೈಕೊಂಡರೆ ತೀರಿತು. ಇದರಿಂದ ಮತ್ಸರಾಸೂಯಗಳಿಗೆ ಎಡೆ ಯುಳಿಯುವದಿಲ್ಲೆಂದು ನನ್ನ ಮತ. ಹಾಗೆಯೇ ಸಾರ್ವಜನಿಕ ಕಾರ್ಯ ಮಾಡುವವರು ಸಂಸ್ಥೆಯ ಮೋಹವನ್ನು ಕೂಡ ಬಿಟ್ಟುಕೊಡಬೇಕೆಂದು ನನ್ನ ತತ್ವ. ಯಾವ ಸಂಸ್ಥೆಯನ್ನೂ ತಾನೇ ನಡಿಸುತ್ತೇನೆಂಬ ಹಟಹಿಡಿಯಬಾರದು. ವೇದಾಂತವು ಹೆಂಡಿರುಮಕ್ಕಳ ಮೋಹವನ್ನಷ್ಟೇ ಬಿಡಹೇಳುವದಿಲ್ಲ; ಎಲ್ಲ ತರಹದ ಮೋಹಗಳನ್ನು ಬಿಡಲು ಹೇಳುತ್ತದೆ. ಈ ವೇದಾಂತ ತತ್ವವನ್ನು ಸಾರ್ವಜನಿಕ ಕಾರ್ಯಕ್ಕೂ ಹಚ್ಚಬೇಕು. ಯಾವದೊಂದು ಸಾರ್ವಜನಿಕ ಕಾರ್ಯವು "ಆಗಬೇಕು" ಎಂಬುದು ನನ್ನ ಮುಖ್ಯ ಧ್ಯೇಯ; ಅದನ್ನು ನಾನೇ "ಮಾಡಬೇಕು" ಎಂಬುದು ನನ್ನ ಮುಖ್ಯ ಧ್ಯೇಯವಲ್ಲ. ನನ್ನ ಸಾರ್ವಜನಿಕ ಕಾರ್ಯಮಾಡುವ ಪದ್ಧತಿಯ ಮತ್ತೊಂದು ತತ್ವವೆಂದರೆ ಕೃತ್ರಿಮ ಚಳವಳಿಯು ಏನೂ ಉಪಯೋಗದ್ದಲ್ಲೆಂಬುದು. ನನ್ನ ಆಯುಷ್ಯದಲ್ಲಿಯೇ

ಕೃತ್ರಿಮತೆಗೆ ಸ್ಥಾನವಿಲ್ಲ. ಕೃತ್ರಿಮ ಚಳವಳಿಯನ್ನು ಮಾಡುವದೆಂದರೆ ಕಸಕು ಕಾಯಿಯನ್ನು ಒತ್ತಿ ಹಣ್ಣು ಮಾಡುವದು. ಆದಷ್ಟು ತೀವ್ರ ತಾನೇ ಯಾವದೊಂದು ಚಳವಳಿಯ ಫಲಗಳನ್ನು ಕಾಣಬೇಕೆಂಬ ಅತಿರೇಕವಾದ ಆತುರತೆಯೇ ಇಂಥ ಕೃತ್ರಿಮತೆಗೆ ಕಾರಣವಾಗುತ್ತದೆ. ಇಂದು ಬಿತ್ತಿದ ಬೀಜ ಗಳ ಫಲಗಳನ್ನು ಇಂದೇ ಅಪೇಕ್ಷಿಸದೆ, ಅದನ್ನು ಕಾಲಾವಧಿಗೆ ಬಿಟ್ಟುಕೊಟ್ಟರೆ ಅದರಿಂದ ಸ್ವಾಭಾವಿಕವಾದ ಫಲಗಳನ್ನು ಕಾಣಬಹುದು. ಸಣ್ಣಪುಟ್ಟ ಗಿಡ ಗಳ ಬೀಜಗಳಿಗೆ ಬೇಗನೆ ಮೊಳಕೆ ಒಡೆದು ಗಿಡಗಳಾಗಿ ಹಲವು ವರ್ಷಗಳ ಲ್ಲಿಯೇ ಫಲ ದೊರೆಯಬಹುದು. ಆಕ್ರೋಡದ ಬೀಜಗಳನ್ನು ಬಿತ್ತಿದರೆ, ತನ್ನ ಜನ್ಮದಲ್ಲಿಯೇ ಫಲವನ್ನು ಉಣ್ಣುವೆನೆಂಬ ಆಕಾಂಕ್ಷೆಯನ್ನೇ ಬಿಟ್ಟುಬಿಡಬೇಕಾ ಗುವದು. ಅಕ್ರೋಡದ ಗಿಡಕ್ಕೆ ಫಲವು ಬರಲಿಕ್ಕೆ ೬೦ ವರ್ಷಗಳು ಬೇಕಾಗು ವವಂತೆ. ಈ ಅಕ್ರೋಡದ ಉಪಮೆಯನ್ನು ನಾನು ನನ್ನ ಜೀವನಸ್ಮೃತಿಗಳು ಎಂಬ ಪುಸ್ತಕದಲ್ಲಿ ಅಂದರೆ ೧೯೪೦ನೆಯ ಇಸವಿಯಲ್ಲಿ ಬರೆದ ಪುಸ್ತಕದಲ್ಲಿ ಕೊಟ್ಟಿರುವೆನು. ಚಮತ್ಕಾರವೇನೆಂದರೆ, ಅಖಂಡ ಕರ್ನಾಟಕವು ನಿರ್ಮಾಣ ಮಾಡಬೇಕೆಂಬ ನನ್ನ ಸಂಕಲ್ಪದ ಆಕ್ರೋಡ ಗಿಡದ ಬೀಜವು ನನ್ನ ಸಾರ್ವ ಜನಿಕ ಜೀವನದಲ್ಲಿ ೧೮೯೬ನೆಯ ಇಸವಿಯಲ್ಲಿ ಬಿತ್ತಲ್ಪಟ್ಟಿದ್ದು, ಅದು ಅಖಂಡ ಕರ್ನಾಟಕವೆಂಬ ಫಲವನ್ನು ೬೦ ವರ್ಷಗಳ ನಂತರವೇ ಅಂದರೆ ೧೯೫೬ನೆಯ ಇಸವಿಯಲ್ಲಿಯೇ ಕೊಟ್ಟಿತು. ಮತ್ತು ನಾನೇ ಬಿತ್ತಿದ ಆ ಬೀಜಗಳ ಫಲ ವನ್ನು ಕಾಣಲಿಕ್ಕೆ ಕೂಡ ಇನ್ನೂ ಜೀವಂತ ಇರುವೆನಲ್ಲಾ ಎಂಬುದು ಎಷ್ಟು ಆನಂದದ ಸಂಗತಿಯು ! ಅರ್ಥಾತ್ ಅದು ಪರಮೇಶ್ವರನ ಕೃಪೆಯು. ಇರಲಿ, ನನ್ನ ಸಾರ್ವಜನಿಕ ಜೀವನದ ಮತ್ತೊಂದು ತತ್ವವೆಂದರೆ, ಸಾರ್ವಜನಿಕ ಚಳ ವಳಿಗಳನ್ನು ಆತ್ಮಪ್ರಕಟನೆಯ ಸಂಧಿಗಳೆಂದು ಉಪಯೋಗಿಸಬಾರದು. ಈಗ ಹಾಗೆ ಅನೇಕರ ತಿಳುವಳಿಕೆಯಿದೆ. ಇಷ್ಟೇ ಅಲ್ಲ, ಆತ್ಮಪ್ರಕಟನೆಯು ಈಗ ಒಂದು ಶಾಸ್ತ್ರವೇ ಆಗಿದೆ. ಅದಕ್ಕೆ ನಾನು ವಿರೋಧಕನು.

**ನನ್ನ ಕೆಲವು ಮುಖ್ಯ ಚಟುವಟಿಕೆಗಳು:**— ಇನ್ನು ಇಲ್ಲಿ, ನಾನು ಪ್ರಾಮುಖ್ಯ ಭಾಗವಹಿಸಿದ ಕೆಲವು ಚಟುವಟಿಕೆಗಳನ್ನು ಉಲ್ಲೇಖಿಸುವೆ.

**ಮೊದಲನೆಯ ಓರಿಯಂಟಲ್ ಕಾಂಗ್ರೆಸ್ಸೂ ಕರ್ನಾಟಕವೂ:**— ೧೯೧೯ನೆಯ ಇಸವಿಯಲ್ಲಿ ಪುಣೆಯಲ್ಲಿ ಓರಿಯಂಟಲ್ ಕಾನ್ಫರನ್ಸ್ ಕೂಡಿತು.

ಆದಕ್ಕೆ ನಾವು ಕೆಲವರು ನಮ್ಮ ಇತಿಹಾಸ ಮಂಡಲದ ಪರವಾಗಿ ಪ್ರತಿನಿಧಿಗಳಾಗಿ ಹೋಗಿದ್ದೆವು. ಅಲ್ಲಿ ನಾನು ಒಂದು ಪ್ರಬಂಧವನ್ನು ಓದಿದೆ. ಚಾಲುಕ್ಯರೇ ಮುಂತಾದವರು ಕನ್ನಡಿಗರಲ್ಲ, ಮರಾಟಿಗರು ಎಂಬ ವಿಲಕ್ಷಣ ವಾದವನ್ನು ಶ್ರೀ. ಚಿಂತಾಮಣರಾವ ವೈದ್ಯ ಇವರು ಎತ್ತಿದ್ದರು. ಆದಕ್ಕೆ ಉತ್ತರವೆಂದು ನಾನು ಆ ಪ್ರಬಂಧವನ್ನು ಇಂಗ್ಲಿಷಿನಲ್ಲಿ ಬರೆದಿದ್ದೆ. ಐತಿಹಾಸಿಕ ಕಮಿಟಿಯಲ್ಲಿ ಆದರ ಚರ್ಚೆ ಹೊರಟಿತು. ಅಲ್ಲಿಯ ವಿದ್ವಾಂಸರೆಲ್ಲರು ನನ್ನ ಪ್ರಬಂಧವನ್ನು ಒಪ್ಪಿದರು. ಇಷ್ಟು ಸಪ್ರಮಾಣ ಆಧಾರಗಳಿರಲು ಇದರ ವಿಷಯವಾಗಿ ಸಂದೇಹವನ್ನಾದರೂ ಯಾರು ತೆಗೆದುಕೊಂಡರು; ಈ ಪ್ರಬಂಧವನ್ನು ಬರೆಯುವ ಶ್ರಮಕ್ಕೆ ಕಾರಣವೇನು ಎಂದು ಅಧ್ಯಕ್ಷರು ನನ್ನನ್ನು ಕೇಳಿದರು. ನಾನು, ಅಲ್ಲಿ ಕುಳಿತಿರುವ ಚಿಂತಾಮಣರಾಯರನ್ನು ತೋರಿಸಿ ಇವರೇ ಈ ಪ್ರಶ್ನೆ ಎತ್ತಿದವರು; ಅದಕ್ಕಾಗಿ ತಮ್ಮೆಲ್ಲರೆದುರಿಗೆ ಈ ಪ್ರಶ್ನೆ ಇಟ್ಟಿರುವೆ; ಅವರಿಗೆ ತಮ್ಮ ಸಮರ್ಥನೆ ಮಾಡಿಕೊಳ್ಳುವದಿದ್ದರೆ ಮಾಡಿಕೊಳ್ಳಲಿ ಎಂದು ಅಂದೆ. ಚಿಂತಾಮಣರಾಯರು ಆಗ ಬ್ರ ಮಾತನಾಡಲಿಲ್ಲ. ಆದರೆ ಚಮತ್ಕಾರವೇನೆಂದರೆ, ಮುಂದೆ ಅವರು ಪ್ರಸಿದ್ಧಪಡಿಸಿದ ಮರಾಠಿ ಗ್ರಂಥದಲ್ಲಿ ಪುನಃ ಅವರು ತಮ್ಮ ಹಟವನ್ನು ಬಿಡದೆ, ಅದೇ ವಿಧಾನ ಮಾಡಿರುವರಂತೆ. ಮತ್ತು ಟಿಪ್ಪಣಿಯಲ್ಲಿ ನನ್ನ ಹೆಸರು ಸಹ ಕಾಣಿಸದೆ ಕನ್ನಡಿಗರೊಬ್ಬರು ವ್ಯರ್ಥವಾಗಿ ಚಾಲುಕ್ಯರೇ ಮುಂತಾದವರು ಕನ್ನಡಿಗರೆಂದು ಸಾಧಿಸುತ್ತಾರೆಂದು ಬರೆದಿರುವರಂತೆ! ಇದಕ್ಕೆ ಏನು ಅನ್ನಬೇಕು? ಈಗ ದೇವ ಎಂಬ ಮತ್ತೊಬ್ಬರು ಪುನಃ ಅದೇ ವಾದ ಎತ್ತಿರುವರೆಂದು ಕೇಳಿಕೆ. ಇಲ್ಲಿಯ ಕರ್ನಾಟಕ ಸಂಶೋಧನ ಮಂಡಳದವರು ಆದಕ್ಕೆ ಉತ್ತರ ಕೊಡಲಿ; ಕೊಡುವ ಕೆಲಸವು ಈಗ ಅವರದು.

**ಇಲ್ಲಿಯ ಕರ್ನಾಟಕ ಕಾಲೇಜಿನ ವಿಶಿಷ್ಟ ಚಿಹ್ನದ ಸ್ಮೃತಿ** :— ರಾಲಿನ್ಸನ್ನರು ಕರ್ನಾಟಕ ಕಾಲೇಜಿನ ಪ್ರಿನ್ಸಿಪಾಲರಾಗಿದ್ದಾಗ ೧೯೨೨-೨೩ರಲ್ಲಿ ಕರ್ನಾಟಕ ಕಾಲೇಜಿಗೆ ಒಂದು ವಿಶಿಷ್ಟ ಚಿಹ್ನ ಇರಬೇಕೆಂದು ಇಚ್ಛಿಸಿದರು. ಅವರು ಇತಿಹಾಸಪ್ರಿಯರು. ನನಗೂ ಅವರಿಗೂ ಆ ಸಂಬಂಧವಾಗಿ ಸ್ನೇಹವಿತ್ತು. ಅವರು ನನಗೆ ಪತ್ರಬರೆದು ಕರ್ನಾಟಕ ಕಾಲೇಜಕ್ಕೆ ಯಾವ ವಿಶಿಷ್ಟ ಚಿಹ್ನ ಇರಬೇಕೆಂಬದನ್ನು ಸೂಚಿಸಲಿಕ್ಕೆ ಕೇಳಿದರು. ಅನೇಕ ಕಾರಣಗಳ ಮೂಲಕ ಚಾಲುಕ್ಯ ವಿಜಯನಗರ ಮುಂತಾದವರ ವರಾಹ ಚಿಹ್ನವನ್ನು

ಇಡುವದು ಸರಿಯಲ್ಲವೆಂದು ನನಗೆ ತೋರಿ, ನನ್ನ ಹತ್ತರ ಇರುವ ಕದಂಬರ ದೊಂದು ತಾಮ್ರಶಾಸನವನ್ನು ಅವರ ಕಡೆಗೆ ಕಳುಹಿಸಿ, ಆದರ ಮೇಲಿನ ಸಿಂಹದ ಚಿತ್ರವನ್ನು, ಆದಷ್ಟುಮಟ್ಟಿಗೆ ಅನುಸರಿಸಬಹುದೆಂದು ಹೇಳಿದೆ. ಆ ಬಗ್ಗೆ ಅವರಿಗೂ ನನಗೂ ಮಾತು-ಕಥೆಗಳಾದವು. ಅವರು ನನ್ನ ಮಾತಿಗೆ ಒಪ್ಪಿ, ಈಗಿರುವ ಕರ್ನಾಟಕ ಕಾಲೇಜಿನ ವಿಶಿಷ್ಟ ಚಿಹ್ನವನ್ನು ಸ್ವೀಕರಿಸಿರು ವರು. ನಾನು ಕಳಿಸಕೊಟ್ಟ ತಾಮ್ರಪಟವನ್ನು ತಮಗೆ ಮಾರಲಿಕ್ಕೆ ಕೊಡ ಬೇಕೆಂದು ಅವರು ನನ್ನನ್ನು ಕೇಳಿದರು, ಅದಕ್ಕೆ ನಾನು ಒಪ್ಪಲಿಲ್ಲ. ನಮ್ಮ ಐತಿಹಾಸಿಕ ವಸ್ತುಗಳು ನಮ್ಮ ಹತ್ತಿರವೇ ಇರಬೇಕೆಂದು ನನ್ನ ಮತ. ಆ ತಾಮ್ರಪಟವನ್ನು ಹಲಸಗಿಯಿಂದ ತಂದಿದ್ದೆ. ತಿರುಗಿ ಅಲ್ಲಿಗೆ ಕಳಿಸಿ ಬಿಟ್ಟೆ.

**ಏಕೀಕರಣಕ್ಕಾಗಿ ಪ್ರಥಮ ಪ್ರಯತ್ನ** :— 'ಕರ್ನಾಟಕ ಸಭೆ' ಹೊರಟಾಗಿನಿಂದಲೇ ನಿಜವಾದ ಕರ್ನಾಟಕತ್ವದ ಪ್ರಚಾರಕ್ಕೆ ಪ್ರಾರಂಭ ವಾಯಿತು. ಅದು ಎಲ್ಲಕ್ಕೂ ಮುಂಚೆ ಕೈಕೊಂಡ ಮುಖ್ಯ ಚಟುವಟಿಕೆಯೆಂದರೆ ಕರ್ನಾಟಕ ಏಕೀಕರಣದ ಬಗ್ಗೆ ಸರಕಾರಕ್ಕೆ ಪ್ರಚಂಡ ಅರ್ಜಿಯನ್ನು ಕಳಿಸುವದು. ಇದನ್ನು ಮುಖ್ಯತಃ ಮಾಡಿದವರು ಕಡಪಾ ರಾಘವೇಂದ್ರರಾಯರು. ಸುಮಾರು ಒಂದು ಲಕ್ಷ ಕನ್ನಡಿಗರ ಸಹಿಗಳನ್ನು ಕೂಡಿಸಿ, ಕನಾಟಕಕ್ಕೆ ಬೇರೆ ಪ್ರಾಂತ ವನ್ನು ಮಾಡಿ ಕೊಡುವುದಕ್ಕೆ ಸರಕಾರಕ್ಕೆ, ಅರ್ಜಿಯನ್ನು ಸಲ್ಲಿಸುವ ಕಾರ್ಯ ವೇನೂ ಸಾಮಾನ್ಯವಲ್ಲ. ಅದನ್ನು ಕಡಪಾ ರಾಘವೇಂದ್ರರಾಯರು ಅತ್ಯಂತ ಪರಿಶ್ರಮದಿಂದ ಜರುಗಿಸಿದರು. ಆ ಬಳಿಕ ನನ್ನ ಮನಸ್ಸಿನಲ್ಲಿ ಅಖಂಡ ಕರ್ನಾಟಕಕ್ಕಾಗಿ ಒಂದು ಅತಿ ದೊಡ್ಡ ರಾಷ್ಟ್ರೀಯ ಪರಿಷತ್ತನ್ನೇ ಕೂಡಿಸುವ ವಿಚಾರ ಹೊಳೆಯಿತು. ಅದರಲ್ಲಿ, ಅಖಂಡ ಕರ್ನಾಟಕಕ್ಕೆ ಸಂಬಂಧಿಸಿದ ಸರ್ವವಿಧ ವಿಷಯಗಳ ಬಗ್ಗೆ ವಿಚಾರ-ವಿನಿಮಯಮಾಡಿ ಗೊತ್ತುವಳಿಗಳನ್ನು ಸ್ವೀಕರಿಸುವುದೂ, ಮುಂದೆ ಆ ಬಗ್ಗೆ ಕಾರ್ಯಪ್ರವೃತ್ತರಾಗುವುದೂ ಅದರ ಮುಖ್ಯ ಉದ್ದೇಶವಾಗಿತ್ತು. ಆಗಿನ ಕಾಲದಲ್ಲಿ, ಶ್ರೀ. ಹಳಕಟ್ಟಿ, ಶ್ರೀ. ಜಂಗಿನ ಮುರಿಗೆಯ್ಯನವರೇ ಮುಂತಾದ ಬ್ರಾಹ್ಮಣೇತರರಷ್ಟೇ ನಮಗೆ ಅನುಕೂಲ. ಸಾಮಾನ್ಯತಃ ಇಲ್ಲಿಯ ಬ್ರಾಹ್ಮಣೇತರರು ನಮಗೆ ಅನುಕೂಲರಾಗಿದ್ದಿಲ್ಲ. ಏಕೆಂದರೆ, ಆಗ ಸರಕಾರದವರ ಮರ್ಜಿ ಹಿಡಿಯುವದರಲ್ಲಿಯೇ ಅವರಿಗೆ

ಲಾಭವಿತ್ತು. ಆದರೂ ನಾವು ಧೈರ್ಯದಿಂದ ಅಂಥ ರಾಷ್ಟ್ರೀಯ ಪರಿಷತ್ತನ್ನು ೧೯೨೦ರಲ್ಲಿ ಕೂಡಿಸಿದೆವು. ಆ ಪರಿಷತ್ತಿನಲ್ಲಿ ಕೆಲ ಬ್ರಾಹ್ಮಣೇತರರು ಕರ್ನಾಟಕ ಏಕೀಕರಣದ ಗೊತ್ತುವಳಿಗೆ ವಿರುದ್ಧವಾಗಿ ಗೊತ್ತುವಳಿಯನ್ನೂ ತಂದಿದ್ದರು. ಆದರೆ ಪ್ರಚಂಡ ಬಹುಮತದಿಂದ ಕರ್ನಾಟಕ ಏಕೀಕರಣದ ಮುಖ್ಯ ಚಳವಳಿಯು ಮಂಜೂರಾಯಿತು. ಮುಂದೆ ಅನೇಕ ವರ್ಷ, ಬ್ರಾಹ್ಮಣೇತರರು ಏಕೀಕರಣಕ್ಕೆ ವಿರುದ್ಧವಾಗಿಯೇ ಇದ್ದರು. ಆದರೆ ಮುಂದೆ ರಾಜಕೀಯ ಸ್ಥಿತಿಯು ಬದಲಾಗುತ್ತ ಹೋಗಿ, ಸ್ವರಾಜ್ಯವು ಹೆಚ್ಚು ಹೆಚ್ಚು ಸಮೀಪಕ್ಕೆ ಬಂದಂತೆ, ಪ್ರಜಾರಾಜ್ಯದಲ್ಲಿ ಕರ್ನಾಟಕತ್ವಕ್ಕೆ ಪುಷ್ಟಿ ಕೊಡುವುದರಲ್ಲಿಯೇ ತಮಗೆ ಲಾಭವಿದೆಯೆಂಬುದನ್ನು ಅವರು ಮನಗಂಡದ್ದರಿಂದ ಅವರ ವಿರೋಧವು ತಾನಾಗಿಯೇ ಕರಗಿ ಹೋಯಿತು. ಬ್ರಾಹ್ಮಣರಿಗೆ ವಸ್ತುತಃ ಕರ್ನಾಟಕತ್ವದಿಂದ ವಿಶೇಷ ಲಾಭವಿದ್ದಿಲ್ಲ, ಲಾಭವಿಲ್ಲ. ಮತ್ತು ಮುಂಚೆ ನನಗೆ ಕೆಲವರು ಆ ಪ್ರಶ್ನೆಯನ್ನು ಕೇಳಿಯೂ ಇದ್ದರು. ಏನೆಂದರೆ, ನೀವು ಬ್ರಾಹ್ಮಣತ್ವದಲ್ಲಿ ವಿಶ್ವಾಸ ಇದ್ದವರು. ಹೀಗಿದ್ದು ಈ ಚಳವಳಿಯನ್ನು ನೀವೇ ಏಕೆ ಹುಟ್ಟಿಸಿದಿರಿ ಎಂದು ಕೇಳಿದರು. ಅದಕ್ಕೆ ಅಹುದು, ನಾನು ಬ್ರಾಹ್ಮಣತ್ವದ ಅಭಿಮಾನಿಯೂ ಹೌದು. ಆದರೆ ಆ ಕಾರಣದಿಂದ ಇಡೀ ಕರ್ನಾಟಕಕ್ಕೇನೇ ಹಿತವಾಗುವಂಥ ಚಳವಳಿಗೆ ಅಡ್ಡ ಬರುವದು ನನ್ನ ಕರ್ತವ್ಯವಲ್ಲ. ಇಷ್ಟೇ ಅಲ್ಲ, ತಿಳಿದವರಾದ ನಾವೇ ಅದನ್ನು ಪುರಸ್ಕರಿಸಬೇಕೆಂದು ಹೇಳಿದ್ದೆ. ಕರ್ನಾಟಕದ ವ್ಯಾಪಾರವೆಲ್ಲ ಪರಕೀಯರ ಕೈಯಲ್ಲಿ ಹೋಗಹತ್ತಿರುವದೆಂಬುದರ ಅರಿವು ಜಂಗಿನ ಮುರಿಗೆಯ್ಯನವರಿಗೆ ಆಗಿ, ಅವರೂ ಮಂಗಳವೇಢೆ ಶ್ರೀನಿ-ವಾಸರಾಯರೂ ಕೂಡಿ ವಣಿಕ್ ಸಂಘವನ್ನು ಸ್ಥಾಪಿಸಿದರು. ಮುರಿಗೆಯ್ಯನವರು ಎಂದಿಗೂ ಕರ್ನಾಟಕ ಚಳವಳಿಯ ಕಟ್ಟಭಿಮಾನಿಗಳು.

**ಅಖಿಲ ಕರ್ನಾಟಕ ರಾಷ್ಟ್ರೀಯ ಪರಿಷತ್ತು** :— ೧೯೨೦ನೆಯ ಇಸವಿಯಲ್ಲಿ ನಾನು ಧಾರವಾಡದಲ್ಲಿ ಮೈಸೂರಿನ ನಿವೃತ್ತ ದಿವಾಣರಾದ ವ್ಹಿ. ಪಿ. ಮಾಧವರಾಯರ ಅಧ್ಯಕ್ಷತೆಯಲ್ಲಿ ಕೂಡಿಸಿದ ಅಖಿಲ ಕರ್ನಾಟಕ ರಾಷ್ಟ್ರೀಯ ಪರಿಷತ್ತೇ ಈ ವಿಷಯದ ನನ್ನ ಪ್ರಯತ್ನದ ಕಳಸ. ಆ ಪರಿಷತ್ತಿಗೆ ಸುಮಾರು ೨೦೦೦ ಪ್ರತಿನಿಧಿಗಳು ಕೂಡಿದ್ದರು. ಕರ್ನಾಟಕದ ಹಿತಕ್ಕೆ ಸಂಬಂಧಪಟ್ಟ ಯಚ್ಚಾವತ್ ವಿಷಯಗಳು ಚರ್ಚಿಸಲ್ಪಟ್ಟವು. ರಾಜಕಾರಣ,

ವಾಙ್ಮಯ, ವ್ಯಾಪಾರ, ವೃತ್ತಪತ್ರಗಳ ಬೆಳವಣಿಗೆ, ಕರ್ನಾಟಕದಲ್ಲಿಯ ರೇಲ್ವೆಗಳ ತೊಂದರೆ, ಪೋಸ್ಟುಗಳ ತೊಂದರೆ, ಬಂದರ ಇವೇ ಮುಂತಾದ ಯಾವತ್ತೂ ವಿಷಯುಗಳ ಬಗ್ಗೆ ಚರ್ಚಿಸಿವೆವು. ಕರ್ನಾಟಕಕ್ಕೆ ಬೇಕಾದ ನೀರುಕಾಲುವೆ, ಹಾಯಕೋರ್ಟು, ವಿಶ್ವವಿದ್ಯಾಲಯ, ಮೋಟರಿನ ಅನಾನುಕೂಲತೆಗಳು, ರಸ್ತೆಗಳು, ಸೇತುವೆಗಳು, ಆಂಧ್ರ-ಮರಾಠರ ಆಕ್ರಮಣ, ಕನ್ನಡ ಶಾಲೆಗಳು, ವಿವಿಧ ಕಾಲೇಜುಗಳು, ಗಡಿನಾಡಿನ ಜಾಗ್ರತಿ, ಕರ್ನಾಟಕ ಸಂಗೀತ ಮತ್ತು ಕಲೆಗಳು, ನಾಟಕ, ಸಿನೇಮಾ ಮುಂತಾದವುಗಳ ಪ್ರಶ್ನೆ, ವಾಚನಾಲಯುಗಳು, ಒಳನುಡಿಗಳ ಪ್ರಶ್ನೆ, ಗಡಿನುಡಿಗಳ ಪ್ರಶ್ನೆ, ಹಿಂದಿ–ಸಂಸ್ಕೃತ ಮುಂತಾದವುಗಳ ಪ್ರಶ್ನೆ, ಕರ್ನಾಟಕಸ್ಥರ ಸಂಘಗಳು ( ಕೇವಲ ಕನ್ನಡ ಸಂಘಗಳಲ್ಲ ), ಪಟ್ಟಣ-ಹಳ್ಳಿಗಳ ರಚನೆ ಇವೇ ಮುಂತಾದ ಅಖಿಲ ಕರ್ನಾಟಕ ದೃಷ್ಟಿಯಿಂದ ಬಿಡಿಸತಕ್ಕ ನೂರಾರು ಪ್ರಶ್ನೆಗಳು, ಕೇಳುವವರು ದಿಕ್ಕಿಲ್ಲದೆ ಕೊಳೆಯುತ್ತ ಬಿದ್ದಿದ್ದವು. ಅವನ್ನು ಸಾಕ್ಷಾತ್ತಾಗಿ ಬಿಡಿಸಲಿಕ್ಕೆ ಒಂದೂ ಸಂಸ್ಥೆ ಆಗ ಇದ್ದಿಲ್ಲ; ಈಗಲೂ ಇಲ್ಲ. **ಇಂಥದೊಂದು ಸರ್ವವ್ಯಾಪಿ ಬೃಹತ್ ಸಂಸ್ಥೆಯ ನಿರ್ಮಾಣದ ವಿಚಾರವನ್ನು ಈಗಿನ ಮುಖಂಡರು ತೀವ್ರವೇ ಮಾಡಬೇಕೆಂದು ಅವರಿಗೆ ನನ್ನ ಅಗತ್ಯದ ಸೂಚನೆ.** ೧೯೨೦ನೆಯ ಇಸವಿಯಲ್ಲಿ ನಾನು ಕೂಡಿಸಿದ ಆ ದೊಡ್ಡ ಸಮ್ಮೇಲನವು ಇಂಥ ಬೃಹತ್‌ಸಂಸ್ಥೆಗೆ ತಳಹದಿ. ಇಂಥ ಪರಿಷತ್ತುಗಳನ್ನು ಪ್ರತಿ ವರುಷ ಕೂಡಿಸಬೇಕೆಂದೂ ಅದಕ್ಕೋಸ್ಕರ ಒಂದು ದೊಡ್ಡ ಶಾಸ್ವತ ಸಂಸ್ಥೆಯನ್ನು ಸ್ಥಾಪಿಸಬೇಕೆಂದೂ ನನ್ನ ಮನಸ್ಸಿನಲ್ಲಿತ್ತು. ಆದರೆ ಮುಂದೆ ತೀವ್ರವೇ ಅಸಹಕಾರ ಚಳವಳಿಯು ಪ್ರಾರಂಭವಾಯಿತು. ಸ್ವಾತಂತ್ರ್ಯಪ್ರಾಪ್ತಿ ಎಂಬ ಅಗತ್ಯದ ಧ್ಯೇಯಕ್ಕಾಗಿ ನಾನು ಅಸಹಕಾರ ಚಳವಳಿಯಲ್ಲಿ ಧುಮುಕಿದೆ; ಧುಮುಕಿದ್ದೇ ವಿಹಿತವು. ಆಗ ಈ ಕರ್ನಾಟಕ ಪ್ರಶ್ನೆ ಹಿಂದೆ ಬಿದ್ದಿತು. ಅಖಿಲ ಕರ್ನಾಟಕ 'ರಾಜಕೀಯ' ಪರಿಷತ್ತುಗಳು ಕೂಡಹತ್ತಿದವು. ಅವು ಕೇವಲ ರಾಜಕೀಯ. ಆಗ, ಸ್ವಾಭಾವಿಕವಾಗಿಯೇ ದೇಶದ ಆಗಿನ ಕಾಲದ ಹೆಚ್ಚಿನ ಅಗತ್ಯದ ಅಸಹಕಾರ ಚಳವಳಿಯನ್ನು ನಾನೂ ನನ್ನ ಮಿತ್ರರೂ ಕೈಕೊಂಡದ್ದರಿಂದ, ಈ ಕುದುರೆಯನ್ನು ಬಿಟ್ಟುಕೊಟ್ಟು ಆ ಕುದುರೆಯನ್ನೇರಬೇಕಾಯಿತು, ಏರಿದೆ. ಸಾಂಸ್ಕೃತಿಕ ಮತ್ತು ರಾಜಕೀಯ ಮುಂತಾದ ಯಾವತ್ತೂ ತರಹದ ಪ್ರಶ್ನೆಗಳನ್ನು ಚರ್ಚಿಸುವ ಈ ಪರಿಷತ್ತಿನಂಥ ಅಂದರೆ

೧೯೨೦ನೆಯ ಇಸ್ವಿಯ ಪರಿಷತ್ತಿನಂಥ ಪರಿಷತ್ತುಗಳನ್ನು ಕೂಡಿಸುವದಾಗಲಿಲ್ಲ. ಇದು ವರೆಗೆ ಆಗಿಲ್ಲ. ಸುದೈವದಿಂದ ನಮ್ಮ ಧ್ಯೇಯಗಳಾದ ಸ್ವಾತಂತ್ರ್ಯವು ಲಭಿಸಿದೆ; ಮತ್ತು ಕರ್ನಾಟಕ ರಾಜ್ಯನಿರ್ಮಾಣವೂ ಆಗಿದೆ. ಆದ ಕಾರಣ ಕರ್ನಾಟಕದ ಸರ್ವತೋಮುಖ ಅಭಿವೃದ್ಧಿಯಾಗುವದಕ್ಕೆ ಕಾರಣವಾಗುವ ಇಂಥದೊಂದು ಜನತಾ ಸಂಸ್ಥೆಯನ್ನು ಹೊರಡಿಸುವದಕ್ಕೆ ಇದೇ ಸುಸಂಧಿಯಲ್ಲವೇ? ಇರಲಿ.

೧೯೨೦ನೆಯ ಇಸವಿಯಲ್ಲಿ ನಾನು ಕೂಡಿಸಿದ ಈ ಸಂಸ್ಥೆಗೆ ನಾವು ವ್ಹಿ. ಪಿ. ಮಾಧವರಾಯರನ್ನು ಆರಿಸಿದೆವು. ನನ್ನ ದೃಷ್ಟಿಯಲ್ಲಿ, ವ್ಹಿ. ಪಿ. ಮಾಧವರಾಯರಷ್ಟು ವಿಶಾಲವಾದ ಮತ್ತು ತೀಕ್ಷ್ಣವಾದ ದೃಷ್ಟಿಯುಳ್ಳ ಕರ್ನಾಟಕದ ಧುರೀಣರನ್ನು ನಾನು ಈ ವರೆಗೆ ಕಂಡಿಲ್ಲ. ಅತ್ಯಂತ ಪ್ರಸಿದ್ಧಿ ಹೊಂದಿದ ದಿವಾನ ವಿಶ್ವೇಶ್ವರಯ್ಯನವರಿಗೂ ಕೂಡ ಕರ್ನಾಟಕತ್ವದ ನಿಜವಾದ ವ್ಯಾಪಕ ದೃಷ್ಟಿಯು (ದಯಮಾಡಿ ಈ ನನ್ನ ಉದ್ಧಟತನಕ್ಕಾಗಿ ಅವರು ನನ್ನನ್ನು ಕ್ಷಮಿಸಬೇಕು) ಬರಲಿಲ್ಲ, ಇನ್ನೂ ಬಂದಿಲ್ಲ, ಎಂಬುದು ದುಃಖದ ಸಂಗತಿ. ವಸ್ತುತಃ ವ್ಹಿ. ಪಿ. ಮಾಧವರಾಯರು ಸರಕಾರೀ ನವಕರಿಯಲ್ಲಿಯೇ ಜನ್ಮ ಕಳೆದವರು. ಕಾರಕೂನರಾಗಿ ಪ್ರಾರಂಭ ಮಾಡಿ, ಮೂರು ಸಂಸ್ಥಾನಗಳ (ಮೈಸೂರು, ತ್ರಾವಣಕೋರ, ಬಡೋದೆ) ದಿವಾಣಗಿರಿಗೆ ಏರಿದವರು. ಅವರು ಕರ್ನಾಟಕ ಚಳವಳಿಯಲ್ಲಿ ಎಂದೂ ಇಲ್ಲದವರು. ಆದರೆ ಈ ರಾಷ್ಟ್ರೀಯ ಪರಿಷತ್ತಿನ ಕಾರ್ಯದರ್ಶಿಯೆಂದು ನಾನು ಅವರಿಗೆ ಭೆಟ್ಟಿಯಾಗಿ ಕರ್ನಾಟಕ ಚಳವಳಿಯ ಉದ್ದೇಶವನ್ನೂ ಧ್ಯೇಯವನ್ನೂ ಅವರಿಗೆ ತಿಳಿಸಿ ಹೇಳಿದಾಗ ಅವರು ಅರ್ಧ ಗಂಟೆಯಲ್ಲಿ ಅದನ್ನು ಗ್ರಹಿಸಿ, ನಮಗೂ ಕೂಡ ತಿಳಿಯದಿರದಷ್ಟು ವ್ಯಾಪಕದೃಷ್ಟಿಯಿಂದ ತಮ್ಮ ಅಧ್ಯಕ್ಷ ಭಾಷಣದಲ್ಲಿ ಅದರ ವಿವೇಚನೆ ಮಾಡಿದರು. ಮೂರು ಸಂಸ್ಥಾನಗಳ ದಿವಾಣರಾಗಿದ್ದರೂ ಇಡೀ ಹಿಂದುಸ್ತಾನದ ಸ್ವಾತಂತ್ರ್ಯಕ್ಕಾಗಿ ಹೋಮರೂಲ ಲೀಗಿನ ಪ್ರತಿನಿಧಿಗಳಾಗಿದ್ದರೂ ಕರ್ನಾಟಕತ್ವದಂಥ ಸಣ್ಣ ಪ್ರಶ್ನೆಯ ಪ್ರಚಾರ ಮಾಡುವದಕ್ಕೆ ಹಿಂದುಮುಂದೆ ನೋಡಲಿಲ್ಲ! ಏಕೆಂದರೆ ಆ ಪ್ರಶ್ನೆಯು ಕರ್ನಾಟಕಕ್ಕೆ ಸ್ವಾತಂತ್ರ್ಯ ಪ್ರಶ್ನೆಯಷ್ಟೇ ಅಖಂಡ ಕರ್ನಾಟಕದ ಅವರಿಗೆ ಕನ್ನಡಿಗರಿಗೆ ಮಹತ್ವದ್ದಾಗಿತ್ತೆಂಬುದರ ಅರಿವು ಇತ್ತು. ಅವರು ನನಗೆ ಆಗ ಒಂದು ಚಮತ್ಕಾರ ಸೂಚನೆಯನ್ನು ಮಾಡಿದ್ದು

ನೆನಪಿದೆ. "ಬೇರೆ ಬೇರೆ ಭಾಗಗಳಲ್ಲಿ, ಎಷ್ಟೇ ಚಿಕ್ಕವಾದರೂ ಸಭೆಗಳನ್ನು ಕರೆದು ನನ್ನನ್ನು ಅಧ್ಯಕ್ಷನನ್ನಾಗಿ ಮಾಡಿರಿ. ನಾನು ಬಂದು ಅಖಂಡ ಕರ್ನಾಟಕ ನಿರ್ಮಾಣದ ಗೊತ್ತುವಳಿಯನ್ನು ಅವರಿಂದ ಮಾಡಿಸಿ ಕೊಡುತ್ತೇನೆ." ಎಂಬುದೇ ಅವರ ಸೂಚನೆ. ಅಂಥ ದೊಡ್ಡ ಮನುಷ್ಯರು, ಅಂಥ ಸಣ್ಣ ಸಣ್ಣ ಸಭೆಗಳಿಗೆ ಅಧ್ಯಕ್ಷರಾಗಲಿಕ್ಕೆ ಒಪ್ಪಿದ್ದುದರಲ್ಲಿಯೇ ಅವರ ದೊಡ್ಡಸ್ತಿಕೆಯಿದೆ. ಆ ಪ್ರಕಾರ ಬಳ್ಳಾರಿ ಜಿಲ್ಲೆಯಂಥ ಒಂದು ಸಣ್ಣ ಜಿಲ್ಲೆಯ ರಾಜಕೀಯ ಪರಿಷತ್ತಿಗೆ ಅಧ್ಯಕ್ಷರಾಗಿ ಅಲ್ಲಿ ಕರ್ನಾಟಕ ಏಕೀಕರಣದ ಗೊತ್ತುವಳಿಯನ್ನು ಮಂಜೂರು ಮಾಡಿಸಿಕೊಂಡರು. ಮೈಸೂರಸಂಸ್ಥಾನದ ಬಗ್ಗೆ ಏನು ಮಾಡಬೇಕೆಂಬ ವಿವಂಚನೆ ನನಗೆ ಬಿತ್ತು. ಏಕೆಂದರೆ ಮೈಸೂರ ಸಂಸ್ಥಾನದಲ್ಲಿ ರಾಜಕಾರಣವು ಪ್ರವೇಶಿಸಲಿಕ್ಕೆ ಅವಕಾಶವಿರಲಿಲ್ಲ. ಬ್ಯಾ. ಸೆಟ್ಲೂರ ಎಂಬ ಮುಂಬಯಿ ಬ್ಯಾರಿಸ್ಟರರು ಮೈಸೂರಿನವರು. ಟಿಳಕರ ಜೀವದ ಗೆಳೆಯರು. ಅವರ ಸ್ನೇಹವು ನನಗಿತ್ತು. ಅವರೂ ಕರ್ನಾಟಕದ ಉಜ್ವಲ ಭಕ್ತರು. ಅವರ ಸಹಾಯವು ನನಗೆ ಸಿಗುವಂತಿತ್ತು. ಆದರೆ ಮೈಸೂರ ಜನತೆಯ ಕಡೆಗೆ ಹೋಗುವದು ಹೇಗೆ? ಆಗ ವ್ಹಿ. ಪಿ. ಮಾಧವರಾಯರು ನನಗೆ ಒಂದು ಯುಕ್ತಿಯನ್ನು ಸೂಚಿಸಿದರು. ಮೈಸೂರಿನವರು ಕೀರ್ತನ ಪ್ರೇಮಿಗಳು. ಆದ ಕಾರಣ ಆ ನೆವದಿಂದ ಬೆಂಗಳೂರಿನಲ್ಲಿ ಸಭೆ ಕೂಡಿಸಿರಿ. ಅಲ್ಲಿ ಕರ್ನಾಟಕ ಏಕೀಕರಣದ ಬಗ್ಗೆ ಗೊತ್ತುವಳಿಯನ್ನು ಮಂಜೂರ ಮಾಡಿಕೊಳ್ಳುವಾ ಎಂದು ಸೂಚಿಸಿದರು. ಕೊಪ್ಪಳ ಜಯರಾಮಾಚಾರ್ಯರು ಕಾರ್ಯದರ್ಶಿಯಾದರು. ಮಾಧವರಾಯರು ಅಧ್ಯಕ್ಷರು. ನಾನು ಉಪಾಧ್ಯಕ್ಷ. ಬೆಂಗಳೂರಿನಲ್ಲಿ ಸತತ ಏಳು ದಿವಸ ಬೇರೆ ಬೇರೆ ಭಾಗಗಳಿಂದ ಕೀರ್ತನಕಾರರನ್ನು ಕರೆಸಿದೆವು. ನಾನು ಕೀರ್ತನಕಾರರಿಗೆ ಒಂದು ಕರಾರು ಹಾಕಿದ್ದೆ. ಅದೆಂದರೆ ಪೂರ್ವರಂಗದಲ್ಲಿ ಅಧ್ಯಾತ್ಮವನ್ನು ಹೇಳಿ, ಉತ್ತರ ರಂಗದಲ್ಲಿ ದೇಶಸೇವೆಯನ್ನು ವಿವರಿಸಬೇಕು. ಹೀಗೆ ಈಶಸೇವೆ, ದೇಶಸೇವೆಯನ್ನು ಜೋಡಿಸಿ ಮಾಡುವ ಕೀರ್ತನಕಾರರೇ ಬರಬೇಕು ಎಂದು. ಏಳು ದಿವಸ ವಿಜೃಂಭಣೆಯಿಂದ ಕೀರ್ತನಗಳು ನಡೆದವು. ಪ್ರತಿಯೊಬ್ಬರೂ ಕರ್ನಾಟಕ ಏಕೀಕರಣದ ಮಹತ್ವವನ್ನು ವಿಧವಿಧವಾಗಿ ಬಣ್ಣಿಸಿ ಪ್ರಚಾರ ಮಾಡಿದರು! ಆಯಿತು! ನನ್ನ ಕಾರ್ಯ ಆಯಿತು! ವೇ. ಮುಳಗುಂದ ರಾಮಶಾಸ್ತ್ರಿಗಳಿಗೆ ಪ್ರಥಮ ಬಹುಮಾನವು ದೊರೆಯಿತು. ಕ್ರಿಶ್ಚನ್

ಪಾದ್ರಿಗಳು ಕೀರ್ತನ ಸಂಪ್ರದಾಯವನ್ನು ಕಲಿಯಲಿಕ್ಕೆಂದು ಬಂದದ್ದು ಈ ಕೀರ್ತನಗಳ ವೈಶಿಷ್ಟ್ಯ. ಈಗ ಅವರು ಆ ಸಂಪ್ರದಾಯವನ್ನು ಪೂರಾ ಎತ್ತಿಕೊಂಡು ತಮ್ಮ ಪ್ರಚಾರವನ್ನು ನಡೆಸಿದ್ದಾರೆ.

ಕರ್ನಾಟಕತ್ವದ ಚಳವಳಿಯನ್ನು ಮಾಡಬಹುದಾಗಿದ್ದ ನಮ್ಮ ಸಂಸ್ಥೆಗಳೆಂದರೆ (೧) ಕಾಂಗ್ರೆಸ್ಸು. (೨) ಪರಿಷತ್ತು. ಏಕತಂತ್ರ ಕರ್ನಾಟಕವು ಸ್ವತಂತ್ರ ಭಾರತದ ಹಿರಿಗನಸಿನೊಳಗಿನ ಒಂದು ಹೊಂಗನಸೆಂಬುವನ್ನು ಅವು ಒಪ್ಪುತ್ತವೆ. ಆದರೆ ಅವುಗಳ ಅಭಿಪ್ರಾಯವೇನೆಂದರೆ, ತತ್ವದ ದೃಷ್ಟಿಯಿಂದ ಕಾಂಗ್ರೆಸ್ಸು, ಭಾಷಾನುಗುಣ ಪ್ರಾಂತರಚನೆಯ ಆವಶ್ಯಕತೆ ಮತ್ತು ಅದರೊಂದಿಗೆ ಬರುವ ಕರ್ನಾಟಕದ ಪುನರ್ಘಟನೆ ಅಂದರೆ ಏಕೀಕರಣದ ಪ್ರಶ್ನೆಗಳನ್ನು ಮಾನ್ಯಮಾಡಿ ತನ್ನಮಟ್ಟಿಗೆ ಬಗೆಹರಿಸಿಬಿಟ್ಟಿದೆ ಎಂಬುದು. ಆದರೆ ಇದು ಸರಿಯಲ್ಲ. ಕೇವಲ ಆಶೀರ್ವಾದ ಮಾಡುವದಷ್ಟೇ ಅದರ ಕರ್ತವ್ಯವಾಗಿದ್ದಿಲ್ಲ. ಮಿಕ್ಕ ಪ್ರಶ್ನೆಗಳಂತೆಯೇ ಕರ್ನಾಟಕದ ಕಾಂಗ್ರೆಸ್ಸಿಗರು, ಇದ್ದ ಅಲ್ಪ ಸ್ವಲ್ಪ ವರ್ಚಸ್ಸನ್ನಾದರೂ ಉಪಯೋಗಿಸಬೇಕಾಗಿತ್ತೆಂದೂ ಇಲ್ಲಿಯ ಕಾಂಗ್ರೆಸ್ಸಿಗರು ಪ್ರತ್ಯಕ್ಷವಾಗಿ ಆ ಕಾರ್ಯ ಕಾಂಗ್ರೆಸ್ಸಿನ ಕಾರ್ಯದ ಭಾಗವೆಂದೇ ಕಾಂಗ್ರೆಸ್ಸಿಗನಾದ ನನ್ನ ಅಭಿಪ್ರಾಯವಾಗಿತ್ತು. ಆದರೆ ಅಲ್ಲಿ ನನ್ನ ಆಟ ನಡೆಯಲಿಲ್ಲ. ಆ ಬಗ್ಗೆ, ಆಗ ಹೀಗೆ ಬರೆದಿರುವೆ:—

(೧) ಗಡಿನಾಡುಗಳಲ್ಲಿ ಭಾಷಾಭಿಮಾನ ಮತ್ತು ಪ್ರಾಂತಾಭಿಮಾನ ಹುಟ್ಟಿಸುವದೇ ಮುಖ್ಯ ಕಾರ್ಯ. ಭಾಷಾಭಿಮಾನ ಹುಟ್ಟಿಸುವದು ಸಾಂಸ್ಕೃತಿಕ ಚಳವಳಿಗೆ ಸೇರಿದ್ದು. ಪ್ರಾಂತಾಭಿಮಾನ ಹುಟ್ಟಿಸುವದು ರಾಜಕೀಯ ಚಳವಳಿಗೆ ಸೇರಿದ್ದು.

(೨) ಪರಿಷತ್ತು ಸಾಂಸ್ಕೃತಿಕ ಚಳವಳಿಯ ಈಗಿನ ಮುಖ್ಯ ಪ್ರತಿನಿಧಿ. ಪ್ರಾಂತಿಕ ಕಾಂಗ್ರೆಸ ಕಮಿಟಿಯು ರಾಜಕೀಯ ಚಳವಳಿಯ ಮುಖ್ಯ ಪ್ರತಿನಿಧಿ. ಕರ್ನಾಟಕದಲ್ಲಿ ಬೇರೆ ಯಾವ ಪ್ರಬಲ ಸಂಗಡವೂ ಈಗ ಇರುವದಿಲ್ಲ. ಈ ಸಂಬಂಧದ ಮಿಕ್ಕೆರಡು ಸಂಸ್ಥೆಗಳು, ಕರ್ನಾಟಕ ವಿದ್ಯಾವರ್ಧಕ ಸಂಘ ಮತ್ತು ಕರ್ನಾಟಕ ಏಕೀಕರಣ ಸಂಘ. ವಿದ್ಯಾವರ್ಧಕ ಸಂಘವು ಇಷ್ಟು ದಿವಸ ಸಾಲದಲ್ಲಿ ಮುಳುಗಿತ್ತು. ಏಕೀಕರಣ ಸಂಘವು ಪಕ್ಷಾತೀತವಾಗಿಯೇ ಹೊರಟಿದೆ.

ಆದರೆ ಇನ್ನೂ ನಿರ್ಜೀವವಾಗಿಯೇ ಇದೆ. ಇತಿಹಾಸ ಮಂಡಳ, ವಣಿಕ್ ಮಂಡಳ ಮುಂತಾದವುಗಳು ಈ ಕಾರ್ಯವನ್ನು ಪ್ರತ್ಯಕ್ಷವಾಗಿಯೇ ಮಾಡ ಬಲ್ಲವು. ಈ ೩೦ ವರ್ಷಗಳಲ್ಲಿ ಗಡಿನಾಡಿನ ಪ್ರಶ್ನೆಯು ತಮ್ಮದೇ ಮುಖ್ಯ ಪ್ರಶ್ನೆಗಳಲ್ಲೊಂದು ಎಂಬ ಭಾವನೆಯಿಂದ ಸತತವಾಗಿ ಬಹುಶಃ ಯಾವ ಸಂಸ್ಥೆಯೂ ಕೆಲಸ ಮಾಡಿಲ್ಲವೆಂದು ನಾನು ಧೈರ್ಯದಿಂದ ಹೇಳಬಲ್ಲೆ. ಆದರೆ ಹೋಗಲಿ, ಈಗಲಾದರೂ ಅದನ್ನು ಕೈಕೊಂಡರೆ ಸಾಕು.

( ೩ ) ಮೇಲ್ಕಾಣಿಸಿದ ಸಂಸ್ಥೆಗಳಿಗಷ್ಟೇ ಆ ಕಾರ್ಯವು ಗುತ್ತಿಗೆ ಹಾಕಿ ಕೊಟ್ಟಿದೆಯೆಂತಲ್ಲ. ಎಲ್ಲ ಸಂಸ್ಥೆಗಳೂ ಎಲ್ಲ ವ್ಯಕ್ತಿಗಳೂ ಕೂಡ ಮಾಡ ಬಹುದು. ಆದರೆ ಅವರಿಂದ ಆ ಕಾರ್ಯವು ತೃಪ್ತಿಕರವಾಗಿ ಜರುಗಲಾರದು. ಕರ್ನಾಟಕದ ಯಾವತ್ತೂ ಬಗೆಯ ಪ್ರಶ್ನೆಗಳನ್ನು ಕುರಿತು ಯಾವತ್ತು ಕನ್ನಡಿ ಗರು ಒಟ್ಟುಗೂಡಿ ವಿಚಾರ ಮಾಡುವದಕ್ಕಾಗಿಯೇ ನಾನು ೧೯೨೦ರಲ್ಲಿ ದಿ. ಬಾ. ವ್ಹಿ. ಪಿ ಮಾಧವರಾಯರ ಅಧ್ಯಕ್ಷತೆಯಲ್ಲಿ ಅಖಿಲ ಕರ್ನಾಟಕ ಪರಿ ಷತ್ತನ್ನು ಕೂಡಿಸಿದ್ದು. ಆ ಬಳಿಕ ಇನ್ನೂ ವರೆಗೆ ಕೂಡಿಲ್ಲ. ಕೂಡಿದರೆ ಲೇಸು. ಇದು ನಮ್ಮ ಕೆಲಸವೆಂಬ ಭಾವನೆಯೇ ಸರ್ವರಲ್ಲಿ ಬೆಳೆಯಲಿ. ಇದು ನಮ್ಮ ಕೆಲಸವಲ್ಲವೆಂಬ ಭಾವನೆ ಯಾವ ವ್ಯಕ್ತಿಗೂ ಯಾವ ಸಂಸ್ಥೆಗೂ ಹುಟ್ಟದಿರಲಿ

ಇದರಿಂದ ಈ ವಿಷಯದಲ್ಲಿ ಆಗ ನನ್ನ ಅಭಿಪ್ರಾಯ ಏನು ಇತ್ತೆಂಬುದು ಸ್ಪಷ್ಟವಾಗಿದೆ.

**ಉದಕಮಂಡಿನ ಪ್ರವಾಸ ಮತ್ತು ಅದರ ಉದ್ದೇಶ**:– ೧೯೨೪ ರಲ್ಲಿ ಕೋಲಾರದಲ್ಲಿ ಕೂಡಿದ ಸಾಹಿತ್ಯ ಸಮ್ಮೇಲನಕ್ಕೆ ಕೃಷ್ಣಶಾಸ್ತ್ರಿಗಳು ಅಧ್ಯ ಕ್ಷರು. ಇವರು ಇಡೀ ಹಿಂದುಸ್ತಾನದ ಶಿಲಾಲಿಪಿ ಖಾತೆಗೆ ಅಧ್ಯಕ್ಷರು. ಅವರಿಗೆ ಕರ್ನಾಟಕ ಇತಿಹಾಸದ ಬಗ್ಗೆ ನೀವು ಏನೂ ಪ್ರಯತ್ನ ಮಾಡಲಿಲ್ಲವಲ್ಲ! ಮಾಡಿರಿ ಎಂದು ಬೆನ್ನುಹತ್ತಿದೆ. ಅವರ ಕಚೇರಿ ಉದಕಮಂಡಲದಲ್ಲಿ. ನಾನೂ ಮಂಗಳವೇಡೆ ಶ್ರೀನಿವಾಸರಾಯರೂ ೧೯೨೪ರಲ್ಲಿ ಅಲ್ಲಿಗೆ ಹೋದೆವು. ಏಳೆಂಟು ದಿವಸ ಇದ್ದು ಅವರಿಗೆ ಕರ್ನಾಟಕ ಇತಿಹಾಸದಲ್ಲಿ ಮನಸ್ಸು ಹಾಕ ಲಿಕ್ಕೆ ಮನವೊಲಿಸಿದೆವು. ಎಪಿಗ್ರಾಫಿಯಾ ಡಿಪಾರ್ಟಮೆಂಟಿನ ವತಿಯಿಂದ ಇಡೀ ಕರ್ನಾಟಕದಲ್ಲಿ ಪ್ರತಿಯೊಂದು ಹಳ್ಳಿಯಲ್ಲಿ ಎಷ್ಟು ಶಿಲಾಲಿಪಿ ಇರುತ್ತ

ವೆಂಬುದನ್ನು ಸರ್ವೆ ಮಾಡಿಸಿ ಅವುಗಳ ಮುದ್ರೆಯನ್ನು ತಕ್ಕೊಳ್ಳಬೇಕೆಂದೂ ಒಬ್ಬನಾದರೂ ಕನ್ನಡಿಗನನ್ನು ಆ ಖಾತೆಯಲ್ಲಿ ಸೇರಿಸಿಕೊಳ್ಳಬೇಕೆಂದೂ ಅವರಿಗೆ ಸೂಚಿಸಿದೆ. ಅವರು ತೀವ್ರವೇ ಪೆನಶನ್ ಮೇಲೆ ಹೋಗತಕ್ಕವರಿದ್ದರು. ಅದರೊಳಗಾಗಿ ಇವೆರಡು ಕಾರ್ಯ ಮಾಡಬೇಕೆಂದು ಅವರಿಗೆ ಪುನಃ ಪತ್ರಗಳ ಮುಖಾಂತರ ಒತ್ತಾಯಪಡಿಸಿದೆ. ಆ ಪ್ರಕಾರ ಅವರು ಮುಂದೆ ನನಗೆ ತಂತಿಯನ್ನು ಕಳಿಸಿ, ಯಾವನೊಬ್ಬ ಕನ್ನಡಿಗನನ್ನು ಆ ಖಾತೇಕ್ಕೆ ಕಳಿಸಲಿಕ್ಕೆ ಹೇಳಿದರು. ನಾನು ನಮ್ಮ ಹತ್ತಿರದ ಊರಿನವರಾಗಿದ್ದ ಶ್ರೀ. ಪಂಚಮುಖಿ ರಾಘವೇಂದ್ರಾಚಾರ್ಯರನ್ನು (ಅವರು ಮುಂದೆ ಧಾರವಾಡದಲ್ಲಿ ಕನ್ನಡ ಸಂಶೋಧನ ಸಮಿತಿಯ ಡಾಯರೆಕ್ಟರರಾಗಿದ್ದು ಈಗ ನಿವೃತ್ತರಾಗಿರುವರು.) ಕಳಿಸುವೆನೆಂದು ತಿಳಿಸಿದೆ. ಆ ಮೇರೆಗೆ ಅವರನ್ನು ನೇಮಿಸಿಕೊಂಡರು. ಮತ್ತು ಶಿಲಾಲಿಪಿಗಳ ಸರ್ವೆ ಪ್ರಾರಂಭ ಮಾಡುವದಕ್ಕಾಗಿ ಒಂದು ಸ್ಕೀಮು ತಯಾರಿಸಿದರು. ಅವರಿಗೆ ಮುಂಚೆ ನಾನು ಇದ್ದ ಸ್ಥಳಕ್ಕೇನೇ ಅಂದರೆ ಧಾರವಾಡಕ್ಕೇನೇ ಒಬ್ಬರನ್ನು ಕಳಿಸಲು ಹೇಳಿದೆ. ಆ ಖಾತೆಯ ಶ್ರೀ. ಲಕ್ಷ್ಮೀನಾರಾಯಣರಾಯರನ್ನು ತಿಂಗಳೊಪ್ಪತ್ತು ಮನೆಯಲ್ಲಿಟ್ಟುಕೊಂಡೆ. ಧಾರವಾಡ ತಾಲೂಕಿನಿಂದಲೇ ಸರ್ವೆ ಪ್ರಾರಂಭ ಮಾಡಿಸಿದೆ. ಆ ಕಾರ್ಯ ತಪ್ಪದೇ ಮುಂದುವರೆದಿದೆ. ನಾನೇ ಕರ್ನಾಟಕ ಇತಿಹಾಸ ಬರೆಯಲಿಕ್ಕೆ ಪ್ರಯತ್ನಪಟ್ಟೆ. ಶಿರಹಟ್ಟಿಯ ಅಶ್ವತ್ಥರಾವ ಮಹಿಷಿ ಮತ್ತು ರಾಮರಾವ ಮುಂಗಸೂಳಿ ಇವರು ಒಬ್ಬೊಬ್ಬರು ಒಂದು ನೂರು ರೂಪಾಯಿ ನನ್ನ ಮೇಲಿನ ಪ್ರೇಮಾದರದ ಮೂಲಕ ನನಗೆ ಕೊಟ್ಟಿದ್ದರು. ಆ ಹಣದಿಂದ ಬೆಂಗಳೂರು ಮುಂತಾದ ಸ್ಥಳಗಳಿಗೆ ಹೋಗಿ ಮಾಹಿತಿ ಸಂಗ್ರಹಿಸಿದೆ. ಅನೇಕ ಶಿಲಾಲಿಪಿಗಳನ್ನು ಕೂಡಿಹಾಕಿದೆ. ಅಷ್ಟರಲ್ಲಿ ಶ್ರೀ. ಪಂಚಮುಖಿಯವರು ಆ ಕಾರ್ಯ ಮಾಡುತ್ತಾರೆಂದು ತಿಳಿದ ಕಾರಣ ಅವರಿಗೆ ಆ ಕಾರ್ಯ ಮಾಡಲು ಹೆಚ್ಚು ಅನುಕೂಲತೆಗಳು ಇದ್ದದರಿಂದ ನನ್ನ ಕೆಲಸ ನಿಲ್ಲಿಸಿದೆ. ಮುಂದೆ ೧೯೩೩ರಲ್ಲಿ ಇತಿಹಾಸ ಮಂಡಳವು ಹಿಂದುಸ್ತಾನದ ಆರ್ಕಿಯಾಲಾಜಿಕಲ್ ಖಾತೆಯ ಡಾಯರೆಕ್ಟರರಾದ ಕೆ. ಎನ್. ದೀಕ್ಷಿತ ಇವರಿಂದ ನನ್ನ ಭಾವಚಿತ್ರದ ಅನಾವರಣ ಸಮಾರಂಭ ಮಾಡಿಸಿದ ಕಾಲಕ್ಕೆ, ನಾನು ಅಲ್ಲಿಯ ವರೆಗೆ ತಯಾರಿಸಿದ ಐತಿಹಾಸಿಕ ಟಿಪ್ಪಣಿಯ ಹತ್ತೆಂಟು ಪುಸ್ತಕಗಳನ್ನು ಇಲ್ಲಿಯ ಇತಿಹಾಸ ಮಂಡಳದ ವಶಕ್ಕೆ ಕೊಟ್ಟಿರುವೆ.

**ವಿಜಯನಗರ ಸ್ಮಾರಕೋತ್ಸವ:**— ೧೯೩೬ನೆಯ ಇಸವಿಯ ಡಿಶಂಬರ ೨೫–೨೬–೨೭ ಮತ್ತು ೨೮ನೆಯ ತಾರೀಖುಗಳಲ್ಲಿ ಹಂಪಿ ಅಥವಾ ವಿಜಯನಗರದಲ್ಲಿ ವಿಜಯನಗರ ಸಾಮ್ರಾಜ್ಯವು ಹುಟ್ಟಿ ೬೦೦ ವರ್ಷಗಳು ಆದುದರಿಂದ ಆ ಸಾಮ್ರಾಜ್ಯದ ಷಟ್‌ಶತ ಸಾಂವತ್ಸರಿಕ ಸ್ಮಾರಕೋತ್ಸವವು ಅತ್ಯಂತ ವಿಜೃಂಭಣೆಯಿಂದ ಯಶಸ್ವಿಯಾಗಿ ಕೊನೆಗಂಡಿತು. ಇದೇ ನಾನು ನನ್ನ ಇತಿಹಾಸ ಕ್ಷೇತ್ರದಲ್ಲಿ ಮಾಡಿದ ಮಹತ್ತರವಾದ ಸೇವೆ. ನಾನು ಚಿಕ್ಕದೊಂದು ವಿದ್ಯಾರಣ್ಯ ಚರಿತ್ರೆಯನ್ನು ೧೯೦೭ರಲ್ಲಿ ಬರೆದಿದ್ದೆನು. ಮುಂದೆ ಶ್ರೀ. ರಾಜಪುರೋಹಿತ ಶ್ರೀ. ನರಗುಂದಕರ ಇವರೇ ಮುಂತಾದವರು ತಮ್ಮ ಲೇಖಗಳಿಂದ ವಿಜಯನಗರದ ಅಭಿಮಾನವನ್ನು ಪುಷ್ಟಿಗೊಳಿಸಿದರು. ನಾನು ಬರೆದ ವಿದ್ಯಾರಣ್ಯ ಚರಿತ್ರೆಯು ಮರಾಠಿಯಲ್ಲಿ ಭಾಷಾಂತರಿಸಲ್ಪಟ್ಟು ಹೊರ ಬಿದ್ದಿತ್ತು. ಶಾಂತೇಶ ಕವಿಗಳು ನನ್ನ ಕನ್ನಡ ವಿದ್ಯಾರಣ್ಯ ಚರಿತ್ರೆಯ ಆಧಾರ ದಿಂದ ವಿದ್ಯಾರಣ್ಯರ ಬಗ್ಗೆ ಕೀರ್ತನೆಯನ್ನು ಬರೆದರು. ಮತ್ತು ಸ್ವತಃ ಕೀರ್ತನ ಗಳನ್ನು ಮಾಡಿ ಅಭಿಮಾನದ ಪ್ರವಾಹವನ್ನು ಕರ್ನಾಟಕದ ತುಂಬೆಲ್ಲ ಹರಿಸಿ ಬಿಟ್ಟರು. ೧೯೨೮ನೆಯ ಇಸ್ವಿಯಲ್ಲಿ ನಾವು ಧಾರವಾಡದವರು ಶ್ರೀ. ವಿದ್ಯಾ ರಣ್ಯರ ಉತ್ಸವವನ್ನು ಪ್ರಾರಂಭಿಸಿದೆವು. ಮುಂದೆ ಅದು ಇಡೀ ಕರ್ನಾಟಕದ ತುಂಬೆಲ್ಲ ಹಬ್ಬಿತು. ಸ್ವಧರ್ಮ ಎಂಬ ಮಾಸಪತ್ರಿಕೆಯಲ್ಲಿ ಸಂಪಾದಕರಿಂದ ಸೂಚಿತವಾದ ನಾಡಹಬ್ಬದ ಕಲ್ಪನೆಯು ಬಲು ಬೇಗನೆ ಕರ್ನಾಟಕದಲ್ಲೆಲ್ಲ ಹಬ್ಬಿತು. ಮತ್ತು ವಿಜಯನಗರ ಸಾಮ್ರಾಜ್ಯದ ಬಗ್ಗೆ ಅಭಿಮಾನವು ಕನ್ನಡಿ ಗರ ಹೃದಯದಲ್ಲಿ ತುಂಬಾ ಉಕ್ಕೇರಿತ್ತು.

ಮೂಲತಃ ಡಾ. ಸಿವ್ವೆಲ್ ಸಾಹೇಬರು ಬರೆದ "ಮರೆತು ಹೋದ ಸಾಮ್ರಾಜ್ಯ" (Forgotten Empire) ಎಂಬ ಪುಸ್ತಕದಲ್ಲಿಯೂ ಆ ಬಳಿಕ ಬಿ. ಸೂರ್ಯನಾರಾಯಣರಾಯರು ಮುಂದೆ ಬರೆದ "ಎಂದೂ ಮರೆಯದ ಸಾಮ್ರಾಜ್ಯ" (Never-to be-forgotten Empire) ಎಂಬ ಪುಸ್ತಕ ದಲ್ಲಿಯೂ ಈ ಅಭಿಮಾನದ ಉಗಮವಿದೆ. ಲಾರ್ಡ್ ಕರ್ಝನರವರು ೧೯೦೩ರಲ್ಲಿ ಮುದ್ದಾಂ ಹಂಪಿಗೆ ಬಂದು ನೋಡಿ, ನಮ್ಮ ಜನರ ಲಕ್ಷವನ್ನು ಅತ್ತ ಎಳೆದರು. ಅನಂತರ ಶ್ರೀ. ಹಾಲಭಾವಿಯವರು ಸಿವ್ವೆಲ್ಲರ ವಿಜಯನಗರ ಇತಿಹಾಸವನ್ನು ಸಂಕ್ಷೇಪವಾಗಿ ಭಾಷಾಂತರಿಸಿದ್ದರು. ಆದರೆ ವಿಜಯನಗರ

ಸಂಬಂಧವಾಗಿ ನಾವು ಮಾಡತಕ್ಕ ಕರ್ತವ್ಯವನ್ನು ಮಾಡಲಿಲ್ಲವೆಂದು ನನ್ನ ಮನಸ್ಸು ಕಟಿಯುತ್ತಿತ್ತು. ದಾವಣಗೇರಿಯಲ್ಲಿ ೧೯೨೨ನೆಯ ಇಸವಿಯಲ್ಲಿ ನೆರೆದ ಸಾಹಿತ್ಯ ಸಮ್ಮೇಲನದಲ್ಲಿ ಪಂಪಾಕ್ಷೇತ್ರದ ಜೀರ್ಣೋದ್ಧಾರದ ಬಗ್ಗೆ, ಒಂದು ಕಮಿಟಿಯು ನೇಮಿಸಲ್ಪಟ್ಟಿದ್ದೇನೊ ಸರಿ. ಆದರೆ ಹಣದ ಅಭಾವದ ಮೂಲಕವೂ ಸಾಕಷ್ಟು ಜಾಗ್ರತಿ ಇಲ್ಲದ ಮೂಲಕವೂ ಅದು ಅಲ್ಲಗೇ ಉಳಿಯಿತು. ಮುಂದೆ ೧೯೨೫ನೆಯ ಇಸವಿಯಲ್ಲಿ ಬೆಳಗಾವಿ ಸಾಹಿತ್ಯ ಸಮ್ಮೇಲನದಲ್ಲಿ ವಿಜಯನಗರದ ೬೦೦ ವರ್ಷಗಳ ಸ್ಮಾರಕ ಮಹೋತ್ಸವವನ್ನು ಕರ್ನಾಟಕವು ೧೯೩೬ರಲ್ಲಿ ಮಾಡುವದನ್ನು ನಿಶ್ಚಯಿಸಿರುತ್ತದೆ—ಎಂಬ ನಿರ್ಣಯವು ಸ್ವೀಕರಿಸಲ್ಪಟ್ಟಿತು. ಆದರೆ ಪ್ರತ್ಯಕ್ಷ ಕಾರ್ಯಕ್ಕೆ ಚಾಲನೆ ಸಿಕ್ಕದ್ದು ೧೯೩೧ನೆಯ ಇಸವಿಯಲ್ಲಿ ನನ್ನ ಅಧ್ಯಕ್ಷತೆಯಲ್ಲಿ ಧಾರವಾಡದಲ್ಲಿ ನಡೆದ ನಾಡಹಬ್ಬದ ಕಾಲಕ್ಕೆ, ಈ ಉತ್ಸವವನ್ನು ಕರ್ನಾಟಕದ ವೈಭವಕ್ಕೆ ತಕ್ಕಂತೆ ಅತಿ ದೊಡ್ಡ ಪ್ರಮಾಣದಲ್ಲಿ ಜರುಗಿಸಬೇಕೆಂದು ನಿರ್ಣಯವಾಯಿತು. ಮುಂದೆ ಸ್ವಲ್ಪ ದಿನಗಳಲ್ಲಿ ಕಾರವಾರದಲ್ಲಿ ಕೂಡಿದ ಸಾಹಿತ್ಯ ಸಮ್ಮೇಲನದಲ್ಲಿ ಈ ಉತ್ಸವಕ್ಕೆ ಬೆಂಬಲವನ್ನು ದೊರಕಿಸಿದೆ. ಮತ್ತೆ ಒಂದೆರಡು ವರ್ಷ ಉರುಳಿದವು. ಏನೂ ಕಾರ್ಯವಾಗಲಿಲ್ಲ. ನಮ್ಮ ಮಹತ್ವಾಕಾಂಕ್ಷೆಗೆ ತಕ್ಕಂತೆ ದೊಡ್ಡ ಪ್ರಮಾಣದಲ್ಲಿ ಕೂಡಿಸಬೇಕೆಂಬ ಇಚ್ಛೆ ಅಲ್ಲಿಯೇ ಉಳಿಯಿತು. ೫–೬–೧೯೩೩ನೆಯ ಇಸವಿ ದಿವಸ ಬೆಳಗಾವಿಯವರು ಸಾರ್ವಜನಿಕ ಸಭೆ ಸೇರಿಸಿ ಈ ಉತ್ಸವಕ್ಕೆ ಬೆಂಬಲ ಕೊಟ್ಟರು. ಜನಜಾಗ್ರುತಿಯು ಚೆನ್ನಾಗಿ ಬೆಳೆಯಹತ್ತಿತು. ಆದ ಕಾರಣ, ಅದೇ ವರ್ಷ ಕೂಡಿದ ಏಕೀಕರಣ ಪರಿಷತ್ತು, ವೀರಶೈವ ಮಹಾಸಭೆ, ದೇವಾಂಗ ಪರಿಷತ್ತು ಮುಂತಾದ ಸಭೆ ಸಮ್ಮೇಲನಗಳಲ್ಲಿ ನಿರ್ಣಯಗಳು ಸ್ವೀಕೃತವಾದವು.

ಆದರೆ ಇಷ್ಟಾದರೂ ನಿಧಿಸಂಗ್ರಹಕ್ಕೆ ಪ್ರಾರಂಭವಾಗಿದ್ದಿಲ್ಲ. ಆ ಸುಯೋಗವು ವಿಜಾಪುರದ 'ಲಲಿತ ಕಲೋದ್ಧಾರಕ ನಾಟಕ ಮಂಡಳಿ' ವತಿಯಿಂದ ಶ್ರೀ. ಕಂದಗಲ್ಲ ಹನುಮಂತರಾಯರು ತಾವು ಬರೆದ ವರಪ್ರದಾನ ಅಥವಾ ವಿಜಯನಗರ ಸಾಮ್ರಾಜ್ಯಸ್ಥಾಪನೆ ಎಂಬ ನಾಟಕದ ಉತ್ಪನ್ನವನ್ನು ನನ್ನ ಇಚ್ಛೆಯಂತೆ ೧೬–೩–೧೯೩೩ನೆಯ ದಿವಸ ನನ್ನನ್ನು ಕರಿಸಿ, ನನ್ನ ಉಡಿಯಲ್ಲಿ ಹಾಕಿದಾಗ ದೊರೆಯಿತು. ಅದೇ ವರ್ಷ ಅಂದರೆ ೨೫, ೨೬ ನವಂಬರ ೧೯೩೩ನೆಯ

ಇಸವಿಯ ದಿವಸ ವಿಜಯನಗರ ಪರಿಷತ್ತನ್ನು ಹುಬ್ಬಳ್ಳಿಯಲ್ಲಿ ಕೂಡಿಸಿದೆ. ಮತ್ತು ಆ ಪ್ರಾಸ್ತಾವಿಕ ಸಭೆಯಲ್ಲಿ ನಾನು ಒಂದು ಲಕ್ಷ ರೂಪಾಯಿಯ ನನ್ನ ಯೋಜನೆಯನ್ನು ತಿಳಿಸಿ ಹೇಳಿದೆ. ಅದು ಮಂಜೂರ ಮಾಡಲ್ಪಟ್ಟು ಡಿಶಂಬರ ತಿಂಗಳಲ್ಲಿ ಅಖಿಲ ಕರ್ನಾಟಕ ವಿಜಯನಗರ ಸಮ್ಮೇಲನವೊಂದನ್ನು ಕರೆಯಬೇಕೆಂದೂ ಅದರಲ್ಲಿ ನನ್ನ ಯೋಜನೆಯನ್ನು ಮಂಜೂರ ಮಾಡಿಸಿ ಕೊಂಡು, ಕಾರ್ಯಕ್ಕೆ ಪ್ರವೃತ್ತರಾಗಬೇಕೆಂದೂ ಗೊತ್ತಾಯಿತು. ಆ ಪ್ರಕಾರ ಡಿಶಂಬರ ತಿಂಗಳಲ್ಲಿ ಹುಬ್ಬಳ್ಳಿಯಲ್ಲಿ ಅಖಿಲ ಕರ್ನಾಟಕ ವಿಜಯನಗರ ಸಮ್ಮೇಲನವು ೩೧--೧೨---೩೩ನೇ ದಿವಸ ಶ್ರೀ. ಡಿ. ವಿ. ಗುಂಡಪ್ಪನವರ ಅಧ್ಯಕ್ಷತೆಯಲ್ಲಿ ಕೂಡಿತು. ಶ್ರೀ. ಸಿದ್ಧರಾಮಪ್ಪ ಪಾವಟೆಯವರು ಸ್ವಾಗತ ಮಂಡಳದ ಅಧ್ಯಕ್ಷರಾಗಿದ್ದರು. ಶ್ರೀ. ಮೊಖಾಸಿ ಗಣಪತರಾಯರು ಶ್ರೀ. ಮೆಳ್ಳಿಗಟ್ಟಿ ಮಧ್ವರಾಯರು ಮತ್ತು ಭೂಸನೂರ ಗುರುಬಸಪ್ಪನವರು ಕಾರ್ಯದರ್ಶಿಗಳಾಗಿದ್ದರು. ಈ ಸಮ್ಮೇಲನದಲ್ಲಿ ವಿಜಯನಗರ ಉತ್ಸವ ಮಂಡಳವು ಮೊದಲನೆಯ ಸಾರೆ ಅಧಿಕೃತವಾಗಿ ಸ್ಥಾಪನೆಯಾಯಿತು. ಮುಖ್ಯ ಕಾರ್ಯಾಲಯವು ಧಾರವಾಡದಲ್ಲೇ ಇರುವದು ಗೊತ್ತಾಯಿತು. ಈ ಉತ್ಸವವನ್ನು ಪ್ರಾರಂಭಿಸಿದ ಶ್ರೇಯಸ್ಸು ಶ್ರೀಯುತ ಹುಬ್ಬಳ್ಳಿಯ ಬೆಂಗೇರಿ ಪ್ರಲ್ಹಾದರಾಯರಿಗೆ ಇದೆ. ಅವರು ಲೇಖನಾದಿಗಳನ್ನು ಕೊಟ್ಟು ಪ್ರಾರಂಭ ಮಾಡಿ ಸುಮ್ಮನೇ ಕುಳಿತು ಕೊಳ್ಳದೆ ಅದು ಸಾಂಗವಾಗಿ ಕೊನೆಗಾಣುವ ವರೆಗೆ ಸತತ ಪ್ರಯತ್ನ ಮಾಡಿದರು. ಹಿಂದೆ ನಿಂತೇ ಕೊನೆಯ ವರೆಗೆ ದುಡಿದರು. ಹೀಗೆ ನಿರಭಿಮಾನದ ಕಾರ್ಯಕರ್ತರಿಂದಲೇ ನಿಜವಾದ ಕಾರ್ಯವಾಗುತ್ತದೆ. ಇರಲಿ, ಧಾರವಾಡಕ್ಕೆ ಮುಖ್ಯ ಕಾರ್ಯಾಲವು ಬಂದ ಕೂಡಲೆ ಸಭೆ ಕೂಡಿ ಶ್ರೀ. ಮೆಳ್ಳಿಗಟ್ಟಿ ಮಧ್ವರಾಯರೂ, ಶ್ರೀ. ಎಮ್. ಎಸ್. ಪಾಟೀಲರೂ ಕಾರ್ಯದರ್ಶಿಗಳಾಗಿ ನೇಮಿಸಲ್ಪಟ್ಟರು. ೧೯೩೪ರಲ್ಲಿ ಧಾರವಾಡದವರಿಂದ ಒಟ್ಟಿಗೆ ೭೪೨ ರೂ. ೨ ಆ. ೬ ಪೈಗಳು ಕೂಡಿಸಲ್ಪಟ್ಟವು. ಅದರಲ್ಲಿ ಸುಮಾರು ೬೬ ರೂ. ಮಾತ್ರ ವೆಚ್ಚವಾದವು. ಮಂಡಳದವರು ವಿಜಯನಗರದ ವೈಭವ, ವಿಜಯನಗರದ ಕೈಪಿಡಿ ಎಂಬ ಎರಡು ಪುಸ್ತಕಗಳನ್ನು ಪ್ರಸಿದ್ಧಿಸಬೇಕೆಂದು ನಿಶ್ಚಯಿಸಿ, ಮೊದಲನೇ ಗ್ರಂಥಕ್ಕೆ ೧೫೦ ೨ನೆಯದಕ್ಕೆ ೫೦ ರೂ. ಬಹುಮಾನ ಕೊಡುವದಾಗಿ ನಿಶ್ಚಯಿಸಿದರು. ಪುಸ್ತಕಗಳು ಬಾರದ್ದರಿಂದ ಆಗ ಪ್ರಸಿದ್ಧವಾಗಲಿಲ್ಲ. ೧೯೩೪ರಲ್ಲಿ

ಪ್ರಚಾರದ ಕಾರ್ಯವು ತಕ್ಕಮಟ್ಟಿಗೆ ಒಳಿತಾಗಿ ಸಾಗಿತು. ಸ್ವತಃ ನಾನೂ ಶ್ರೀ. ಜಂಗಿನ ಮುರಿಗೆಯ್ಯನವರೂ ಶ್ರೀ. ಬಿ. ಶಿವಮೂರ್ತಿಶಾಸ್ತ್ರಿಗಳೂ ಕೂಡಿ ವಿಜಾಪುರ, ಸೊಲ್ಲಾಪುರ, ಅಕ್ಕಲಕೋಟೆ, ಬೆಳಗಾವಿ ಜಿಲ್ಲೆಯ ಕೆಲವು ಭಾಗಗಳು ಮುಂತಾದ ಸ್ಥಳಗಳಲ್ಲಿ ಪ್ರಚಾರ ಕಾರ್ಯ ಮಾಡಿ ಶಾಖೆಗಳನ್ನು ಸ್ಥಾಪಿಸಿದೆವು. ಶ್ರೀ. ನಾಡಕರ್ಣಿ ಭೀಮರಾಯರು, ಹಾವೇರಿ, ರಾಣೇಬೆನ್ನೂರ, ಡಾವಣಗೇರಿ, ಹರಿಹರ, ಶಿವಮೊಗ್ಗೆ ಮುಂತಾದ ಸ್ಥಳಗಳಲ್ಲಿ ಪ್ರಚಾರವನ್ನು ಸಾಗಿಸಿದರು. ನಾನೂ ರಾಜಪುರೋಹಿತರೂ ಹೊಸಪೇಟೆ ಬಳ್ಳಾರಿಗಳಲ್ಲಿ ಪ್ರಚಾರ ಮಾಡಿದೆವು. ಹೊಸಪೇಟೆಯೇ ಉತ್ಸವದ ಮಹಾದ್ವಾರವಾದದ್ದರಿಂದ ನಾನು ಅಲ್ಲಿ ಶಾಖೆ ಸ್ಥಾಪಿಸಿದೆ. ಅದಕ್ಕೂ ಮೊದಲು ನಾನು ಅಥಣಿಯಲ್ಲಿ ಕೂಡಿದ ಸಾಹಿತ್ಯ ಸಮ್ಮೇಲನಕ್ಕೆ ಹೋಗಿ ಉತ್ಸವಕ್ಕೆ ಬೆಂಬಲ ಕೊಡುವ ನಿರ್ಣಯವನ್ನು ಮಂಜೂರ ಮಾಡಿಸಿಕೊಂಡು ಬಂದೆನು. ಮತ್ತು ಶ್ರೀ. ಕೃಷ್ಣರಾವ ಮುದವೇಡಕರ ಇವರು ಅಕ್ಟೋಬರದಲ್ಲಿ ವಿಜಾಪುರದಲ್ಲಿ ಕೂಡಿದ ವಿಜಾಪುರ ಜಿಲ್ಲಾ ಸಾಹಿತ್ಯ ಸಮ್ಮೇಲನದಲ್ಲಿ ಅದೇ ಪ್ರಕಾರ ನಿರ್ಣಯ ಮಂಜೂರ ಮಾಡಿಸಿಕೊಂಡಿದ್ದರು. ಇದೇ ವರ್ಷ ಶ್ರೀ. ಬೇಲೂರ ಕೇಶವದಾಸರು ಅನೇಕ ಕಡೆಗೆ ಹೋಗಿ ತಮ್ಮ ಕೀರ್ತನಗಳಿಂದ ಬಲವಾದ ಪ್ರಚಾರ ಕಾರ್ಯ ಮಾಡಿದರು. ಇದೆಲ್ಲ ಪ್ರಚಾರ ಕಾರ್ಯದ ಫಲವಾಗಿ ಬೆಳಗಾವಿ, ಹುಬ್ಬಳ್ಳಿ, ಗದಗ, ಧಾರವಾಡ, ಬಾಗಲಕೋಟ, ಅಥಣಿ, ರಾಯಚೂರ, ಮುಂಬಯಿ, ಸೊಲ್ಲಾಪುರ, ಅಕ್ಕಲಕೋಟ, ವಿಜಾಪುರ, ಹೊಸಪೇಟೆ ಮುಂತಾದ ಪಟ್ಟಣಗಳಲ್ಲಿ ಶಾಖಾ ಮಂಡಳಗಳು ಸ್ಥಾಪಿಸಲ್ಪಟ್ಟವು. ಆದರೆ ಮಂಡಳದ ಕಾರ್ಯದ ವ್ಯಾಪಕತೆಯನ್ನು ಲಕ್ಷದಲ್ಲಿ ತಂದರೆ ಇದು ಸಮಾಧಾನಕರವಾಗಿದ್ದಿಲ್ಲವೆಂಬುದು ಸ್ಪಷ್ಟವಿದೆ. ಮಂಡಳದ ಕಾರ್ಯಕ್ಕೆ ಹೆಚ್ಚು ವೇಳೆ ಕೊಡಬಲ್ಲವರೂ ಕರ್ನಾಟಕದಲ್ಲಿ ವರ್ಚಸ್ಸು ಇದ್ದವರೂ ಸಾಕಷ್ಟು ಕಾರ್ಯಕರ್ತರೂ ಮಂಡಳಕ್ಕೆ ದೊರೆಯಲಿಲ್ಲ. ಅದು ಅಲ್ಲದೆ ಅದೇ ವರ್ಷ ಬಿಹಾರ ರಿಲೀಫ ಫಂಡ, ಕಾರವಾರ ರಿಲೀಫ ಫಂಡ, ಹರಿಜನ ಫಂಡ ಮುಂತಾದ ಅನೇಕ ಅತ್ಯಗತ್ಯದ ಫಂಡುಗಳಿಗೆ ಇಲ್ಲಿಂದ ಹಣ ಹೋದ್ದರಿಂದ ಧನಸಂಗ್ರಹವನ್ನು ಮಾಡುವದು ದುರ್ಘಟವಾಯಿತು. ವಿಜಾಪುರದ ಲಲಿತ ಕಲೋದ್ಧಾರಕ ಮಂಡಳದವರೂ ಧಾರವಾಡ ಕನ್ನಡ (ಅಮೇಚೂರ ನಾಟಕ ಸಂಘದವರೂ

ತಮ್ಮ ನಾಟಕ ಪ್ರಯೋಗಗಳ ಉತ್ಪನ್ನವನ್ನು ಕೊಟ್ಟು ಸಹಾಯ ಮಾಡಿದ್ದರಿಂದ ಮಂಡಳದ ಕಾರ್ಯಾಲಯದ ಕಾರ್ಯವಾದರೂ ನಡೆಯಲು ಅನುಕೂಲವಾಯಿತು.

ಇದೇ ವರ್ಷ ರಾಯಚೂರಿನಲ್ಲಿ ಡಿಶಂಬರ ೩೦ ನೆಯ ತಾರೀಖಿಗೆ ಬ್ಯಾರಿಸ್ಟರ ಸರದಾರ ಇವರ ಅಧ್ಯಕ್ಷತೆಯಲ್ಲಿ ಸ್ಮಾರಕೋತ್ಸವದ ಎರಡನೆಯ ಅಧಿವೇಶನವನ್ನು ನೆರವೇರಿಸಲು ಗೊತ್ತಾದಂತೆ ನಾನೂ ಬೆಂಗೇರೀ ಪ್ರಹ್ಲಾದರಾಯರೂ ರಾಯಚೂರಿಗೆ ಹೋಗಿ ಅಧಿವೇಶನದ ಸಿದ್ಧತೆಯನ್ನು ಮಾಡಿದ್ದೆವು. ಸಭೆಯಲ್ಲಿ ಆರೇಳು ಜನರು ಮಂಡಳದ ನಿಧಿಗೆ ೬೦೦, ೭೦೦ ರೂ.ಗಳನ್ನು ಕೊಡುವ ಅಭಿವಚನವನ್ನು ಕೊಟ್ಟರು. ಸಮ್ಮೇಲನವು ಬ್ಯಾರಿಸ್ಟರ ಸರದಾರರ ಆಧ್ಯಕ್ಷತೆಯಲ್ಲಿ ವಿಜೃಂಭಣೆಯಿಂದ ಜರುಗಿತು. ಆನಂತರ ಬೆಂಗೇರಿ ಪ್ರಹ್ಲಾದರಾಯರೂ ಪೋತದಾರ ಶ್ರೀನಿವಾಸರಾಯರೂ ಪೆನುಗೊಂಡೆಗೆ ಹೋಗಿ ಪ್ರಚಾರ ಮಾಡಿದರು. ಮದ್ರಾಸಿಗೆ ಹೋಗಿ ಡಾ. ಯು. ರಾಮರಾಯರ ಬೆಂಬಲವನ್ನು ಪಡೆದರು. ೧೯೩೫ನೆಯ ಜನವರಿಯಲ್ಲಿ ಮಂಡಳದ ಕಾರ್ಯಾಲಯವು ಬಳ್ಳಾರಿಗೆ ಒಯ್ಯಲ್ಪಟ್ಟಿತು. ಶ್ರೀ. ವೈ. ಮಹಾಬಲೇಶ್ವರಪ್ಪನವರು ಅಧ್ಯಕ್ಷರಾಗಿ ಆರಿಸಲ್ಪಟ್ಟರು. ಕಾರ್ಯದರ್ಶಿಗಳು ಶ್ರೀ. ಮಳಿಬೆನ್ನೂರ ಸತ್ಯವಂತರಾಯರೂ ಶ್ರೀ. ಟಿ. ಎಚ್. ಚಂದ್ರಶೇಖರಶಾಸ್ತ್ರಿಗಳವರು. ಆದರೆ ಬರಗಾಲ ಪ್ಲೇಗು ಮತ್ತು ಅನ್ಯಕಾರಣಗಳ ಮೂಲಕ ಮಂಡಳದ ಕಾರ್ಯವು ಮುಂದುವರಿಯಲಿಲ್ಲ. ೧೯೩೫ನೆಯ ಕೊನೆಯ ಸುಮಾರಕ್ಕೆ ಮುಂಬಯಿಯಲ್ಲಿ ಉತ್ಸವದ ಮೂರನೆಯ ಅಧಿವೇಶನವು ಡಾ. ಸಾಲತೊರೆ ಇವರ ಅಧ್ಯಕ್ಷತೆಯಲ್ಲಿ ಬಹಳ ವಿಜೃಂಭಣೆಯಿಂದ ನೆರವೇರಿತು.

ಬಳ್ಳಾರಿಯಲ್ಲಿ ಕೆಲಸ ನಡೆಯದ್ದರಿಂದ ನಾನು ಪುನಃ ಕಾರ್ಯಾಲಯವನ್ನು ಧಾರವಾಡಕ್ಕೆ ಎಳೆತಂದೆನು. ಇಲ್ಲಿ ಉತ್ಸವದ ತಾತ್ಪೂರ್ತಿಕ ಕಾರ್ಯಕಾರಿ ಮಂಡಳವು ಸ್ಥಾಪಿಸಲ್ಪಟ್ಟು ಅದಕ್ಕೆ ಶ್ರೀ. ಹಾಲಭಾವಿ ವೀರಭದ್ರಪ್ಪನವರು ಅಧ್ಯಕ್ಷರಾಗಿಯೂ ಶ್ರೀ. ಜಿ. ಎಸ್. ಕುಲಕರ್ಣಿ ಮತ್ತು ಪೋತದಾರ ಶ್ರೀನಿವಾಸರಾಯರು ಕಾರ್ಯದರ್ಶಿಗಳಾಗಿಯೂ ಆರಿಸಲ್ಪಟ್ಟರು. ಇರಲಿ, ಈ ಉತ್ಸವ ಮಂಡಳದ ಸಂಪೂರ್ಣ ವರದಿಯನ್ನು ನಾನು ಸವಿಸ್ತರವಾಗಿ ಬರೆದಿದ್ದು ೧೦೩

ಪುಟಗಳುಳ್ಳ ಆ ಪುಸ್ತಕವು ಉತ್ಸವದ ಅನೇಕ ಚಿತ್ರಗಳು ಸಹಿತ ಮುದ್ರಿತವಾಗಿದ್ದು ಅದರ ಪ್ರತಿಗಳು ಪುಕ್ಕಟೆಯಾಗಿ ಹಂಚಲ್ಪಟ್ಟಿವೆ. ಕರ್ನಾಟಕ ಅಭಿಮಾನವುಳ್ಳವರು ಈಗಲೂ ಇಲ್ಲಿಯ ಇತಿಹಾಸ ಸಂಶೋಧನ ಮಂಡಳದಲ್ಲಿ ಇಡಲ್ಪಟ್ಟ ಪ್ರತಿಯನ್ನು ತರಿಸಿ ಓದಬಹುದು.

ಆ ಉತ್ಸವದ ಸಂಗತಿಗಳನ್ನು ಈ ಗ್ರಂಥದ ವಾಚಕರಿಗಾಗಿ ಸಂಕ್ಷಿಪ್ತವಾಗಿ ಇಲ್ಲಿ ಕೊಡುತ್ತೇನೆ. ಈ ಆರುನೂರು ವರ್ಷಗಳ ಸ್ಮಾರಕೋತ್ಸವವು ೧೯೩೬ನೆಯ ಇಸವಿಯ ೨೫—೨೬—೨೭ ಮತ್ತು ೨೮ನೆಯ ತಾರೀಖುಗಳಲ್ಲಿ ಹಂಪೆ ಅಥವಾ ವಿಜಯನಗರದಲ್ಲಿ ವಿಜೃಂಭಣೆಯಿಂದ ಜರುಗಿತು. ಈ ಸುಸಂಧಿಯಲ್ಲಿ ಅಖಿಲ ಕರ್ನಾಟಕದ ಧಾರ್ಮಿಕ ಪುರುಷರು, ಪಂಡಿತರು, ರಾಷ್ಟ್ರಭಕ್ತರು, ವಾಗ್ಮಿಗಳು, ಸಾಹಿತಿಗಳು, ಇತಿಹಾಸಜ್ಞರು, ರಸಿಕರು ಇವರೇ ಮುಂತಾದ ಯಾವತ್ತೂ ಬಗೆಯ ಜನರು, ಜಾತಿ-ಮತ-ಪಂಥ ಮೊದಲಾದ ಯಾವ ಭೇದವನ್ನೂ ಪರಿಗಣಿಸದೆ ಕೇವಲ ಕರ್ನಾಟಕದ ಅಭಿಮಾನದಿಂದ ಅಲ್ಲಿ ಮಿಲಿತರಾಗಿದ್ದರು. ಬಂಗಾಲ, ಸಂಯುಕ್ತಪ್ರಾಂತ, ಆಂಧ್ರ, ತಮಿಳನಾಡು, ಮಹಾರಾಷ್ಟ್ರ ಮುಂತಾದ ಅನೇಕ ಪ್ರಾಂತಗಳಿಂದ ಅನೇಕ ಮಾನ್ಯ ಪ್ರತಿನಿಧಿಗಳು ಬಂದುದರಿಂದ ಈ ಮಹೋತ್ಸವಕ್ಕೆ ಅಖಿಲ ಭಾರತೀಯ ಸ್ವರೂಪವು ಪ್ರಾಪ್ತವಾಗಿತ್ತು. ಉತ್ಸವಕ್ಕೆ ಸುಮಾರು ೪೦—೫೦ ಸಾವಿರ ಜನರು ನೆರೆದಿದ್ದರು. ಉಗಿಬಂಡಿಯವರಿಗೂ, ಮೋಟಾರ ಗಾಡಿಯವರಿಗೂ ಜನರನ್ನು ತಂದು ಮುಟ್ಟಿಸಲಿಕ್ಕೆ ಸಾಕುಬೇಕಾಗಿ ಹೋಯಿತು. ೧೦—೧೫ ಸ್ಪೆಶಲ್ ಗಾಡಿಗಳನ್ನು ಹೊರಡಿಸಿ, ರೇಲ್ವೆಯವರಿಗೆ ಪ್ರವಾಸಿಕರನ್ನು ತರಬೇಕಾಯಿತು. ಹೊಸಪೇಟೆಯ ಸುತ್ತಲಿನ ೬೦—೭೦ ಮೈಲುಗಳಲ್ಲಿರುವ ಹಳ್ಳಿಯ ಜನರು ಮದುವೆಗೆ ಹೊರಡುವಂತೆ ಸಂಭ್ರಮದಿಂದ ಹೊರಟು ಉತ್ಸವದಲ್ಲಿ ಕಲೆತಿದ್ದರು. ಈ ಮಹೋತ್ಸವಕ್ಕೆ ಕುರ್ತಕೋಟಿ ಮಹಾಭಾಗವತ ( ಶ್ರೀ. ಶಂಕರಾಚಾರ್ಯ ) ಇವರಂಥ ಸಂನ್ಯಾಸಿಗಳು ಅಧ್ಯಕ್ಷರಾದದ್ದೂ, ವೀರಶೈವ ಸ್ವಾಮಿಗಳಲ್ಲಿ ಅನೇಕ ಪ್ರಮುಖ ಸ್ವಾಮಿಗಳು ಪ್ರತ್ಯಕ್ಷ ಹಾಜರಿದ್ದು, ಉತ್ಸವವನ್ನು ಸುಶೋಭಿತವಾಗಿ ಮಾಡಿದ್ದೂ ನಿಜವಾಗಿ ಸಂಸ್ಮರಣೀಯವು. ಮೈಸೂರ ಮಹಾರಾಜರವರು ೧೦೦೦ ರೂಪಾಯಿ ಕಾಣಿಕೆಯನ್ನು ಕೊಟ್ಟು ಕರ್ನಾಟಕದ ಬಗ್ಗೆ ತಮಗಿರುವ ಉತ್ಕಟಾಭಿಮಾನವನ್ನು

ತೋರಿಸಿದ್ದನ್ನು ಮರೆಯುವದು ಹ್ಯಾಗೆ? ಮಹಾರಾಜರವರ ಅಕ್ಕನ ಅಳಿಯಂದಿರಾದ ಶ್ರೀ ಬಸವರಾಜ ಅರಸರವರು ಪ್ರತ್ಯಕ್ಷವಾಗಿ ಹಾಜರಿದ್ದರು. ಆಗಿನ ಯುವರಾಜರಾದ ಶ್ರೀ ಜಯಚಾಮರಾಜ ಒಡೆಯರ್ ಇವರಿಗೆ ಪ್ರತ್ಯಕ್ಷವಾಗಿ ಉತ್ಸವಕ್ಕೆ ಬರುವದಾಗದಿದ್ದರೂ ಉತ್ಸವಕ್ಕೆ ಮೊದಲು ಮೈಸೂರಿನಲ್ಲಿ ನಡೆದ ಸ್ಮಾರಕ ಸಮಾರಂಭದ ದಿವಸ ಸ್ವತಃ ಹಾಜರಿದ್ದು ತಮ್ಮ ಪ್ರೇಮವನ್ನು ತೋರಿಸಿದರು. ಸೊಂಡೂರ ರಾಜರು ತಮ್ಮ ಪ್ರತಿನಿಧಿ ಕಳಿಸಿದ್ದರು. ಆನೆಗೊಂದಿಯ ಮಹಾರಾಜರು ಹಣವನ್ನು ಕೊಟ್ಟದ್ದಲ್ಲದೆ ಶಕ್ಯವಾದ ಯಾವತ್ತೂ ಸಹಾಯವನ್ನು ಮಾಡಿದರು. ಹುಬ್ಬಳ್ಳಿಯಲ್ಲಿ ಕೂಡಿದ ಕ್ರಿಶ್ಚಿಯನ್ ಕಾನ್ಫರನ್ಸದವರು ಸಹಾನುಭೂತಿಪರವಾದ ಗೊತ್ತುವಳಿಯನ್ನು ಮಾಡಿ ತಮ್ಮ ಪ್ರೇಮವನ್ನು ವ್ಯಕ್ತಪಡಿಸಿದರು.

ಈ ಉತ್ಸವದ ಕಾಲಕ್ಕೆ ಕರ್ನಾಟಕದ ಸಂಸ್ಕೃತಿಯನ್ನು ಪೋಷಿಸುವ ಸಕಲ ತರಹದ ಚಟುವಟಿಕೆಗಳು ಅಲ್ಲಿ ನಡೆದವು. (೧) ಐತಿಹಾಸಿಕ ಸಮ್ಮೇಲನ. (೨) ಐತಿಹಾಸಿಕ ಪ್ರದರ್ಶನ. (೩) ಸಾಹಿತ್ಯೋತ್ಸವ. (೪) ಸಂಪದಭಿವೃದ್ಧಿ ಸಭೆ. (೫) ಆಯುರ್ವೇದಕ್ಕೆ ಸಂಬಂಧಿಸಿದ ೩ ಸಮ್ಮೇಲನಗಳು. (೬) ವ್ಯಾಯಾಮ ಸಮ್ಮೇಲನ. (೭) ಶಕ್ತಿಪ್ರದರ್ಶನ. (೮) ಸಂಗೀತ ಕಚೇರಿಗಳು. (೯) ನಾಟಕಗಳು. (೧೦) ರಕ್ಕಸತಂಗಡಿಯ ಕಾಳಗದ ಭಸ್ಮದ ಮೆರವಣಿಗೆ. ಹಾಗೆಯೇ (೧) ವಿಜಯನಗರ ಸ್ಮಾರಕ ಸಂಚಿಕೆ (ಇಂಗ್ಲಿಷ). (೨) ವಿಜಯನಗರ ಇತಿಹಾಸ (ಕನ್ನಡ). ಈ ಪುಸ್ತಕಗಳು ಪ್ರಸಿದ್ಧವಾದವು. ಉತ್ಸವ ಮಂಡಳದ ಮಹತ್ವಾಕಾಂಕ್ಷೆ ಬಹಳೇ ದೊಡ್ಡದಿತ್ತು. ಅವರ ಮನದಲ್ಲಿ ೧ ಲಕ್ಷ ರೂಪಾಯಿಗಳನ್ನು ಕೂಡಿಸಿ, ಅದರಲ್ಲಿ ೭೦—೮೦ ಸಾವಿರ ರೂಪಾಯಿಗಳನ್ನು ವಿಜಯನಗರ ಸಾಮ್ರಾಜ್ಯದ ಇತಿಹಾಸವನ್ನು ಬರೆಯಿಸುವದಕ್ಕೆ ಮೀಸಲಾಗಿರಿಸುವದಿತ್ತು. ಆದರೆ ಅದು ಸಾಧ್ಯವಾಗಲಿಲ್ಲ. ಉತ್ಸವವನ್ನು ನನ್ನ ಮಹತ್ವಾಕಾಂಕ್ಷೆಗೆ ತಕ್ಕಂತೆ ಸಾಧಿಸುವದಾಗಲಿಲ್ಲ. ಕರ್ನಾಟಕವು ಆದೇ ಆಗ ಕಣ್ಣು ತೆರೆಯುವದರಲ್ಲಿತ್ತು. ಮೇಲಾಗಿ ಉತ್ಸವವು ನಿಜವಾಗಿ ಇಡೀ ಕರ್ನಾಟಕದ್ದಾದರೂ ಸಂಘಟನೆಯ ಪ್ರತ್ಯಕ್ಷ ಕಾರ್ಯಭಾರವು ಮೊದಲಿಗೆ ಬಹುಶಃ ಧಾರವಾಡದವರ ಮೇಲೆ;

ಕೊನೆಗೆ ಹಂಪೆಯಲ್ಲಿಯ ಕಾರ್ಯವು ಧಾರವಾಡ ಮತ್ತು ಹೊಸಪೇಟೆಯವರ ಮೇಲೆ ಬಿದ್ದಿತ್ತು. ನಡುವೆ ತೀರ ನಿರಾಶೆಯುಂಟಾಗಿತ್ತು. ಆದರೆ ಶ್ರೀ ವಿದ್ಯಾರಣ್ಯರ ಪುಣ್ಯಪ್ರಭಾವದಿಂದ ಪುನಃ ಸುವರ್ಣವೃಷ್ಟಿಯಾಯಿತು. ನಾವು ಕೆಲವರು ಕೊನೆಯ ತಿಂಗಳೆರಡು ತಿಂಗಳುಗಳಲ್ಲಿ ಊಟದ ಪರಿವೆಯಿಲ್ಲದೆ ತಿರುಗಾಡಿದ್ದರಿಂದ ಸಾಕಷ್ಟು ಹಣವು ಕೂಡಿತು. ಮುಂದೆ ಹಣ ತೆಗೆದು ಕೊಳ್ಳದೆ ಉತ್ಸವವನ್ನು ಮುಕ್ತದ್ವಾರವನ್ನಾಗಿ ಮಾಡಿದರೂ ಖರ್ಚಿಗೆ ಕೊರತೆ ಬರಲಿಲ್ಲ. ಕೊಡುವವರು ಇದ್ದಿಲ್ಲೆಂತಲ್ಲ; ಬೇಡುವವರೇ ಇದ್ದಿಲ್ಲ.



# ೧೧ನೆಯ ಪ್ರಕರಣ

## ಕರ್ನಾಟಕತ್ವದ ಚಳವಳಿಗಳು ( ೧೯೧೫-೧೯೩೬ )

### ಕರ್ನಾಟಕತ್ವ

#### ರಾಜಕೀಯ

೧. ಸ್ವದೇಶೀ ಚಳವಳಿ
೨. ಬಹಿಷ್ಕಾರ ಚಳವಳಿ
೩. ರಾಷ್ಟ್ರೀಯ ಶಿಕ್ಷಣ
೪. ಹೋಮರೂಲ ಲೀಗ
೫. ಕಾಂಗ್ರೆಸ್
೬. ಕರ್ನಾಟಕತ್ವದ ಸೂತ್ರಗಳು
೭. ಕರ್ನಾಟಕ ಸಭೆ
೮. ಕರ್ನಾಟ ರಾಷ್ಟ್ರೀಯ ಪರಿಷತ್ತು
೯. ಕರ್ನಾಟಕ ಏಕೀಕರಣ ಸಂಘ

#### ಸಾಂಸ್ಕೃತಿಕ

**( ೧ ) ಐತಿಹಾಸಿಕ**

೧. ಕರ್ನಾಟಕ ಐತಿಹಾಸಿಕ ಪ್ರವಾಸ
೨. ಕರ್ನಾಟಕ ಗತವೈಭವ
೩. ಕರ್ನಾಟಕ ಇತಿಹಾಸಮಂಡಳ
೪. ಐತಿಹಾಸಿಕ ಉತ್ಸವಗಳು
   (ಅ) ವಿದ್ಯಾರಣ್ಯ ಉತ್ಸವ
   (ಆ) ನಾಡಹಬ್ಬ
೫. ಐತಿಹಾಸಿಕ ಸಮ್ಮೇಲನಗಳು
೬. ವಿಜಯನಗರ ಸಾಮ್ರಾಜ್ಯ ಉತ್ಸವ
೭. ಬಸವೇಶ್ವರ ಉತ್ಸವ
೮. ನಿಜಗುಣ ಶಿವಯೋಗಿಗಳ ಉತ್ಸವ
೯. ಕುಮಾರವ್ಯಾಸ ಉತ್ಸವ
೧೦. ಪಂಪ ಉತ್ಸವ

**( ೨ ) ಸಾಹಿತ್ಯ**

೧. ಗ್ರಂಥಕರ್ತರ ಸಮ್ಮೇಲನ
೨. ಸಾಹಿತ್ಯ ಪರಿಷತ್ತು
೩. ಸಾಹಿತ್ಯ ಸಮ್ಮೇಲನಗಳು
೪. ಕೀರ್ತನ ಸಮ್ಮೇಲನಗಳು
೫. ಮರಾಠಿ ಕನ್ನಡ ವಾದ
೬. ಕರ್ನಾಟಕ ಗ್ರಂಥಕರ್ತರ ಮಂಡಳ
೭. ಶಾಂತೇಶ ವಾಚನಾಲಯ

**( ೩ ) ಮಿಶ್ರ ಚಳವಳಿಗಳು**

೧. ವಾಚನಾಲಯಗಳ ಜಾಳಿಗೆ
೨. ವಾಚನಾಲಯ ಸಮ್ಮೇಲನಗಳು
೩. ನಾಟಕ ಸಮ್ಮೇಲನಗಳು
೪. ಸಂಗೀತ ಕಚೇರಿಗಳು
೫. ಔದ್ಯೋಗಿಕ ಸಮ್ಮೇಲನಗಳು ಮತ್ತು ಪ್ರದರ್ಶನಗಳು
೬. ಕಲಾಪ್ರದರ್ಶನಗಳು ಸಮ್ಮೇಲನಗಳು
೭. ಕನ್ನಡಿಗರ ಸಂಘ

( ನಮ್ಮ ಕಾಲದಲ್ಲಿ ಹೊರಟ ಒಟ್ಟು ಚಳವಳಿಗಳೆಲ್ಲವನ್ನು ಈಗ ನೆನಪಿಗೆ ಬಂದಷ್ಟು ಕೊಟ್ಟಿರುವೆ )

ವಾಚಕರ ಅವಗಾಹನೆಗಾಗಿ, ನಮ್ಮ ಕಾಲದಲ್ಲಿ ಹೊರಟ ಕೆಲವು ಚಳವಳಿಗಳ ಹೆಸರುಗಳನ್ನಷ್ಟೇ ಕೊಟ್ಟಿರುವೆ. ಕರ್ನಾಟಕ ಗತವೈಭವವೇ ಇವೆಲ್ಲಕ್ಕೂ ಸಾಮಾನ್ಯತಃ ಪ್ರತ್ಯಕ್ಷವಾಗಿಯಾಗಲಿ, ಅಪ್ರತ್ಯಕ್ಷವಾಗಿಯಾಗಲಿ ಸ್ಫೂರ್ತಿ ಕೊಟ್ಟಿರುವದರಿಂದ ಈ ಯುಗಕ್ಕೆ "ಕರ್ನಾಟಕ ಗತವೈಭವ ಯುಗ"ವೆಂದು ಹೆಸರು ಕೊಡಬಹುದು. ಇವೆಲ್ಲವುಗಳಲ್ಲಿ ನಾನು ಅಂಶತಃ ಅಥವಾ ಪೂರ್ಣ ಭಾಗ ತೆಗೆದುಕೊಂಡಿರುವೆ. ಹುಬ್ಬಳ್ಳಿ, ಗದಗ, ಹಾವೇರಿ, ಬೆಂಗಳೂರುಗಳ ಬಸವೇಶ್ವರ ಉತ್ಸವಗಳಿಗೆ ಆಮಂತ್ರಿತನಾಗಿ ಹೋದಾಗ, ಕರ್ನಾಟಕತ್ವದ ವಿಚಾರ ಹರಡಿದೆ. ೧೯೩೬ನೆಯ ಇಸ್ವಿಯಲ್ಲಿ [ ೨೪-೨-೩೬ ] ಕಡೂರ ಹತ್ತರ ಏಳು ದಿನ ನಡೆದ ನಿಜಗುಣ ಶಿವಯೋಗಿ ಸ್ಮಾರಕದ "ಸಾಹಿತ್ಯಸುಗ್ಗಿ"ಯ ಉದ್ಘಾಟನ ಸಮಾರಂಭವನ್ನು ನೆರವೇರಿಸಲಿಕ್ಕೆ ಶ್ರೀ. ಎಚ್. ಶಿವಮೂರ್ತಿ ಸ್ವಾಮಿಯವರಿಂದ ಆಮಂತ್ರಿಸಲ್ಪಟ್ಟಾಗ ಹೋಗಿ ಏಳು ದಿವಸ ನಾನೂ ಶ್ರೀ. ನಂದೀಮಠ ಇವರೂ ಇದ್ದಾಗ ಕರ್ನಾಟಕತ್ವದ ಪ್ರಚಾರಕ್ಕೆ ಅನುವು ದೊರೆಯಿತು. ಹಾಸನದಲ್ಲಿ ಕುಮಾರವ್ಯಾಸರ ಸ್ಮಾರಕೋತ್ಸವ ಜರುಗಿಸಿದೆ. ಲಕ್ಷ್ಮೇಶ್ವರದಲ್ಲಿ ಪಂಪ ಉತ್ಸವವಾಯಿತು. ನೆನಪಿದ್ದಷ್ಟು ಕೊಟ್ಟಿರುವೆ. ಮರೆತಿದ್ದರೆ ಕ್ಷಮಿಸಬೇಕು.

**ಧಾರವಾಡವೇ ಕರ್ನಾಟಕತ್ವದ ಕೇಂದ್ರ** :— ಕರ್ನಾಟಕತ್ವದ ಸಂಬಂಧವಾಗಿ ೧೯೧೪ರ ವರೆಗೆ ನಾನು ಬಹುಶಃ ಒಬ್ಬೊಂಟಿಗನಾಗಿಯೇ ಕಾರ್ಯ ಮಾಡಿದೆನೆಂದು ಹೇಳಬಹುದು. ಅಲ್ಲಿಯ ವರೆಗೆ ನನ್ನ ಬೆಂಬಲಕ್ಕೆ ಶ್ರೀ. ನಾರಾಯಣ ಶ್ರೀನಿವಾಸ ರಾಜಪುರೋಹಿತ ಎಂಬವರು ನನ್ನಂತೆಯೇ ಸರ್ವಸ್ವವನ್ನು ತ್ಯಾಗಮಾಡಿ ದಾರಿದ್ರ್ಯ ದೀಕ್ಷೆಯನ್ನು ತಕ್ಕೊಂಡು ಕರ್ನಾಟಕತ್ವಕ್ಕಾಗಿ ದುಡಿದರು. ಅವರ ಕ್ಷೇತ್ರವು ಐತಿಹಾಸಿಕ ವಿಷಯಕ್ಕೆ ಮಾತ್ರ ಮರ್ಯಾದಿತವಾಗಿತ್ತು. ಶ್ರೀ. ನರಗುಂದಕರ ರಾಮರಾಯರು ಮತ್ತು ನನ್ನ ವಕೀಲಿಯಲ್ಲಿ ಪಾಲುಗಾರರಾದ ಶ್ರೀ. ಮುದವೇಡಕರ ವೆಂಕಟರಾಯರು ಇಬ್ಬರೂ ವಕೀಲಿ ಮಾಡಿಕೊಂಡು ನನಗೆ ಸಹಾಯಕರಾಗಿದ್ದರು. ಮುಂದೆ ಬರಬರುತ್ತ ನನ್ನ ಸಹಾಯಕರ ಸಂಖ್ಯೆ ಬೆಳೆಯಿತು.

**ಸಪ್ತಋಷಿಗಳು** :— ಏಳು ಜನರದೊಂದು ಗುಂಪು ಕಟ್ಟಲ್ಪಟ್ಟಿತು. ಆ ಏಳು ಜನರು ಯಾರೆಂದರೆ (೧) ಸ್ವತಃ ನಾನು. (೨) ಶ್ರೀ. ನಾರಾ-



ಶ್ರೀ. ಆಲೂರ ವೆಂಕಟರಾಯರು ಮತ್ತು ಶ್ರೀ. ಮುದವೀಡು ವೆಂಕಟರಾಯರು

ಯಣ ರಾಜಪುರೋಹಿತರು. ( ೩ ) ಶ್ರೀ. ಕಡಪಾ ರಾಘವೇಂದ್ರರಾಯರು. ( ೪ ) ಶ್ರೀ. ಮುದವೇಡ ಕೃಷ್ಣರಾಯರು. ( ೫ ) ಶ್ರೀ. ಮುದವೇಡ ವೆಂಕಟ ರಾಯರು. ( ೬ ) ಶ್ರೀ. ನರಗುಂದಕರ ರಾಮರಾಯರು. ( ೭ ) ಶ್ರೀ. ನಾರಾ-ಯಣರಾವ ದೇಶಪಾಂಡೆ ವಕೀಲರು. ನಾವು ಸರ್ವತ್ರ ಜಾಗ್ರತಿಯನ್ನು ಮಾಡುವ ನಿಶ್ಚಯ ಮಾಡಿದೆವು. ಈ ಏಳು ಜನರಿಗೇನೇ ನಮ್ಮ ಕರ್ನಾಟಕತ್ವಕ್ಕೆ ವಿರೋಧಿಗಳಾದ ಇಲ್ಲಿಯ 'ಕರ್ನಾಟಕ—ಮರಾಟಿಗರು' ಅಪಹಾಸ ಮಾಡುವದಕ್ಕಾಗಿ "**ಸಪ್ತಋಷಿ**"ಗಳೆಂದು ಹೆಸರಿಟ್ಟರು. ಆ ಅಪಹಾಸ್ಯದ ಹೆಸರೇ ಮುಂದೆ 'ಗೌರವದ ಬಿರುದಾಯಿತು.' ಈ ಹೆಸರಿಟ್ಟವರು ನನ್ನ ಪರಮ ಸ್ನೇಹಿತರಾದ ಶ್ರೀ. ಬಳವಂತರಾವ ಜಠಾರ, ಬಿ.ಎ., ಎಲ್‌ಎಲ್. ಬಿ. ಇವರೇ. ಇವರು ಮರಾಠಿ-ಕನ್ನಡ ವಾದದಲ್ಲಿ ನಮಗೆ ವಿರೋಧಿಗಳು. ಆದರೆ ಆ ವಿರೋಧ ದಿಂದ ನಮ್ಮಿಬ್ಬರ ಸ್ನೇಹದಲ್ಲಿ ತಿಲಪ್ರಾಯವೂ ವ್ಯತ್ಯಯ ಬರಲಿಲ್ಲ. ಇಷ್ಟೇ ಅಲ್ಲ, ನಮ್ಮ ಆ ಚಳವಳಿ ಯಶಸ್ವಿ ಆದಾಗ ಮುಂದೆ ನಾನು ಜಯ ಕರ್ನಾಟಕ ಮಾಸಪತ್ರಿಕೆಯನ್ನು ತೆಗೆದಾಗ ಅವರು ಅದರ ಮುದ್ರಕರೂ ಸಮಪಾಲುಗಾರರೂ ಆದರು. ಇವರೆಲ್ಲರಿಗೂ ನನ್ನ ಮೇಲೆ ಪೂರ್ಣ ವಿಶ್ವಾಸ.

ವಾಚಕರು ನೆನಪಿನಲ್ಲಿಡತಕ್ಕ ಮಾತೇನೆಂದರೆ, ನಾನು ಮುಂದೆ ಹೇಳುವ ಚಟುವಟಿಕೆಗಳನ್ನು 'ನಾನು' ನಡಿಸಿದೆನೆಂದು ಹೇಳಿದಾಗ ನಾನು ಒಬ್ಬನೇ ಅವನ್ನು ನಡೆಸಿದೆನೆಂದು ಯಾರೂ ತಿಳಿಯಕೂಡದು. ಯಾವ ಚಟುವಟಿಕೆ ಗಾದರೂ ಮಿತ್ರರ ಬೆಂಬಲ ಬೇಕು. ಜನತೆಯ ಸಹಾನುಭೂತಿಯಂತೂ ಬೇಕೇಬೇಕು. ಆದ ಕಾರಣ ನಾನು ಇಂಥ ಚಟುವಟಿಕೆಯನ್ನು ನಡಿಸಿದೆನೆಂದು ಹೇಳುವದರಲ್ಲಿ ನನ್ನ ಮುಖ್ಯ ಉದ್ದೇಶವು, ಅದರಲ್ಲಿ ನಾನು ಪ್ರಮುಖನಾಗಿ ಭಾಗವಹಿಸಿದೆನೆಂದು ಅರ್ಥವೆಂದು ಪುನಃ ಹೇಳುವೆ. ಕೆಲವು ನನ್ನ ಸ್ವತಂತ್ರ ಕಲ್ಪನೆ ಯಿಂದ ಉದ್ಭವಿಸಿದವುಗಳು. ಕೆಲವು ಅನ್ಯರ ಪ್ರೇರಣೆಯಿಂದ ಕೈಕೊಂಡವುಗಳು.

**ಕರ್ನಾಟಕ ಸಭೆಯೂ ಕಡಪಾ ರಾಘವೇಂದ್ರರಾಯರೂ :–** 'ಸಪ್ತಋಷಿಗಳು' ಕೈಕೊಂಡ ಚಳವಳಿಗಳು ಬಹುಶಃ 'ಕರ್ನಾಟಕ ಸಭೆ'ಯ ಮುಖಾಂತರವಾಗಿಯೇ ನಡೆದವು. ಈ ಸಂಸ್ಥೆಯು ೧೯೧೫ರಲ್ಲಿ ಸ್ಥಾಪಿಸ ಲ್ಪಟ್ಟಿತು. ಶ್ರೀ. ಗದಿಗೆಯ್ಯ ಹೊನ್ನಾಪುರಮಠ ವಕೀಲ ಇವರ ಅಟ್ಟದ

ಮೇಲೆ ನಾಲ್ಕಾರು ಜನರಿಂದ ಸ್ಥಾಪಿತವಾದದ್ದೇ ಈ ಕರ್ನಾಟಕ ಸಭೆಯು. ಇದರ ಉದ್ದೇಶವು, ಅಖಂಡ ಕರ್ನಾಟಕ ನಿರ್ಮಾಣಕ್ಕಾಗಿ ಸರ್ವವಿಧ ಚಟುವಟಿಕೆಗಳನ್ನು ಮಾಡುವದು. ಅದಕ್ಕಾಗಿ ಹೊರಟ ಸಂಸ್ಥೆ. ಆದಕ್ಕೆ ನಾನೂ ಕಡಪಾ ರಾಘವೇಂದ್ರರಾಯರೂ ಕಾರ್ಯದರ್ಶಿಗಳು. ಪುಣೆ, ಮುಂಬಯಿಗಳೊಡನೆ ಮತ್ತು ಕಾಂಗ್ರೆಸ್ಸಿನೊಡನೆ ನನ್ನ ಸಂಬಂಧವು ಮೊದಲಿಸಿಂದಲೂ ಇದ್ದುದರಿಂದ ರಾಜಕಾರಣವೇ ಮೊಂತಾದ ಚಳವಳಿ ಕಡೆಗೆ ನಾನು ಹೆಚ್ಚು ಲಕ್ಷಗೊಟ್ಟೆನು. ಮತ್ತು ಕಡಪಾ ರಾಘವೇಂದ್ರರಾಯರು ಕರ್ನಾಟಕ ಚಳವಳಿಯನ್ನು ಕೈಕೊಂಡರು. ಆಗಿನ ಕರ್ನಾಟಕ ಚಳವಳಿಯ ಶ್ರೇಯವು ನನಗಿಂತ ಅವರಿಗೆ ಹೆಚ್ಚಿಗಿರುತ್ತದೆ. ಅವರು ವಕೀಲಿ ನಡೆಸಿದ್ದರೂ ತಮ್ಮ ಉತ್ಸಾಹವನ್ನೆಲ್ಲ ಕರ್ನಾಟಕ ಚಳವಳಿಯ ಪ್ರಸಾರಕ್ಕಾಗಿ ಅರ್ಪಿಸಿದರು. ನಾನು ವಾಗ್ಮಿಯಲ್ಲ. ಅವರು ಉತ್ಕೃಷ್ಟ ವಾಗ್ಮಿಗಳು, ನಾನು ಯೋಧನಲ್ಲ. ಅವರು ವೀರ ಯೋಧರು. ಅವರು ಕೇವಲ ೧೦-೧೨ ವರ್ಷಗಳ ವರೆಗೆ ಮಾತ್ರ ಕಾರ್ಯ ಮಾಡಿದರೂ (೧೯೧೫ರಿಂದ ೧೯೨೭). ಆದರೆ ಅಷ್ಟರಲ್ಲಿ ಅವರು ಮಾಡಿದಷ್ಟು ಕಾರ್ಯವು ಮತ್ತಾರಿಂದಲೂ ಆಗಲಿಲ್ಲ. ಅದು ಅತ್ಯದ್ಭುತವಾಗಿದೆ. ಅಖಂಡ ಕರ್ನಾಟಕ ಚಳವಳಿಯಲ್ಲಿ ಅವರು ವಹಿಸಿದ ಪಾತ್ರವು ಬಹಳ ಮುಖ್ಯವಾಗಿದೆ. ಒಂದು ಲಕ್ಷ ಸಹಿಗಳನ್ನು ಕೂಡಿಹಾಕಿ ಮಾಂಟೇಗೋ ಚೇಮ್ಸ್‌ಫರ್ಡ ಕಮಿಟಿಗೆ ಅಖಂಡ ಕರ್ನಾಟಕ ಮನವಿಯನ್ನು ಅರ್ಪಿಸಿದವರಲ್ಲಿ ಅವರೇ ಮುಖ್ಯರು. ಅವರು ಪ್ರತಿನಿತ್ಯ ಒಂದೇಸವನೆ ಧಾರವಾಡ ಮುನಸಿಪಾಲಿಟಿಗೆ ಹೊಂದಿರುವ ವಿಶಾಲವಾದ ಬೈಲಿನಲ್ಲಿ ಸ್ಫೂರ್ತಿದಾಯಕವಾದ ಭಾಷಣಗಳನ್ನು ಮಾಡಿ ಜನರನ್ನು ಹುರಿದುಂಬಿಸುತ್ತಿದ್ದರು. ಸಾವಿರಾರು ಜನರು ಅವರ ಕರೆಗೆ ಓಗೊಟ್ಟರು. ಶಾಂತಕವಿಗಳೊಡನೆ (ಶ್ರೀ. ಬಾಳಾಚಾರ್ಯ ಸಕ್ಕರಿ) ನಾನೂ ಅವರೂ ಬೆಳಗಾವಿಗೆ ಹೋಗಿ ಅದನ್ನೂ ಎಬ್ಬಿಸಿದೆವು. ಅಥಣಿಗೆ ಹೋಗಿ, ನಾನೂ ಅವರೂ ಕರ್ನಾಟಕಕ್ಕೆ ಪ್ರತ್ಯೇಕವಾಗಿ ರಾಜಕೀಯ ಪರಿಷತ್ತನ್ನು ಕೂಡಿಸುವ ಅವಶ್ಯಕತೆಯನ್ನು ತಿಳಿಸಿದೆವು. ಶಾಂತಕವಿಗಳೂ ಅವರೂ ಕರ್ನಾಟಕವನ್ನೆಲ್ಲ ಸುತ್ತಾಡಿ ಜಾಗ್ರತಿಯನ್ನು ಮಾಡಿದರು. ಕಡಪಾ ರಾಘವೇಂದ್ರರಾಯರ ಅದ್ಭುತವಾದ ಚಳವಳಿಯ ಮೂಲಕವೇ ಧಾರವಾಡ ಮ್ಯುನಿಸಿಪಾಲಿಟಿಗೆ ಹೊಂದಿರುವ ಬೈಲಿಗೆ ಇಂದಿಗೂ "ಕಡಪಾ ಬೈಲು" ಎಂದು ಹೆಸರು ಬಿದ್ದಿದೆ.

ಅದು ಇಟ್ಟ ಹೆಸರಲ್ಲ; ಜನತೆಯು ತಾನಾಗಿಯೇ ಕರೆದ ಹೆಸರು. ಮುಂದೆ ಅವರು ಅಸಹಕಾರ ಚಳವಳಿಯಲ್ಲಿ ನನ್ನಂತೆಯೇ ವಕೀಲಿಯನ್ನು ಬಿಟ್ಟು ಕಾಂಗ್ರೆಸ್ ಚಳವಳಿಯನ್ನು ಅಷ್ಟೇ ಜೋರಿನಿಂದ ನಡೆಸಿದರು. ದುರ್ದೈವ ದಿಂದ ಅವರು ೧೯೨೭ರಲ್ಲಿ ಅಕಾಲ ಮೃತ್ಯುಗೀಡಾದರು. ಆದರೆ ಅವರ ಹೆಸರು ಕರ್ನಾಟಕ ಚಳವಳಿಯಲ್ಲಿ ಅಜರಾಮರವಾಗಿ ನಿಂತಿದೆ.

ಅವರು ಬಂದು ನನ್ನನ್ನು ಕೂಡಿದ ಕಥೆ ಬಹಳ ಚಮತ್ಕಾರದ್ದಾಗಿದೆ. ಅವರು ಮೂಲತಃ ಅನಂತಪುರ ಜಿಲ್ಲೆಯವರು. ಮಾತೃಭಾಷೆ ಕನ್ನಡ. ಆದರೆ ಮುಂಚಿನಿಂದ ಕಲಿತದ್ದು ತೆಲುಗು. ಬಿ. ಎ. ಪಾಸಾದ ಬಳಿಕ ಹೊಟ್ಟೆ ತುಂಬಿ ಕೊಳ್ಳುವದಕ್ಕಾಗಿ ಬಂದು, ಮಿಶನ್ ಹಾಯಸ್ಕೂಲಿನಲ್ಲಿ ಶಿಕ್ಷಕರಾಗಿದ್ದರು. ಇಂಗ್ಲಿಷಿನಲ್ಲಿ ನಿಷ್ಣಾತರು; ಮತ್ತು ಉತ್ಕೃಷ್ಟ ವಕ್ತಾರರು. (ನಾನು ನಡುವೆ ಕೆಲ ವರುಷ ವಕೀಲಿ ವೃತ್ತಿಯನ್ನು ಕೈಕೊಂಡಿದ್ದೆನು. ಆದರೆ ಹೆಸರಿಗೆ ಮಾತ್ರ ವಕೀಲನಾಗಿದ್ದೆನು. ನಾನೂ ಶ್ರೀ. ಮುದವೇಡ ವೆಂಕಟರಾಯರೂ ಪಾಲಿ ನಿಂದ ವಕೀಲಿ ನಡೆಸಿದ್ದೆವು. ಆದರೆ ಅವರು ವಕೀಲಿ ಭಾರವನ್ನು ಬಹುಶಃ ತಾವೇ ಹೊತ್ತುಕೊಂಡು ನನ್ನನ್ನು ಸಾರ್ವಜನಿಕ ಕಾರ್ಯಕ್ಕೆ ಮೀಸಲಾಗಿ ಬಿಟ್ಟಿದ್ದರು.) ಇರಲಿ, ನಾವು ವಕೀಲೀ ಮಾಡುವ ಮುಂದಿನ ಮನೆಯ ಲ್ಲಿಯೇ ಕಡಪಾ ರಾಘವೇಂದ್ರರಾಯರು ಇರುತ್ತಿದ್ದರು. ನನಗೂ ಅವರಿಗೂ ಸ್ನೇಹವುಂಟಾಯಿತು. ಆಗ ಅವರು ವಕೀಲರಾದರು. ನಾನು ಅವರನ್ನು ಐತಿಹಾಸಿಕ ಕ್ಷೇತ್ರಗಳಿಗೆ ಕರೆದುಕೊಂಡು ಹೋಗುತ್ತಿದ್ದೆ. ಶ್ರೀ. ಕೆ. ಎನ್. ದೀಕ್ಷಿತ ಎಂಬ ತರುಣ ಪದವೀಧರರು ಶಿಲಾಲಿಪಿ ಖಾತೆಯಲ್ಲಿ ಆದೇ ಸೇರಿ ದ್ದರು. (ಅವರು ಮುಂದೆ ಇಡೀ ಹಿಂದುಸ್ತಾನಕ್ಕೆ ಶಿಲಾಲಿಪಿ ಖಾತೆಯ ಮುಖ್ಯಾಧಿಕಾರಿಗಳಾಗಿದ್ದರು.) ಅವರನ್ನು ಆಗ ನಾನು ಗುಡಿಗೇರಿ, ಲಕ್ಷ್ಮೇಶ್ವರ ಮುಂತಾದ ಊರುಗಳಲ್ಲಿಯ ಶಿಲಾಲಿಪಿಗಳನ್ನು ತೋರಿಸಲಿಕ್ಕೆ ಕರೆದು ಕೊಂಡು ಹೋಗಿದ್ದೆ. ಶ್ರೀ. ಕೆ. ಎನ್. ದೀಕ್ಷಿತರು ಸಂಶೋಧನೆಯಲ್ಲಿ ತನ್ಮಯರು. ಆದರೆ ರಾಘವೇಂದ್ರರಾಯರಿಗೆ ಮಾತ್ರ ಅದೊಂದು ವಿನೋದದ ವಿಷಯವಾಗಿತ್ತು. ನಾನೂ ರಾಘವೇಂದ್ರರಾಯರೂ ಬಾದಾಮಿ, ಪಟ್ಟದ ಕಲ್ಲು, ಐಹೊಳೆಗಳಿಗೂ ಹೋಗಿಬಂದೆವು. ಬಾದಾಮಿಯಿಂದ ಬಂಡಿಯಲ್ಲಿ ಪ್ರವಾಸ. ಆ ಹಾದಿಯಲ್ಲಿ ತುಂಬಾ ಗುಂಡುಕಲ್ಲುಗಳು. ನಮ್ಮ ಚಕ್ಕಡಿ,

ಸೆರೆಕುಡಿದವರಂತೆ, ಒಗ್ಗಾಲಿಯಾಗುತ್ತ ಹೋಗಬೇಕಾಗಿತ್ತು. ಕಲ್ಲು ದುಂಡೆಗಳಿಗೆ ತಾಕಿ "ಖಡಲ್ ಫಡಲ್" ಎಂಬ ಸಪ್ಪಳದಲ್ಲಿಯೇ ಸಾಗಿತ್ತು. ಅದಕ್ಕೆ ರಾಘವೇಂದ್ರರಾಯರು ಬೇಸತ್ತರು. ಐಹೊಳೆ ಮುಂತಾದವುಗಳಲ್ಲಿಯ ಸುಂದರವಾದ ಮೂರ್ತಿಗಳನ್ನು ನೋಡಿ ಅವರಿಗೆ ಆನಂದವೇನೋ ಆಯಿತು. ಆದರೆ ಅವುಗಳ ಮಹತ್ವ ತಿಳಿಯಲಿಲ್ಲ. ಹೀಗೆ ಅಡವೀಚಿಂಚೆಯರಂತೆ ಹೋಗುವದರಲ್ಲಿ ಯಾವ ಪುರುಷಾರ್ಥವಿದೆ—ಎಂದು ಅವರು ಅನ್ನುತ್ತಿದ್ದರು. ಪ್ರವಾಸ ಮುಗಿದ ಬಳಿಕ ನನ್ನ ಇತಿಹಾಸದ ಗುಂಗು ಅವರಿಗೆ ಒಂದು ಹಾಸ್ಯದ ವಿಷಯವಾಗಿತ್ತು. ನಾನು ವಕೀಲರ ಕೋಣೆಗೆ ಹೋದ ಕೂಡಲೆ, ವೆಂಕಟರಾಯರ ಇತಿಹಾಸವೆಂದರೆ "ಖಡಲ್ ಫಡಲ್" ಎಂದು ತಿಂಗಳಾನುಗಟ್ಟಲೆ ಚೇಷ್ಟೆ ಮಾಡಹತ್ತಿದ್ದರು. ಮತ್ತು ನನಗೆ "ಪುಲಕೇಶಿ"ಯೆಂದು ಕರೆಯುತ್ತಿದ್ದರು.

**೩. ಕಡಪಾ ರಾಘವೇಂದ್ರರಾಯರ ಜೀವನದಲ್ಲಿ ಆದ ಕ್ರಾಂತಿ:**— ಹೀಗಿರುವಾಗ ಮುಂದೆ ತುಸು ದಿವಸಗಳಲ್ಲಿ ೧೯೧೭ರಲ್ಲಿ ಕರ್ನಾಟಕ ಗತವೈಭವವು ಪೂರ್ಣ ಮುದ್ರಿತವಾಯಿತು. ಅದನ್ನು ಅವರು ಓದಿದರು. ಇದೇ ಸುಮಾರಕ್ಕೆ ಆಂಧ್ರ ಚಳವಳಿಯ ಪುಸ್ತಕವು ಅವರ ಕೈಗೆ ಬಿದ್ದಿತು. ಇವೆರಡೂ ಕೂಡಿ ಅವರ ಜೀವನದಲ್ಲಿ ದೊಡ್ಡ ಕ್ರಾಂತಿಯನ್ನೇ ಮಾಡಿದವು. ಅವರಲ್ಲಿ ದೈವೀ ಪ್ರೇರಣೆಯಾಯಿತು. ಆದರೆ ಅದು ಇನ್ನೂ ಹೊಟ್ಟೆಯಲ್ಲಿಯೇ ಇತ್ತು. ಹೊರಬಿದ್ದಿದ್ದಿಲ್ಲ. ನಮಗಾರಿಗೂ ಅದು ಗೊತ್ತಿರಲಿಲ್ಲ. ಒಂದು ದಿವಸ ಕರ್ನಾಟಕ ವಿದ್ಯಾವರ್ಧಕ ವಾರ್ಷಿಕೋತ್ಸವ. ಜೋಶಿ ವಿನಾಯಕರಾಯರು ಅಧ್ಯಕ್ಷರು. ಉತ್ಸವ ಮುಗಿಯಿತು. ರಾಘವೇಂದ್ರರಾಯರು ಉತ್ಸವಕ್ಕೆ ಬಂದಿದ್ದರೇನೋ ಸರಿ. ಉತ್ಸವದಲ್ಲಿ ಯಾವ ಭಾಗವನ್ನೂ ತಕ್ಕೊಂಡಿದ್ದಿಲ್ಲ. ಅಧ್ಯಕ್ಷರ ಭಾಷಣವೂ ಮುಗಿಯಿತು. ಒಮ್ಮಿಂದೊಮ್ಮೆ ರಾಘವೇಂದ್ರರಾಯರಿಗೆ ಎಲ್ಲಿಂದ ಸ್ಫೂರ್ತಿ ಉಂಟಾಯಿತೋ ಏನೋ ಅವರು ಅಧ್ಯಕ್ಷರ ಉಪಕಾರ ಸ್ಮರಿಸುವ ನೆವದಿಂದ ಎದ್ದರು. ಆಗ ಅವರ ಮೋರೆಯ ಮೇಲೆ ವಿಲಕ್ಷಣ ತೇಜ ಉಕ್ಕುತ್ತಿತ್ತು. ಕೆಲವು ದಿವಸಗಳಿಂದ ಅವರ ಒಳಮನಸ್ಸಿನಲ್ಲಿ (Sub-consious) ಕುದಿಯುತ್ತಿದ್ದ ಕರ್ನಾಟಕದ ಅಭಿಮಾನವು ಉಕ್ಕಿ ಬಂದು, ಭೋರ್ಗರೆದು ಹರಿದು ಅವರ ಮುಖದಿಂದ ಹೊರಬಿತ್ತು.

ಅವರ ಆವೇಶದ ಅತಿರೇಕವು ಎಲ್ಲಿಯ ವರೆಗೆ ತಲುಪಿತೆಂದರೆ, ಅವರು ಅದರ ಭರದಲ್ಲಿ ತಮ್ಮ ಉತ್ಕಟ ಸ್ವಭಾವಕ್ಕನುಗುಣವಾಗಿ ನನ್ನನ್ನು ತರಗಾ ಬರಗಾ ಹೊಗಳಿ, ವಿವೇಕವನ್ನು ಬಿಟ್ಟು ಹಿಂದುಮುಂದೆ ನೋಡದೆ ಆ ಸಭೆಯಲ್ಲಿ ಉದ್ದಕ್ಕೆ ನನಗೆ ಸಾಷ್ಟಾಂಗ ನಮಸ್ಕಾರ ಹಾಕಿಬಿಟ್ಟು, ಇಂದಿನಿಂದ ನಿಮ್ಮ ಶಿಷ್ಯನಾದೆ ಎಂದರು! ಎಲ್ಲರೂ ಅತ್ಯಂತ ಚಕಿತರಾದರು! ಎಲ್ಲರ ಕಣ್ಣಲ್ಲಿ ನೀರು ತುಂಬಿದವು. ಅವರಿಗೆ ನಾನು ಹೇಗೆ ಸ್ಫೂರ್ತಿ ಕೊಟ್ಟೆನೆಂಬುದು ನನ ಗೇನೇ ತಿಳಿಯಲಿಲ್ಲ. ನಿಜವಾಗಿ, ಅವರಲ್ಲಿಯೇ ಆ ಕಿಡಿ, ಅವರಿಗೂ ಕೂಡ ತಿಳಿಯದಂತೆ ಹೊತ್ತುತ್ತಲೇ ಇರಬೇಕು. ಕೊನೆಗೆ, ಅದಕ್ಕೆ ಮುಖ ದೊರೆ ಯಲಿಕ್ಕೆ ನನ್ನ ಪುಸ್ತಕ ನಿಮಿತ್ತಕಾರಣವಾಗಿರಬೇಕು. ಇಲ್ಲದಿದ್ದರೆ ನಾನೂ ಅವರೂ ಅನೇಕ ಸಲ ಪ್ರವಾಸ ಮಾಡಿದಾಗ ಅವರು ನನ್ನ ಸಹವಾಸದಲ್ಲಿದ್ದರೂ ಆಗ ಏಕೆ ಆ ಪರಿಣಾಮವಾಗಬಾರದು? ಕರ್ನಾಟಕವನ್ನು ಜಾಗ್ರತಗೊಳಿಸುವ ಕಾರ್ಯದಲ್ಲಿ ಅವರು ಮಾಡಿದ ೪ದಷ್ಟು ಕೆಲಸವೂ ನನ್ನಿಂದ ಆಗಿಲ್ಲವೆಂಬು ದನ್ನು ಪ್ರಾಂಜಲ ಮನಸ್ಸಿನಿಂದ ಒಪ್ಪುತ್ತೇನೆ.

**ಮರಾಠಿ ಕನ್ನಡ ವಾದ** :— ಕರ್ನಾಟಕತ್ವವನ್ನು ಕುರಿತು ಬರೆ ಯುವಾಗ ಕನ್ನಡ ಮರಾಠಿ ವಾದವನ್ನು ಕುರಿತು ಉಲ್ಲೇಖಿಸುವದು ಅವಶ್ಯ ವಿದೆ. ನಿಜವಾಗಿ ಈಗಿನವರಿಗೆ ಅದರ ಕಲ್ಪನೆಯು ಕೂಡ ಬರಲಿಕ್ಕೆ ಶಕ್ಯ ವಿಲ್ಲ. ೫೦ ವರ್ಷಗಳ ಹಿಂದೆ ಕರ್ನಾಟಕದ ಸ್ಥಿತಿ ಹೀಗಿತ್ತು—ಬೆಳಗಾವಿ ಯಂತೂ ಮರಾಠಿಗರ ಬಾಯಿಯಲ್ಲಿ. ಅಲ್ಲಿ ಮರಾಠಿ-ಕನ್ನಡ ವಾದಗಳ ಬಿರು ಗಾಳಿಗಳು ಮೇಲಿಂದ ಮೇಲೆ ಏಳುತ್ತಿದ್ದವು. ಸ್ವತಃ ಕನ್ನಡಿಗರಲ್ಲಿಯೇ ಮರಾಠಿ ಮೋಹ. ಆದ ಕಾರಣ ಆಗ ಕನ್ನಡ ಕಟ್ಟಾಭಿಮಾನಿಗಳ ಸಂಖ್ಯೆ ಬಹಳ ಕಡಿಮೆ. ಉತ್ತರ ಕರ್ನಾಟಕದ ಮಧ್ಯಸ್ಥಳವಾದ ಧಾರವಾಡ ಜಿಲ್ಲೆ ಯಲ್ಲಿಯೂ ಮುಖ್ಯ ಮುಖ್ಯ ಪಟ್ಟಣಗಳಲ್ಲಿ ದೊಡ್ಡ ದೊಡ್ಡ ವಕೀಲರೆಂದರೆ ಮರಾಠಿಗರೇ. ಆ ಕಾಲದಲ್ಲಿ ವಕೀಲರೇ ಸಾರ್ವಜನಿಕ ಚಳವಳಿಗಾರರು. ಆದ ಕಾರಣ ಧಾರವಾಡದಲ್ಲಿ ಕೂಡ ಮರಾಠಿಯಲ್ಲಿಯೇ ಭಾಷಣಗಳು. ಕನ್ನ ಡದ ದುರ್ದೈವದಿಂದ ಇಲ್ಲಿಯ ಕನ್ನಡಿಗರಿಗೂ ಸೊಟ್ಟಪಟ್ಟ ಮರಾಠಿಯು ಬರುತ್ತಿತ್ತು. ೧೯೦೫ರಲ್ಲಿ ಬಂದು ನೋಡುತ್ತೇನೆ, ಇಂಥ ದುಸ್ಥಿತಿಯು. ನಾವು ಕೆಲವು ಕನ್ನಡ ಅಭಿಮಾನಿಗಳು, ಮುಖ್ಯರಾದ ವಕೀಲರೊಡನೆ ಕನ್ನಡ

ದಲ್ಲಿ ಮಾತನಾಡಿದರೂ ಅವರು ಮರಾಠಿಯಲ್ಲಿಯೇ ಮಾತನಾಡುತ್ತಿದ್ದರು ! ಬೆಳಗಾವಿ, ಧಾರವಾಡ ಎರಡೂ ಜಿಲ್ಹೆಗಳ ಕೋರ್ಟು ಭಾಷೆ ಕನ್ನಡ. ಈ ಮುಖಂಡ ವಕೀಲರು ಕನ್ನಡ ಬರುತ್ತದೆಂದು ಸನದು ತೆಗೆದುಕೊಂಡವರು ! ಆಗ ನಮ್ಮೊಡನೆ ಮಾತನಾಡುವಾಗ ಕನ್ನಡದಲ್ಲಿ ಉತ್ತರ ಕೊಡಿರೆಂದು ಕೇಳಿ ಕೊಂಡೆವು. ಅವರು ಅದಕ್ಕೆ ಕಿವಿಗೊಡಲಿಲ್ಲ. ದುರಭಿಮಾನಕ್ಕೆ ಬಿದ್ದರು ! ಈ ಸ್ಥಿತಿ ಹತ್ತೆಂಟು ವರ್ಷ ಹಾಗೂ ಹೀಗೂ ಸಹಿಸಿದೆವು. ಕರ್ನಾಟಕ ಸಭೆ ಸ್ಥಾಪನವಾದಾಗ ಈ ಸ್ಥಿತಿಯನ್ನು ನಿಲ್ಲಿಸಲು ನಿಶ್ಚಯಿಸಿದೆವು. ಮರಾಠಿ ಗರು ತುಸು ವಿಚಾರ ಮಾಡಿ ನೋಡಿದ್ದರೆ ಈ ವಾದದ ಬೇರೇ ಕತ್ತರಿಸಿ ಬೀಳು ತ್ತಿತ್ತು. ಆಗ ನಾವು ಅವರನ್ನು ಕೇಳಿಕೊಂಡದ್ದು ಇಷ್ಟೇ ! ಏನೆಂದರೆ, ಸಾರ್ವಜನಿಕ ಸಭೆಗಳಲ್ಲಾದರೂ ಕನ್ನಡದಲ್ಲಿಯೇ ಮಾತನಾಡಿರಿ. ಈಗಿನ ಜನತೆಗೆ ಮರಾಠಿ ತಿಳಿಯುವದಿಲ್ಲ. ಹಿಂದಿನ ಪೀಳಿಗೆಯವರಿಗೆ ಸ್ವಲ್ಪ ಸ್ವಲ್ಪ ತಿಳಿಯುತ್ತಿತ್ತು—ಎಂದು ಅವರನ್ನು ಕೇಳಿಕೊಂಡೆವು. ಮರಾಠಿಗರು ಹಟ ವನ್ನು ಬಿಡಲಿಲ್ಲ. ಆಗ ಸಾರ್ವಜನಿಕ ಸಭೆಗಳಲ್ಲಿ ನಾವು ಕನ್ನಡಿಗರು ನಿಮಗೆ ಮರಾಠಿಯಲ್ಲಿ ಮಾತನಾಡಗೊಡಲಿಕ್ಕಿಲ್ಲೆಂದು ಪಣ ತೊಟ್ಟೆವು. ಏಕೆಂದರೆ ಕರ್ನಾಟಕದಲ್ಲಿಯ ಸಾರ್ವಜನಿಕ ಜೀವನವು ಕನ್ನಡದಲ್ಲಿಯೇ ನಡೆಯ ಬೇಕೆಂಬುದು ಕನ್ನಡಿಗರ ಜನ್ಮಸಿದ್ಧ ಹಕ್ಕು ಆಗಿದೆ. ದುರಭಿಮಾನಿಗಳಾದ ಮರಾಠಿಗರು ಮರಾಠಿಯಲ್ಲಿಯೇ ಮಾತನಾಡುವೆವೆಂದು ಹಟಹಿಡಿದರು. ಆಗ ನಮಗೂ ಅವರಿಗೂ ವಾಗ್ಯುದ್ಧ ಸುರುವಾಯಿತು. ಮರಾಠಿಗರ ಹಟವನ್ನು ತಗ್ಗಿಸುವದಕ್ಕೆ ಯುದ್ಧ ಮಾಡಿದ ಮುಖ್ಯ ವ್ಯಕ್ತಿಯೆಂದರೆ ಕಡಪಾ ರಾಘ- ವೇಂದ್ರರಾಯರು. ಅರ್ಥಾತ್ ಇದು ಶಾಂತ ಯುದ್ಧವು. ನಾಲ್ಕಾರು ವರ್ಷ ಗಳಲ್ಲಿ ನಮಗೆ ಸಂಪೂರ್ಣ ಯಶ ದೊರೆಯಿತು. ಅದರ ಪರಿಣಾಮವು ಇಡೀ ಕರ್ನಾಟಕದ ಮೇಲೆ ಆಯಿತು. ಮರಾಠಿಗರು ನಮ್ಮ ಮೇಲೆ ಭಾಷಾ ದ್ವೇಷದ ಆರೋಪವನ್ನು ಹೊರಿಸುತ್ತಿದ್ದರು. ಆದರೆ ಅದು ನಿಜವಾಗಿ ಭಾಷಾ ದ್ವೇಷದ ಪ್ರಶ್ನೆಯಿದ್ದಿಲ್ಲ. ಇಲ್ಲಿಯ ಮ್ಯುನಸಿಪಾಲಿಟಿಗಳು ಮರಾಠಿ ಶಾಲೆ ಗಳನ್ನು ನಡಿಸುತ್ತಿದ್ದವು. ಮಹಾರಾಷ್ಟ್ರ ಭಾಷೋತ್ತೇಜಕ ಮಂಡಳವೂ ಇಲ್ಲೇ ಇದ್ದೇ ಇತ್ತು. ನಡುವೆ ಅದು ಬಂದಾಗಿತ್ತು. ಆಗ ಸ್ವತಃ ನಾನೇ ಅದನ್ನು ನಡಿಸಿ, ಮುಂದೆ ಅವರ ವಶಕ್ಕೆ ಕೊಟ್ಟೆನು. ಇವತ್ತಿಗೂ ಇಲ್ಲಿಯ

ಮರಾಠಿ ಲಾಯಬ್ರರಿಗಳ ಪುಸ್ತಕಗಳ ಮೇಲೆ, ನನ್ನ ವಾಚನಾಲಯದ ಶ್ರೀಕೃಷ್ಣ ಮುದ್ರೆಯ ಚಿಹ್ನವಿದೆ. ಸಾರಾಂಶ, ಇದು ಭಾಷಾದ್ವೇಷದ ಪ್ರಶ್ನೆಯಿದ್ದಿಲ್ಲ; ಹಕ್ಕಿನ ಪ್ರಶ್ನೆಯಿತ್ತು.

ಇಲ್ಲಿ ನಡೆದ ಈ ವಾಗ್ಯುದ್ಧವು ಧಾರವಾಡದಿಂದ ಮಿಕ್ಕ ಕರ್ನಾಟಕದಲ್ಲಿಯೂ ಈ ಚಳವಳಿಯನ್ನು ಹಬ್ಬಿಸಿತು. ಕರ್ನಾಟಕಕ್ಕೆ ಕಾಂಗ್ರೆಸ್ ಕರೆಯಲ್ಪಟ್ಟಾಗ ಅದನ್ನು ಯಾವ ಪಟ್ಟಣದಲ್ಲಿ ಕೂಡಿಸಬೇಕೆಂಬ ಬಗ್ಗೆ ಹುಬ್ಬಳ್ಳಿಯಲ್ಲಿ ದೊಡ್ಡ ಸಭೆ ನಡೆಯಿತು. ನಮ್ಮ ಎಲ್ಲರಿಗೂ ಪೂಜ್ಯರಾದ ದೇ. ಭ. ಗಂಗಾಧರರಾಯರೇ ಮುಖ್ಯ ಮುಂದಾಳುಗಳಾದ್ದರಿಂದ, ಅರ್ಥಾತ್ ಅವರ ಊರಾದ ಬೆಳಗಾವಿಯಲ್ಲಿಯೇ ಕೂಡುವದೆಂಬುದು ಕಟ್ಟಿಟ್ಟ ಮಾತಾಗಿತ್ತು. ಅಲ್ಲದೆ ಅದು ಮಿಕ್ಕ ಪಟ್ಟಣಗಳಿಗಿಂತ ಕಾಂಗ್ರೆಸ್ ಚಟುವಟಿಕೆಗಳಲ್ಲಿ ಮುಂದಾಗಿತ್ತು. ಯಾಕೆಂದರೆ, ಅಲ್ಲಿ ನೆಲೆಸಿದ ಮರಾಠಿ ವಕೀಲರ ಸಂಖ್ಯೆ ಹೆಚ್ಚು ಇತ್ತು. ಮಿಕ್ಕ ಕಡೆಗೆ ಕಾಂಗ್ರೆಸ್ಸಿನಲ್ಲಿ ಸೇರಿದವರ ಸಂಖ್ಯೆ ಬಹಳ ಕಡಿಮೆ. ನಮ್ಮಂಥವರು ಕೆಲವರು ಕಾರ್ಯ ಮಾಡುತ್ತಿದ್ದರೂ ಆಗ ಅಲ್ಪ ಸಂಖ್ಯಾಕರು. ನಮಗೆ ಆಗ ಮುಖ್ಯ ಅಂಜಿಕೆಯೆಂದರೆ, ಬೆಳಗಾವಿಯಲ್ಲಿ ಕಾಂಗ್ರೆಸ್ ಕೂಡಿದರೆ ಮರಾಠಿಯ ಮುದ್ರೆಯೇ ಅದಕ್ಕೆ ಬಿದ್ದು, ಅದು ಹೆಸರಿಗೆ ಮಾತ್ರ ಕರ್ನಾಟಕ ಕಾಂಗ್ರೆಸ್ಸ ಆಗುವದಲ್ಲಾ, ಎಂಬ ಅಂಜಿಕೆ ಕನ್ನಡ ಜನತೆಗೆ ಉಂಟಾಯಿತು. ಆ ಕಾರಣಕ್ಕಾಗಿ ಅದನ್ನು ಅಲ್ಲಿ ಕೂಡಿಸಬಾರದೆಂಬ ಬಗ್ಗೆ ದೊಡ್ಡ ಆಂದೋಲನ ಎದ್ದಿತು. ನಾನು ಜಯಕರ್ನಾಟಕದಲ್ಲಿ ಆ ಬಗ್ಗೆ ಲೇಖ ಬರೆದೆ. ಹುಬ್ಬಳ್ಳಿಯ ಸಭೆಯಲ್ಲಿ ಕಡಪಾ ರಾಘವೇಂದ್ರರಾಯರಿಗೂ ಗಂಗಾಧರರಾಯರಿಗೂ ಘೋರ ವಾಗ್ಯುದ್ಧವಾಯಿತು. ಕಾಂಗ್ರೆಸ್ಸು ಧಾರವಾಡದಲ್ಲಿ ಆಗಬೇಕೆಂದು ನಾನು ಗೊತ್ತುವಳಿ ತಂದೆ. ಚಮತ್ಕಾರವೇನೆಂದರೆ, ನನ್ನ ಗೊತ್ತುವಳಿಗೆ ಅನುಮೋದನ ಕೊಡುವದಕ್ಕೆ ಕೂಡ ಒಬ್ಬ ಮುಖಂಡನೂ ಮುಂದೆ ಬರಲಿಲ್ಲ! ದೂರಿನಿಂದ ಗೋವರ್ಧನ ಮಳಿಯೆ ಎಂಬ ಅಸಹಕಾರ ಚಳವಳಿಯಲ್ಲಿ ಸೇರಿದ ತರುಣನು ನನಗೆ ಧೈರ್ಯದಿಂದ ಅನುಮೋದನ ಕೊಟ್ಟ. ಗಂಗಾಧರರಾಯರು ಬೆಳಗಾವಿ ಕಾಂಗ್ರೆಸ್ಸನ್ನು ನಿಜವಾಗಿ ಕರ್ನಾಟಕದ್ದೇ ಆಗುವಂತೆ ಎಚ್ಚರ ಪಡುತ್ತೇನೆಂದು ಆಶ್ವಾಸನ ಕೊಟ್ಟದ್ದರಿಂದ ಅರ್ಥಾತ್ ನನ್ನ ಸೂಚನೆ ಬಿದ್ದು ಹೋಯಿತು. ಆದರೆ ಜನಮತದ ಒಲವು ಪ್ರಚಂಡವಾಗಿ ನಮ್ಮ ಕಡೆಗೆ ಇದ್ದುದು

ಗೊತ್ತಾದ ಕಾರಣ ಬೆಳಗಾವಿಯ ಮರಾಠಿಗರಿಗೂ ಸಿಕ್ಕಸಿಕ್ಕಂತೆ ಮಾಡಲಿಕ್ಕೆ ಸಾಧಿಸಲಿಲ್ಲ.

**ಶಾಂತಕವಿಗಳು ಊರ್ಫ ಬಾಳಾಚಾರ್ಯ ಸಕ್ಕರಿ**:— ಕರ್ನಾಟಕ ಚಳವಳಿಯ ವಿಷಯದಲ್ಲಿ ಮತ್ತೊಂದು ಮರೆಯಲಾರದ ವ್ಯಕ್ತಿಯೆಂದರೆ, ಶಾಂತಕವಿಗಳು ಅಥವಾ ಬಾಳಾಚಾರ್ಯ ಸಕ್ಕರಿ ಎಂಬವರು. ಈ ಚಳವಳಿಯ ಕಾಲಕ್ಕೆ ಅವರು ಅತಿ ವೃದ್ಧರು. ಅವರು ಹುಟ್ಟಾ ಕವಿಗಳು. ಕನ್ನಡ ಶಾಲೆಯ ಬಡ ಮಾಸ್ತರರು. ಕನ್ನಡದ ಕಡುಭಕ್ತರು. ಅವರು ಹಳ್ಳಿಗಳಲ್ಲಿ ಕನ್ನಡ ಶಾಲೆಯ ಮಾಸ್ತರರಾಗಿ ಪೆನಶನ್ ತೆಗೆದುಕೊಂಡವರು. ಅವರಿಗೆ ಹನ್ನೊಂದೇ ರೂಪಾಯಿ ಪೆನಶನ್. ವರಕವಿಗಳಾದ ಮೂಲಕ ೪೦-೫೦ ನಾಟಕಗಳನ್ನು ಬರೆದು ಹಳ್ಳಿಯ ನಾಟಕ ಕಂಪನಿಗಳಿಂದ ಆಡಿಸಿದ್ದರು. ಚಳವಳಿಯ ಕಾಲಕ್ಕೆ ಧಾರವಾಡದಲ್ಲಿ ಪೆನಶನ್ ತೆಗೆದುಕೊಂಡು ಸ್ವಸ್ಥ ಇದ್ದರು. ಅವರ ಪರಿಚಯು ನನಗೆ ಇರಲೇ ಇಲ್ಲ. ಒಬ್ಬೊಂಟಿಗರು. ವಕೀಲ ಶ್ರೀ. ನರಗುಂದ ರಾಮರಾಯರಲ್ಲಿ ಅವರ ಊಟ. ನರಗುಂದ ರಾಮರಾಯರು "ಸಪ್ತಋಷಿ"ಗಳಲ್ಲಿ ಒಬ್ಬರು. ೧೯೧೫ರಲ್ಲಿ ನಾನೂ ನರಗುಂದ ರಾಮರಾಯರೂ "**ಕನ್ನಡಿಗರ ಭ್ರಮನಿರಸನ**"ವೆಂಬ ಚಿಕ್ಕ ಹೊತ್ತಿಗೆ ಬರೆದಿದ್ದೆವು. ಅದು ಬರೆಯಲ್ಪಟ್ಟದ್ದು ಹಾಯಸ್ಕೂಲಿನ ಬಾಲಕರಿಗಾಗಿ. ಅದನ್ನು ಆಗಿನ ಕಾಲದಲ್ಲಿ ವ್ಹಿಕ್ಟೋರಿಯಾ ಹಾಯಸ್ಕೂಲಿನ ಅಂದರೆ ಈಗಿನ ವಿದ್ಯಾರಣ್ಯ ಹಾಯಸ್ಕೂಲಿನ ಹೆಡ್ ಮಾಸ್ತರರೂ ಈಗಿರುವ ಜನತಾ ಕಾಲೇಜದ ಮೂಲ ಸ್ಥಾಪಕರೂ ಆದ ಶ್ರೀ. ಹುಕ್ಕೇರಿ ರಾಮರಾಯರು ಬಾಲಕರಿಂದ ಆಡಿಸಿ ತೋರಿಸಿದರು, ಮತ್ತು ಆ ಚಿಕ್ಕ ಹೊತ್ತಿಗೆಯು ಆ ಕಾಲದಲ್ಲಿ ಅನೇಕ ಹಾಯಸ್ಕೂಲುಗಳಲ್ಲಿ ಆಡಲ್ಪಟ್ಟು ಅವರಲ್ಲಿ ಕನ್ನಡದ ಅಭಿಮಾನವನ್ನು ಹುಟ್ಟಿಸಿತು. ಇರಲಿ, ಶ್ರೀ. ರಾಮರಾಯರ ಮನೆಗೆ ನಾನು ಮೇಲಿಂದ ಮೇಲೆ ಹೋಗುತ್ತಲೇ ಇದ್ದೆ. ನನ್ನ ಕರ್ನಾಟಕ ಗತವೈಭವದ ಪ್ರೂಫುಗಳು ಬಂದ ಕೂಡಲೇ ರಾಮರಾಯರಿಗೆ ಓದಿ ತೋರಿಸುತ್ತಿದ್ದೆ. ಹೀಗೆ ಮೊದಲಿನ ಮೂರು ನಾಲ್ಕು ಫಾರ್ಮುಗಳ ಪ್ರೂಫು ಓದಿ ತೋರಿಸಿದೆ. ಶಾಂತಕವಿಗಳೂ ಅದನ್ನು ಓದಿದರು. ಆ ಮುದುಕನಿಗೆ ಒಮ್ಮಿಂದೊಮ್ಮೆ ಏನು ಸ್ಫೂರ್ತಿ ಬಂದಿತೋ ಏನೋ ಮೂರನೆಯ ಪ್ರಕರಣದ ಮೇಲೆ ಒಂದು ಕೀರ್ತನವನ್ನೇ ತಯಾರ

ಮಾಡಿದರು. ನನ್ನ ಭೆಟ್ಟಿಯಾದಾಗ ನಾನು ಹಿಂದಕ್ಕೆ ಬರೆದ ವಿದ್ಯಾರಣ್ಯ ಚರಿತ್ರೆಯನ್ನು ಅವರ ಕೈಯಲ್ಲಿ ಕೊಟ್ಟೆ. ಕೂಡಲೆ ಗತವೈಭವದ ಮೂರ ನೆಯ ಪ್ರಕರಣವನ್ನು ಪೂರ್ವರಂಗವನ್ನಾಗಿಟ್ಟು, ಉತ್ತರ ರಂಗದಲ್ಲಿ ವಿದ್ಯಾರಣ್ಯ ಕೀರ್ತನವನ್ನು ಹೆಣೆದರು. ಆಗ ನಾನು ಹೋಮರೂಲಿನ ಸೆಕ್ರೆಟರಿ. ನನ್ನಿಂದ ಆ ಶಾಳಾ ಮಾಸ್ತರನಲ್ಲಿಯೂ ದೇಶಭಕ್ತಿಯ ಸ್ಫೂರ್ತಿ ಹುಟ್ಟಿತು. ಇವೆಲ್ಲವುಗಳ ಮೂಲಕ, ಅಲ್ಲಿಯ ವರೆಗೆ ಗುಪ್ತಗಾಮಿನಿಯಾಗಿ ಹರಿಯುತ್ತಲಿದ್ದ ಅವರ ದೇಶಾಭಿಮಾನ ಮತ್ತು ಕರ್ನಾಟಕಾಭಿಮಾನಗಳ ಸರಸ್ವತಿಯು ಹೊರಗೆ ಹರಿಯಹತ್ತಿದಳು. ಅಂಥ ಮುಪ್ಪಿನ ಕಾಲದಲ್ಲಿ ಕೀರ್ತನ ಪ್ರಾರಂಭಿಸಿದರು. ಆ ಮುದುಕನು ಸ್ಫೂರ್ತಿಯ ಆವೇಶದಿಂದ ಸಭಾಗೃಹಗಳಲ್ಲಿ ಥೈ ಥೈ ಎಂದು ಗೆಜ್ಜೆ ಕಟ್ಟಿಕೊಂಡು ಕುಣಿಯಹತ್ತಿದನು. ಸುದೈವದಿಂದ ಅದೇ ಕಾಲಕ್ಕೆ ಕಡಪಾ ರಾಘವೇಂದ್ರರಾಯರ ಜೋಡೂ ಅವರಿಗೆ ಸಿಕ್ಕಿತು. ಗತವೈಭವವು ೧೯೧೭ನೆಯ ಇಸವಿಯಲ್ಲಿ ಪ್ರಸಿದ್ಧನಾದ ಕೂಡಲೆ ಅದೂ ಕರ್ನಾಟಕತ್ವದ ಅಭಿಮಾನದ ಹೊಳೆಯನ್ನು ದೇಶದಲ್ಲೆಲ್ಲ ಹರಿಯಿಸಿತು. ೧೯೧೮ರಲ್ಲಿ ನಾನು ಕರ್ನಾಟಕ ಸಾಹಿತ್ಯ ಸಮ್ಮೇಲನವನ್ನು ಧಾರವಾಡದಲ್ಲಿ ಕೂಡಿಸಿದ್ದೆನು. ಅದರ ಪ್ರಚಾರಕ್ಕಾಗಿಯೂ ಶಾಂತಕವಿಗಳೂ ಕಡಪಾ ರಾಘವೇಂದ್ರರಾಯರೂ ಕೀರ್ತನ, ಭಾಷಣಗಳನ್ನು ಮಾಡುತ್ತ ಕರ್ನಾಟಕದಲ್ಲೆಲ್ಲ ಸುತ್ತಾಡಿದರು. ಆ ಎರಡು ಮೂರು ವರ್ಷಗಳಲ್ಲಿ ಅಖಂಡ ಕರ್ನಾಟಕದ ಅಭಿಮಾನವು ಕರ್ನಾಟಕದಲ್ಲಿ ಜಾಗ್ರುತವಾದಷ್ಟು ಹಿಂದೆ ಎಂದೂ ಆಗಿರುವದಿಲ್ಲ. ನನಗೆ ಗೊತ್ತಿಲ್ಲದಂತೆ, ಅಷ್ಟೇಕೆ ಅವರಿಗೆ ಸಹ ಗೊತ್ತಿಲ್ಲದಂತೆ ನನ್ನಿಂದ ಪ್ರೇರಣೆ ಯಾದ ಮತ್ತೊಂದು ಉದಾಹರಣೆಯೆಂದರೆ ಈ ಶಾಂತಕವಿಗಳದು. ವಿದ್ಯಾ ರಣ್ಯ ಚರಿತ್ರೆಯಲ್ಲಿ "ಸಾರವ್ಯಾನಗರೀ" ಎಂಬುದರ ಒಂದು ಶ್ಲೋಕಬದ್ಧ ಕನ್ನಡ ಭಾಷಾಂತರ (ನನ್ನದಲ್ಲ) ಹಾಕಿದ್ದೆ. ಅದು ನನ್ನ ಮನಸ್ಸಿಗೆ ಬಂದಿರಲಿಲ್ಲ. ಶಾಂತಕವಿಗಳಿಗೆ ಅದರದೊಂದು ಕನ್ನಡ ಶ್ಲೋಕ ಮಾಡಿ ಕೊಡಲು ಕೇಳಿದೆ. ಮಾಡಿಕೊಟ್ಟರು. "ಸಾ" ಎಂಬುದರ ಶಕ್ತಿ ಅದರ ಲ್ಲಿರಲಿಲ್ಲ. ತಿರುಗಿ ಕೊಟ್ಟು ಆ ಶಕ್ತಿಯನ್ನು ಕಳಿಯದೆ ಮಾಡಿಕೊಡಿರಿ ಎಂದು ಕೇಳಿದೆ. "ಆ ಸೌಂದರ್ಯದ" ಮುಂತಾಗಿ ಮಾಡಿಕೊಟ್ಟರು. ಅದನ್ನು ಗತವೈಭವದಲ್ಲಿ ಸೇರಿಸಿದೆ. ವಿದ್ಯಾರಣ್ಯ ಕೀರ್ತನವನ್ನೂ ನಾನೇ ಎರಡು

ಆವೃತ್ತಿಗಳನ್ನು ಮುದ್ರಿಸಿ, ದೇಶದಲ್ಲೆಲ್ಲ ಹಂಚಿದೆ. ಇದೇ ಸುಮಾರಕ್ಕೆ ಸ್ವರಾಜ್ಯ ಸಂಘದ (ಹೋಮರೂಲಿನ) ಕಾರ್ಯದರ್ಶಿಯಾಗಿದ್ದ ನಾನು ೧೨ ಚಿಕ್ಕ ಚಿಕ್ಕ ಪುಸ್ತಕಗಳನ್ನು ಬರೆದೆ. ಅವುಗಳಲ್ಲಿ ಆರು ಮಾತ್ರ ಮುದ್ರಿತವಾದವು. ಮಿಕ್ಕೆಲ್ಲವು ಸರಕಾರದ ದಬ್ಬಾಳಿಕೆಯ ಮೂಲಕ ಮುದ್ರಿತವಾಗಲಿಲ್ಲ. ಇರಲಿ, ಆ ಚಿಕ್ಕ ಹೊತ್ತಿಗೆಗಳ ಮೇಲೆಯೂ ವಿದ್ಯಾರಣ್ಯರ ಕೀರ್ತನದೊಳಗಿಂದ ಆರಿಸಿ ಆರಿಸಿ ಪದ್ಯಗಳನ್ನು ಹಾಕಿದ್ದೆ. ಈ ಪುಸ್ತಕವು ಈಗ ಶ್ರೀ. ಭಾಲಚಂದ್ರ ಘಾಣೇಕರರಿಂದ ಮೊನ್ನೆಯೇ ಮುದ್ರಿತವಾಗಿದೆ. ಅದು ಎಷ್ಟು ಸ್ಫೂರ್ತಿದಾಯಕವಿರುವದೆಂಬುದು ಓದಿದರೆ ತಿಳಿಯುವದು. ಸಾರಾಂಶ, ಈ "ಸಪ್ತಋಷಿ"ಗಳಿಂದಲೇ ಆ ಕಾಲದಲ್ಲಿ ಕರ್ನಾಟಕದ ತುಂಬೆಲ್ಲ ಅಖಂಡ ಕರ್ನಾಟಕತ್ವದ ಅಭಿಮಾನವು ಹುಟ್ಟಿತೆಂಬುದು ಈಗೆಲ್ಲರಿಗೂ ಗೊತ್ತಿದೆ. ಅವರಲ್ಲಿ ಈಗ ಜೀವಂತ ಇರುವವರೆಂದರೆ ನಾನೂ ನನ್ನ ಪಾಲುಗಾರರಾದ ಶ್ರೀ. ಮುದವೇಡಕರ ವೆಂಕಟರಾಯರೂ ಇಬ್ಬರೇ. ಅಂತೆಯೇ ಮೊನ್ನಿನ ರಾಜ್ಯೋದಯದ ಶುಭದಿನದಲ್ಲಿ ಅತ್ತ ನನ್ನನ್ನು ಹಂಪೆಗೆ ಕರೆದೊಯ್ದಾಗ, ಇತ್ತ ಧಾರವಾಡದವರು ಅವರಿಂದ ಆ ಉತ್ಸವವನ್ನು ಸಾಂಗಗೊಳಿಸಿದರು. ಇರಲಿ, ಕರ್ನಾಟಕ ಗತವೈಭವವು ಮಾಡಿದ ಪರಿಣಾಮವನ್ನಂತೂ ನಾನು ಬೇರೇ ಬಣ್ಣಿಸಲಿಕ್ಕೇ ಬೇಡ. ನಿಜವಾಗಿ ಇಷ್ಟೊತ್ತಿಗೆ ೧೦-೧೨ ಆವೃತ್ತಿಗಳಾದರೂ ಹೊರಡಬೇಕಾಗಿತ್ತು. ಆದರೆ ಹಣದ ಅಭಾವದ ಮೂಲಕ ಏಳೇ ಆವೃತ್ತಿಗಳು ಮಾತ್ರ ಹೊರಟಿವೆ. ೧೯೦೬-೭ ರಿಂದ ೧೯೨೦ರ ವರೆಗಿನ ಕಾಲವೆಂದರೆ ಕರ್ನಾಟಕದ ಅಭಿಮಾನಕ್ಕೆ ಅತಿಶಯ ಉಕ್ಕು ಬಂದ ಕಾಲ. ಅವೆಲ್ಲ ವರ್ಷಗಳನ್ನು ನಾನು ಮೈಸೂರಿನವರಲ್ಲಿಯೂ ಕರ್ನಾಟಕದ ಅಭಿಮಾನವನ್ನು ಹುಟ್ಟಿಸುವದರಲ್ಲಿಯೇ ಕಳೆದೆನು. ಅದರ ಪರಿಣಾಮವು ಮೈಸೂರಿನವರಲ್ಲಿಯೂ ಎಷ್ಟಾಯಿತೆಂಬುದಕ್ಕೆ ೧೯೨೧ ನೆಯ ಇಸವಿಯಲ್ಲಿ ಬೆಂಗಳೂರಿನವರು ನನಗೆ ಕೊಟ್ಟ ಮಾನಪತ್ರವೇ ಸಾಕ್ಷಿ. ಅದರಲ್ಲಿ ಅವರು ಕರ್ನಾಟಕ ಗತವೈಭವದ ಗ್ರಂಥಕರ್ತನೆಂದು ನನ್ನನ್ನು ಹೊಗಳಿದ್ದಾರೆ.

ನಾನು ಸಾರ್ವಜನಿಕ ಜೀವನಕ್ಕೆ ಬರುವ ಪೂರ್ವದಲ್ಲಿಯೇ ಶ್ರೀ. ಮುದವೇಡಕರ ಕೃಷ್ಣರಾಯರೂ, ಶ್ರೀ. ಹೊಸಕೇರಿ ಅಣ್ಣಾಚಾರ್ಯರೂ, ಶ್ರೀ. ಖಾನೋಳಕರ ಮುಂತಾದವರು ಸಾರ್ವಜನಿಕ ಚಟುವಟಿಕೆಗಳಲ್ಲಿ ಭಾಗವಹಿಸಿ ಕರ್ನಾಟಕವೃತ್ತ ಮತ್ತು ಧನಂಜಯ ಮುಂತಾದ ವಾರಪತ್ರಿಕೆಗಳನ್ನು ತೆಗೆದಿದ್ದರು.

ಮುಂದೆ ಪದವೀಧರನಾಗಿ ಬಂದ ನಾನು ವಕೀಲಿಯನ್ನು ಬಿಟ್ಟು ಸಾರ್ವಜನಿಕ ಕಾರ್ಯವನ್ನು ಕೈಕೊಂಡದ್ದರಿಂದ ನನಗೆ ನನ್ನ ಯೋಗ್ಯತೆ ಮೀರಿ ಹೆಚ್ಚಿನ ಮಹತ್ವವು ಪ್ರಾಪ್ತವಾಯಿತು ! ಮತ್ತು ಅದನ್ನು ಇಲ್ಲಿಯ ವರೆಗೆ ನಡಿಸಿ ಕೊಂಡು ಹೋಗುವ ಸಾಮರ್ಥ್ಯವನ್ನು ದೇವರು ಕೊಟ್ಟದ್ದು ನನ್ನ ಪುಣ್ಯವೇ ಸರಿ.

**ಶ್ರೀ. ಮುದವೇಡಕರ ಕೃಷ್ಣರಾಯರು** :— ಸಪ್ತಋಷಿಗಳಲ್ಲಿಯ ಮತ್ತೊಂದು ಮುಖ್ಯ ವ್ಯಕ್ತಿಯೆಂದರೆ ಮುದವೇಡ ಕೃಷ್ಣರಾಯರು. ಇವರು ಮುಂಚಿನಿಂದಲೂ ಕನ್ನಡದ ಅಚ್ಚ ಭಕ್ತರು. ತರುಣರಿರುವಾಗಲೇ ಕರ್ನಾಟಕವೃತ್ತ, ಧನಂಜಯ ಎಂಬ ವೃತ್ತಪತ್ರಿಕೆಗಳ ಸಂಪಾದಕರಾಗಿದ್ದರು. ಅವರದು ಅತ್ಯಂತ ತೇಜಸ್ವಿ ಲೆಕ್ಕಣಿಕೆಯು. ಅವರು ಸವ್ಯಸಾಚಿಗಳು. ಅಂದರೆ ಭಾಷಣದಲ್ಲಿಯೂ ಗಟ್ಟಿಗರು. ಅವರ ಗುಡುಗಿನ ಧ್ವನಿಯು ಅವರು ಸಾಯುವ ವರೆಗೆ ಉತ್ತರ ಕರ್ನಾಟಕ ಮಾತ್ರವನ್ನೇ ಅಲ್ಲ, ಮೈಸೂರಿನವರನ್ನು ಕೂಡ ಹೊಡೆದೆಬ್ಬಿಸಿತು. ಅವರಂಥ ವಕ್ತಾರರು, ಇನ್ನೂ ವರೆಗೂ ಹುಟ್ಟಿಲ್ಲವೆಂದರೆ ಅತಿಶಯೋಕ್ತಿಯಾಗಲಾರದು. ಅವರ ನೂರಾರು ಭಾಷಣಗಳ ಮೂಲಕ ಇಡೀ ಕರ್ನಾಟಕದಲ್ಲಿಯೇ ಕರ್ನಾಟಕತ್ವದ ಜಾಗ್ರತಿಯಾಯಿತು. ಅವರು ಲೇಖಕರೂ, ಭಾಷಣಕಾರರೂ ಇದ್ದರಲ್ಲದೆ, ಅಭಿನಯದಲ್ಲಿಯೂ ಪ್ರಮುಖರು. ಭರತಕುಲೋತ್ತೇಜಕ ನಾಟಕ ಮಂಡಳಕ್ಕೆ ನಾನು ವ್ಹಾಯಿಸ ಪ್ರೆಸಿಡೆಂಟನಿದ್ದೆನೆಂದು ಹಿಂದೆ ಹೇಳಿರುವೆನಷ್ಟೇ ? ಅದನ್ನು ತೆಗೆದವರು ಇವರೇ. ಕರ್ನಾಟಕವನ್ನು ಜಾಗ್ರತಿ ಮಾಡಿದವರಲ್ಲಿ ಅವರ ಪಾತ್ರವು ಅದ್ವಿತೀಯವಾಗಿದೆ. ಅವರ ಹೃದಯದಲ್ಲಿ ಕರ್ನಾಟಕದ ಅಭಿಮಾನವು ತುಂಬಿ ತುಳುಕುತ್ತಿತ್ತು! ಅದರ ಮೂಲಕವೇ ಅವರು ತಮ್ಮ 'ಕರ್ನಾಟಕವೃತ್ತ'ವನ್ನು ಬೆಳಗಾಂವಿಗೆ ಮುದ್ದಾಂ ಒಯ್ದು ಅಲ್ಲಿ ಜಾಗ್ರುತಿ ಮಾಡಿದರು. ಶ್ರೀ. ಚಿಕ್ಕೋಡಿ ಅನಂತರಾಯರು ಅವರ ಸಹಾಯಕರು.

**ಶ್ರೀ. ರಾಜಪುರೋಹಿತ ನಾರಾಯಣರಾಯರು** :— ಇವರು ಕನ್ನಡ ಶಾಲಾ ಮಾಸ್ತರರು. ೧೯೧೦ರಲ್ಲಿ ನಾನು ಇಲ್ಲಿಯ ರಾಷ್ಟ್ರೀಯ ಶಾಲೆಗೆ ಪ್ರಿನ್ಸಿಪಾಲನಾಗಿದ್ದಾಗ ಇವರು ನನ್ನನ್ನು ಕೂಡಿದರು. ಕೊನೆಯ

ವರೆಗೆ ಕರ್ನಾಟಕ ಸೇವೆಯಲ್ಲಿ ದೇಹವನ್ನು ಸವೆಸಿ ದಾರಿದ್ರ್ಯದಲ್ಲಿ ಸತ್ತರು. ಇತಿಹಾಸ ಸಂಶೋಧನೆಯು ಅವರ ಮುಖ್ಯ ಪ್ರೀತಿಯ ವಿಷಯವು. ಕೊನೆಯ ವರೆಗೆ ಸಂಶೋಧನೆ ನಡೆಸಿದರು. ಅವರ ಚರಿತ್ರೆಯು ಈ ಪುಸ್ತಕದ ಇತಿಹಾಸ ಚಳವಳಿಯ ಪ್ರಕರಣಲ್ಲಿ ಬಂದೇ ಬಂದಿರುವದು.

ಕರ್ನಾಟಕತ್ವದ ಚಳವಳಿಯನ್ನು ಹೃತ್ಪೂರ್ವಕ ನಡೆಸಿದ ಮತ್ತೊಬ್ಬ ವ್ಯಕ್ತಿಯೆಂದರೆ ಶ್ರೀನಿವಾಸರಾವ ಮಂಗಳವೇಡೆಯವರು. ಬಾಗಿಲಕೋಟಿಯಲ್ಲಿ ನಿಂತು "ಕನ್ನಡಿಗ" ಎಂಬ ವೃತ್ತಪತ್ರಿಕೆಯನ್ನು ಕೇವಲ ಕರ್ನಾಟಕದ ಪ್ರಚಾರಕ್ಕಾಗಿಯೇ ಹೊರಡಿಸಲಿಟ್ಟಿದ್ದರು. ಶ್ರೀನಿವಾಸರಾಯರು ಕಾಂಗ್ರೆಸ್ ಭಕ್ತರು. ಸ್ವಾತಂತ್ರ್ಯ ಯುದ್ಧದಲ್ಲಿ ಅನೇಕ ಸಾರೆ ಸೆರೆಮನೆಯನ್ನು ಕಂಡಿದ್ದಾರೆ. ಎರಡೂ ಚಳವಳಿಗಳನ್ನು ಅಷ್ಟೇ ಕಳಕಳಿಯಿಂದ ನಡೆಸಿದರು. ಮುಂದೆ ಕನ್ನಡಿಗ ಪತ್ರಿಕೆಗೆ ದೈನಿಕ ಸ್ವರೂಪವನ್ನು ಕೊಡುವದಕ್ಕಾಗಿ ಧಾರವಾಡಕ್ಕೆ ೧೯೩೬ರ ಸುಮಾರಕ್ಕೆ ಅದನ್ನು ತಂದರು. ಆಗ ಆ ದೈನಿಕ ಪತ್ರಿಕೆಗೆ ನಾನು ಸಂಪಾದಕನಾಗಿದ್ದೆ. ಮುಂದೆ ಸಂಯುಕ್ತ ಕರ್ನಾಟಕ ಪತ್ರಿಕೆಯು ಹುಬ್ಬಳ್ಳಿಗೆ ಬಂದಾಗ ಕನ್ನಡಿಗ ದೈನಿಕ ಪತ್ರವನ್ನು ಅದರಲ್ಲಿ ವಿಲೀನಗೊಳಿಸಲಾಯಿತು.

**ಪಂಡಿತ ತಾರಾನಾಥರಾಯರು** :— ಕರ್ನಾಟಕ ಚಳವಳಿಯಲ್ಲಿ ಮುಖ್ಯ ಭಾಗ ವಹಿಸಿದ ಮತ್ತೊಂದು ಪ್ರಚಂಡ ವ್ಯಕ್ತಿಯೆಂದರೆ ಪಂಡಿತ ತಾರಾನಾಥರು. ಅವರು ಹೈದರಾಬಾದ ರಾಯಚೂರ ಕಡೆಗೆ ಇದ್ದವರು. ಉತ್ತರ ಕರ್ನಾಟಕದಲ್ಲಿ ಕರ್ನಾಟಕ ಚಳವಳಿಯನ್ನು ಹಬ್ಬಿಸಲಿಕ್ಕೆಂದೇ ಅವರನ್ನು ನಾವು ಧಾರವಾಡಕ್ಕೆ ಕರೆಯಿಸಿಕೊಂಡೆವು. ಅವರ ಮಧುರವಾದ ವಕ್ತೃತ್ವವು ಮೋಹಿನೀ ಶಕ್ತಿಯಂತೆ ಕರ್ನಾಟಕವನ್ನು ಜಾಗೃತಗೊಳಿಸಿತು.

೧೯೨೦—೨೧ರಿಂದ ೧೯೨೪ರ ವರೆಗೆ ಬಳ್ಳಾರಿ, ಅನಂತಪೂರ ಜಿಲ್ಲೆಗಳಲ್ಲಿ ಕರ್ನಾಟಕತ್ವದ ಚಳವಳಿಯನ್ನು ಮಾಡಲಿಕ್ಕೆಂದು ಶ್ರೀ. ಗೋವರ್ಧನರಾವ, ಶ್ರೀ. ನಾರಾಯಣ ರಾಜಪುರೋಹಿತ ಮತ್ತು ಬುರ್ಲಿ ಬಿಂದುಮಾಧವ ಮುಂತಾದವರನ್ನು ಕಳಿಸಿಕೊಟ್ಟಿದ್ದೆ. ಅವರು ಆದವಾನಿ, ಆಲೂರು, ರಾಯದುರ್ಗ, ಅನಂತಪುರ, ಮಡಕಶಿರಾ, ಹಿಂದುಪುರ ಮುಂತಾದ ಕಡೆಗೆ

ಹೋಗಿ ಚಳವಳಿಯನ್ನು ಬಲವಾಗಿ ಮಾಡಿ ಬಂದರು. ಬೇರೆ ಕಡೆಗೆ ಕರ್ನಾಟಕತ್ವವನ್ನು ಪ್ರಸಾರ ಮಾಡಿದ ಸಂಘ-ಸಂಸ್ಥೆಗಳ ಹೆಸರುಗಳನ್ನು ಈ ಪುಸ್ತಕದಲ್ಲಿ ಕಾಣಿಸುವುದು ನನಗೆ ಶಕ್ಯವಾಗಲಿಲ್ಲ. ಆ ಬಗ್ಗೆ ಅವರು ನನ್ನನ್ನು ಕ್ಷಮಿಸಬೇಕು. ಆದರೂ ಮಂಗಳೂರ ಕಡೆಗೆ ಕರ್ನಾಟಕ ಸಂಘ ಸ್ಥಾಪಿಸಿ ಅದರ ಮುಖಾಂತರವಾಗಿ ಸತತ ಚಳವಳಿ ನಡಿಸಿದ ರಾಜಗೋಪಾಲಕೃಷ್ಣರಾವ, ಹುರಳಿ ಭೀಮರಾವ, ಕಂಠೀರವ ಪತ್ರಿಕೆ, ಶಿವರಾಮ ಕಾರಂತರನ್ನು ಇಲ್ಲಿ ಸ್ಮರಿಸುವೆ. ಅವರು ಆ ಭಾಗದಲ್ಲಿ ಮಾಡಿದ ಪ್ರಚಾರದಿಂದಲೇ ಆ ಪ್ರಾಂತದಲ್ಲಿ ಕರ್ನಾಟಕತ್ವದ ಪ್ರಸಾರವಾಗಿದೆ.



## ೧೩ನೆಯ ಪ್ರಕರಣ

### ರಾಜಕಾರಣದಲ್ಲಿ ಕರ್ನಾಟಕತ್ವ

**ಕರ್ನಾಟಕದ ರಾಜಕಾರಣದ ಪೂರ್ವೇತಿಹಾಸ:—** ೧೯೨೦ ರಾಜಕಾರಣದ ಸ್ಥಿತಿಯನ್ನು ಹೀಗೆ ಬಣ್ಣಿಸಬಹುದು. ರಾಜಕಾರಣದ ಬಗ್ಗೆ ವಾದವೂ ನದಿಯ ಅಗದಂತೆ ಅವ್ಯಕ್ತವೇ ಇರುತ್ತದೆ. ಮುಂಚೆ, "ಕರ್ನಾಟಕ" ವೆಂಬುದಕ್ಕೆ ಬೇರೆ ಅಸ್ತಿತ್ವವೇ ಇರಲಿಲ್ಲ. ಮುಂಬಯಿ ಕರ್ನಾಟಕದಲ್ಲಿಯ ಬೆಳಗಾವಿ, ಧಾರವಾಡ, ವಿಜಾಪುರ ಮತ್ತು ಕಾರವಾರ ಈ ನಾಲ್ಕು ಜಿಲ್ಲೆಗಳಲ್ಲಿ ಕೂಡ ಪರಸ್ಪರ ಬಳಕೆ ವಿಶೇಷವಿರಲಿಲ್ಲ. ಅಂದ ಬಳಿಕ ಬಳ್ಳಾರಿ, ಮಂಗಳೂರು, ಕೊಡಗು, ಮೈಸೂರು, ನಿಜಾಮಕರ್ನಾಟಕ ಇವುಗಳ ಮಾತಂತೂ ದೂರೇ ಉಳಿಯಿತು. ಮಂಗಳೂರು ಪಶ್ಚಿಮ ದಂಡೆಗಾದರೆ ಬಳ್ಳಾರಿಯು ತೀರ ಪೂರ್ವದಿಕ್ಕಿಗೆ. ಅವೆರಡು ಜಿಲ್ಲೆಗಳ ನಡುವೆ ನೊಗಲಾಯಿ, ಮುಂಬಯಿ ಕರ್ನಾಟಕ ಮತ್ತು ಸಹ್ಯಾದ್ರಿಯ ಅಡ್ಡಗೋಡೆಗಳು. ಹೀಗಿದ್ದರೂ ಅವೆರಡೂ ಜಿಲ್ಲೆಗಳು ಮದ್ರಾಸ ಇಲಾಖೆಯ ಆಡಳಿತೆಯಲ್ಲಿ! ಮಂಗಳೂರು ಪಶ್ಚಿಮ ದಂಡೆಯಲ್ಲಿ ಇದ್ದರೆ ಅದರ ಆಡಳಿತೆಯ ಸಂಬಂಧವು ಪೂರ್ವ ದಂಡೆಯಲ್ಲಿರುವ ಮದ್ರಾಸಕ್ಕೆ! ಇವೆರಡುಗಳ ನಡುವೆ ಆಂಧ್ರ, ತಮಿಳು, ಮೈಸೂರು, ಮುಂಬಯಿ ಇವುಗಳ ಅಡ್ಡಗೋಡೆಗಳು! ಉತ್ತರ ಕರ್ನಾಟಕದ ವಿಶೇಷ ಸಂಬಂಧವೆಂದರೆ ಸಹಜವಾಗಿ ಮಹಾರಾಷ್ಟ್ರದೊಡನೆ ಇತ್ತು. ಮುಂಬಯಿ, ಪುಣೆಗಳು ಮುಂಬಯಿ ಇಲಾಖೆಯ ರಾಜಧಾನಿಗಳು. ಅವು ೩೦೦, ೪೦೦ ಮೈಲು ದೂರ. ಆದ ಕಾರಣ ಈ ಜಿಲ್ಲೆಗಳಲ್ಲಿ ರಾಜಕಾರಣವು ಮೊದಲಿಗೆ ಏನೂ ಇಲ್ಲದಿರುವದು ಆಶ್ಚರ್ಯವಲ್ಲ. ಈ ನಾಲ್ಕು ಜಿಲ್ಲೆಗಳಲ್ಲಿ ಉತ್ತರಕ್ಕಿರುವ ಬೆಳಗಾವಿ ಮತ್ತು ವಿಜಾಪುರಗಳ ಸಂಬಂಧವು, ಮಹಾರಾಷ್ಟ್ರದೊಡನೆ ವಿಶೇಷ. ಆದ ಕಾರಣವೇ ಅವು ಬಲು ಬೇಗನೇ ಮಹಾರಾಷ್ಟ್ರದ ಮೋಹಕ್ಕೆ ಬಲಿಯಾದವು. ಬೆಳಗಾವಿಯು ವಿಜಾಪುರಕ್ಕಿಂತ ವಿದ್ಯೆಯಲ್ಲಿ ಮುಂದೆ ಇತ್ತು.

ಅಂತೆಯೇ ರಾಜಕಾರಣದಲ್ಲಿ ಮುಂದೆ ಬಿತ್ತು. ಮರಾಠಿ ಭಾಷೆಯು ಮೋಹಕತ್ವ ಬಲು ಬೇಗನೇ ಬಲಿಯಹತ್ತಿತು. ಮರಾಠಿಗರು ಹಿಂಡುಹಿಂಡಾಗಿ ಬಂದು, ಬೆಳಗಾವಿ ಪಟ್ಟಣವನ್ನು ಆಕ್ರಮಿಸಿದರು. ಹೊಟ್ಟೆ ಹೊರಕೊಳ್ಳುವದಕ್ಕಾಗಿ ಬಂದ ಈ ಮರಾಠಿಗರ ಹಾವಳಿಯೇ ನಮಗೆ ಮುಂದೆ ಅಖಂಡ ಕರ್ನಾಟಕ ನಿರ್ಮಾಣ ಕಾರ್ಯಕ್ಕೆ ಅಡ್ಡ ಬಂದಿತ್ತು. ಮುಂಚೆ, ಇಡೀ ಕರ್ನಾಟಕಕ್ಕೆ ಕನ್ನಡ ಮ್ಯಾಟ್ರಿಕ್ ಕೇಂದ್ರ ಬೆಳಗಾಂವಿ ಒಂದೇ ಆಗಿತ್ತು! ಕೋರ್ಟಿನ ಭಾಷೆ ಕನ್ನಡ. ಹೀಗಿದ್ದು, ಮರಾಠೀ ಅಧಿಕಾರಿಗಳ ಬಲಿಗೆ ಆ ಪಟ್ಟಣವು ತುತ್ತಾಗಿತ್ತು. ಕನ್ನಡಿಗರೇ ತಾವು ಮರಾಠೀ ಭಾಷೆಯಾಡುವವರೆಂದು ಹೇಳಿಕೊಳ್ಳುವುದಕ್ಕೆ ನಾಚುತ್ತಿರಲಿಲ್ಲ. ಬೆಳಗಾವಿಯಲ್ಲಿ ಮರಾಠಿಯು ಪ್ರಾಬಲ್ಯವಾಗುವುದಕ್ಕೆ ಮತ್ತೂ ಒಂದು ಕಾರಣವಿದೆ. ಕಾಂಗ್ರೆಸ್ಸು ಭಾಷಾನ್ವಯ ಪ್ರಾಂತರಚನೆಗೆ ಒಪ್ಪಿದ ಬಳಿಕ, ಸರಕಾರವು ಅದನ್ನು ತೀವ್ರವೇ ಮಾಡದಿದ್ದುದರ ಸಂಧಿ ಸಾಧಿಸಿ, ಮರಾಠೀ ಅಧಿಕಾರಿಗಳು ಬೆಳಗಾವಿಯಲ್ಲಿ ಮರಾಠಿಯನ್ನು ಬೆಳಸಿಕೊಂಡರು! ಮುಂದಿನ ಅಂದರೆ ೧೯೩೧ನೆಯ ಜನಗಣತಿಯಲ್ಲಿ ಬೆಳಗಾವಿ ಪಟ್ಟಣದಲ್ಲಿ ಕನ್ನಡಿಗರ ಸಂಖ್ಯೆಯು ಹೆಚ್ಚಾಗುವಂತೆ ಮಾಡುವದು ನಮ್ಮ ಕರ್ತವ್ಯ. ಧಾರವಾಡ ಜಿಲ್ಲೆಯ ಸ್ಥಿತಿಯು ಭಿನ್ನವಾಗಿತ್ತು. ಧಾರವಾಡದಲ್ಲಿಯ ಮರಾಠಿಗರಾದ ಶ್ರೀ. ಗುರುನಾಥರಾವ ಘಾಟೆಕರಂಥ ಅದ್ವಿತೀಯ ಸಾರ್ವಜನಿಕ ಕಾರ್ಯಕರ್ತರಿಗೆ ಕೂಡ, ಆಗ ಪುಣೆಯ ರಾಜಕಾರಣ ಸಂಬಂಧವು ಬರಲಿಲ್ಲ. ಇಂಥ ಸ್ಥಿತಿಗೆ ಭಾಷಾಭೇದವೂ ಪುಷ್ಟಿಯನ್ನು ಕೊಟ್ಟಿತು. ಶ್ರೀ. ಗುರುನಾಥರಾಯರು ಮೂಲತಃ ಮರಾಠಿಗರಾದರೂ ಕರ್ನಾಟಕದೊಡನೆ ತಾದಾತ್ಮ್ಯವನ್ನು ಹೊಂದಿದ ಮರಾಠಿಗರು. ಇಲ್ಲಿಯ ಕರ್ನಾಟಕ ವಿದ್ಯಾವರ್ಧಕ ಸಂಘಕ್ಕೆ ಅಧ್ಯಕ್ಷರಿದ್ದರು. ತಮ್ಮ ಸಂಸ್ಕೃತ ಪಾಠಶಾಲೆಯಲ್ಲದೆ, ಇತರ ಅನೇಕ ಚಳವಳಿಗಳಲ್ಲಿ ಅಗ್ರಗಣ್ಯರು, ರಾಜಕಾರಣಪಟುಗಳು. ಆದರೆ ಅಂಥವರಿಗೂ ಕೂಡ ಪುಣೆಯವರೊಡನೆ ಏನೂ ಪರಿಚಯವಿರಲಿಲ್ಲ. ಹೀಗಿದ್ದರೂ ಲೋ. ಟಿಳಕರ ಕೇಸರೀ ಪತ್ರವು ಈ ಜಿಲ್ಲೆಯಲ್ಲಿಯೂ ರಾಜಕಾರಣದಲ್ಲಿ ಕೆಲಮಟ್ಟಿಗೆ ಜಾಗ್ರತಿಯನ್ನುಂಟು ಮಾಡಿತ್ತು. ಅಲ್ಲದೆ ಪೇಶ್ವೆಯ ಕಾಲದಿಂದಲೂ ಈ ಜಿಲ್ಲೆಯ ಮುಖ್ಯ ಪಟ್ಟಣಗಳಲ್ಲಿ ಮರಾಠೀ ಬಲ್ಲ ವಕೀಲರ ಪ್ರಾಬಲ್ಯವಿತ್ತು. ಕನ್ನಡಿಗರಿಗೂ ಮರಾಠಿಯನ್ನು ಕಲಿಯುವದು ಶಿಷ್ಟಾಚಾರವಾಗಿತ್ತು. ಕನ್ನಡಿ

ಗರಿಗೆ ತಮ್ಮ ಪ್ರತ್ಯೇಕ ಅಸ್ತಿತ್ವದ ಅರಿವೇ ಇರಲಿಲ್ಲ. ಆದ ಕಾರಣ ಆಗಿನ ಇಲ್ಲಿಯ ರಾಜಕಾರಣವೆಂದರೆ, ಮುನಸಿಪಾಲಿಟಿ ಲೋಕಲ್ ಬೋರ್ಡುಗಳಲ್ಲಿ ಬಣಗಳನ್ನು ಕಟ್ಟಿಕೊಂಡು ಬಡಿದಾಡುವದು. ಆದರೂ ಧಾರವಾಡ ಜಿಲ್ಹೆಯ ಒಂದು ವೈಶಿಷ್ಟ್ಯವೆಂದರೆ, ಇಲ್ಲಿ ಮೊದಲಿನಿಂದಲೂ ಸ್ಥಾನಿಕ ಸಂಸ್ಥೆಗಳು ಉದಯುವಾದುದು, ಮತ್ತು ಸ್ವತಂತ್ರ 'ಚಳವಳಿಗಳ ಪ್ರಾದುರ್ಭಾವವಾದುದು. ಕರ್ನಾಟಕ ವಿದ್ಯಾವರ್ಧಕ ಸಂಘ, ವ್ಹಿಕ್ಟೋರಿಯಾ ( ಈಗಿನ ವಿದ್ಯಾರಣ್ಯ ) ಹಾಯಸ್ಕೂಲು, ಲಿಂಗಾಯತ ಎಜ್ಯುಕೇಶನ್ ಸೊಸಾಯಿಟಿ, ಅನೇಕ ಸಂಸ್ಕೃತ ಪಾಠಶಾಲೆಗಳು, ಗೋರಕ್ಷಣ ಚಳವಳಿ, ಅನೇಕ ವೃತ್ತಪತ್ರಗಳು ಇವೇ ಮುಂತಾದವುಗಳು ಈ ಪ್ರವೃತ್ತಿಯ ಫಲಗಳು. ಇದು ಧಾರವಾಡ ಜಿಲ್ಹೆಯ ಸ್ಥಿತಿಯಾಯಿತು.

ವಿಜಾಪುರ ಜಿಲ್ಹೆಯು ಧಾರವಾಡ ಜಿಲ್ಹೆಗಿಂತಲೂ ಸಾರ್ವಜನಿಕ ಜೀವನ ದಲ್ಲಿ ಹಿಂದಿನದು. ವಸ್ತುತಃ ಅದು ಪುಣೆಯ ಪಟ್ಟಣಕ್ಕೆ ಹೆಚ್ಚು ಸಮೀಪವಿರುವ ದರಿಂದ ಅಲ್ಲಿ ರಾಜಕಾರಣವು ತೀವ್ರವಾಗಿ ಬೆಳೆಯಬೇಕಾಗಿತ್ತು. ಹಾಗೆ ಆಗಲಿಲ್ಲ. ಇದಕ್ಕೆ ಶಿಕ್ಷಣದಲ್ಲಿ ಈ ಜಿಲ್ಹೆಯು ತೀರ ಹಿಂದುಳಿದದ್ದೇ ಕಾರಣವಾಗಿರಬಹುದು. ಕಾರವಾರ ಜಿಲ್ಹೆಯ ಸ್ಥಿತಿಯು ಇದಕ್ಕೂ ಕಠಿಣ. ಅದು ಮಿಕ್ಕ ಜಿಲ್ಹೆಗಳಿಂದ ದೂರವಾಗಿ ಅದರ ಬಹುಭಾಗವು ಘಟ್ಟದ ಕೆಳಗೆ ಸಿಡಿದು ಬಿದ್ದಿರುವದರಿಂದ ಅದಕ್ಕೂ ಮಿಕ್ಕ ಕರ್ನಾಟಕಕ್ಕೂ ವಿಶೇಷ ಸಂಬಂಧವೇ ಬರುತ್ತಿರಲಿಲ್ಲ. ಪ್ರವಾಸ ಸೌಕರ್ಯಗಳು ತಿಲಪ್ರಾಯವೂ ಇದ್ದಿಲ್ಲ. ಬಂಡಿಯ ಮೇಲೆ ಅಲ್ಲಿಗೆ ಹೋಗ ಲಿಕ್ಕೆ ಎಂಟು ದಿವಸಗಳು ಹಿಡಿಯುತ್ತಿದ್ದವು. ಅಲ್ಲದೆ ನಡುವೆ ಕಳವು ಸುಲಿಗೆ ಗಳು. ಮೊನ್ನೆ ಮೊನ್ನಿನ ಚಳವಳಿಯ ವರೆಗೆ ಅದು ಎಲ್ಲಕ್ಕೂ ಹಿಂದೆ ಬಿದ್ದ ಭಾಗವಾಗಿತ್ತು. ಹೀಗೆ ಎಲ್ಲಕ್ಕೂ ಹಿಂದೆ ಉಳಿದ ಜಿಲ್ಹೆಯು ಕಾಯದೆ ಭಂಗದ ಕಾಲಕ್ಕೆ ಎಲ್ಲಕ್ಕೂ ಮುಂದಿನ ಜಿಲ್ಹೆಯು ಹೇಗೆ ಆಯಿತೆಂಬುದು ರಾಜಕಾರಣದಲ್ಲಿಯ ಒಂದು ದೊಡ್ಡ ಗೂಢವಾಗಿಯೇ ತೋರಬಹುದು. ಆದರೆ ಅದಕ್ಕೆ ನನಗೆ ತೋರುವ ಕಾರಣವೆಂದರೆ, ಬಹಳ ದಿವಸ ಪಡಬಿದ್ದ ಭೂಮಿ ಯನ್ನು ಹರಗಿ ಹಸನ ಮಾಡಿದ ವರ್ಷದಲ್ಲಿ ಅದರೊಳಗೆ ಹೇಗೆ ಅತಿಶಯ ಬೆಳೆಯು ಬರುತ್ತದೆಯೋ ಹಾಗೆ ಅದನ್ನು ರಾಜಕಾರಣದ ರಂಟೆಯಿಂದ ಉತ್ತ ಕೂಡಲೆ ಅಲ್ಲಿ ಅತಿಶಯ ಬೆಳೆ ಬಂದಂತೆ ತೋರುತ್ತದೆ.

ಬಳ್ಳಾರಿ ಜಿಲ್ಹೆಯ ಸ್ಥಿತಿಯು ಒಂದು ರೀತಿಯಿಂದ ಇದಕ್ಕೂ ಕೀಳು ಇತ್ತು. ಅದು ರಾಜಧಾನಿಯ ಪಟ್ಟಣವಾದ ಮದ್ರಾಸದಿಂದ ಬಹಳ ದೂರ ದಲ್ಲಿ ಇದ್ದುವದಲ್ಲದೆ ಅದು ಒಂಟಿಯಾಗಿತ್ತು. ಆದ ಕಾರಣ ಮದ್ರಾಸ ಇಲಾ ಖೆಯ ಅಂಚಿನಲ್ಲಿರುವ ಈ ಬಳ್ಳಾರಿ ಜಿಲ್ಹೆಯಲ್ಲಿರುವ ಆಂಧ್ರರ ಪ್ರಾಬಲ್ಯದ ಮೂಲಕ ಕನ್ನಡಿಗರ ಆಟವು ಏನೂ ಸಾಗದಾಗಿತ್ತು. ಅದೇ ಮೇರೆಗೆ ಮದ್ರಾಸ ಇಲಾಖೆಯಲ್ಲಿಯ ಮಿಕ್ಕ ಕನ್ನಡ ಪ್ರದೇಶಗಳ ಸ್ಥಿತಿ. ಮಾತೃಭಾಷೆ ಕನ್ನಡವುಳ್ಳ ಕನ್ನಡಿಗರಿಗೆ ಪ್ರಾಥಮಿಕ ಶಿಕ್ಷಣವು ಕೂಡ ತೆಲುಗಿನಲ್ಲಿ ಕೊಡಲ್ಪಡುತ್ತಿತ್ತು. ಇದೆಂಥ ದುಃಸ್ಥಿತಿ? ಕನ್ನಡ ಮುಖಂಡರೇ ತೆಲುಗಿನಲ್ಲಿ ಪ್ರಸಿದ್ಧ ನಾಟಕ ಕಂಪನಿ ಗಳನ್ನು ತೆಗೆದಿದ್ದುದೇ ಇದಕ್ಕೆ ಸಾಕ್ಷಿ.

ಮಂಗಳೂರು ಜಿಲ್ಹೆಯು ಮಾತ್ರ ಶಿಕ್ಷಣದಲ್ಲಿ, ವ್ಯವಹಾರದಲ್ಲಿ, ಮುಂದು ವರಿದ ಜಿಲ್ಹೆಯು. ಆದರೆ ಕರ್ನಾಟಕತ್ವದ ಕಲ್ಪನೆ ಮೂಡದಿರದ ಮೂಲಕ, ಪಶ್ಚಿಮ ಕರಾವಳಿಯಲ್ಲಿ ದೊಡ್ಡ ಬಂದರವಾದರೆ ಮುಂಬಯಿಯ ವ್ಯಾಪಾರ ವೆಲ್ಲವೂ ಕರ್ನಾಟಕಕ್ಕೇನೇ ಹೊರಳುತ್ತಿತ್ತೆಂಬುದೂ ಉಗೆಬಂಡಿಯ ಆವಶ್ಯಕತೆ ಇರುತ್ತದೆಂಬುದೂ ಅದರ ಲಕ್ಷ್ಯಕ್ಕೆ ಬಂದಿರಲಿಲ್ಲ. ಸುದೈವದಿಂದ ಈಗ ಅಲ್ಲಿ ಬಹಳ ಜಾಗ್ರುತಿಯಾಗಿರುತ್ತದೆ. ಅಲ್ಲಿಯ ಲೋಹಮಾರ್ಗವನ್ನೂ ಬಂದರವನ್ನೂ ಒತ್ತಾಯದಿಂದ ಬೇಡಿ ರಾಷ್ಟ್ರಸರಕಾರದಿಂದ ಅವನ್ನು ತೀವ್ರ ದೊರಕಿಸಿಕೊಳ್ಳ ಬೇಕು. ಕಾರವಾರವು ಬಂದರವಾಗಬೇಕೋ ಭಟಕಳವು ಬಂದರವಾಗಬೇಕೋ ಮಲ್ಪೆಯು ಬಂದರವಾಗಬೇಕೋ ಮಂಗಳೂರು ಆಗಬೇಕೋ ಎಂಬುದನ್ನು ತೀವ್ರ ನಿಶ್ಚಯಿಸಿಕೊಳ್ಳಬೇಕು. ಅವೆಲ್ಲವೂ ಸಣ್ಣ ಸಣ್ಣ ಬಂದರಗಳಂತೂ ಆಗಲೇಬೇಕು; ದೊಡ್ಡ ಬಂದರವು ಯಾವದಿರಬೇಕೆಂಬುದು ತಜ್ಞರ ಕೆಲಸವು. ಮಂಗಳೂರಿನವರು ಮಲ್ಪೆಯೇ ಮುಖ್ಯ ಬಂದರವಾಗಬೇಕು ಎಂಬುದನ್ನು ಒಡಂಬಟ್ಟದ್ದು ಕೇಳಿ ಬಹಳ ಸಂತೋಷವಾಯಿತು. ಆದರೆ ಎಚ್ಚರ! ಗೋವೆಯ ನೆವ ಮಾಡಿ ಸರಕಾರವು ಈ ಪ್ರಶ್ನೆಯನ್ನು ಮುಂದೆ ಹಾಕದಂತೆ ಯತ್ನಿಸುವದು ಕರ್ನಾಟಕ ರಾಜ್ಯಸರಕಾರದ ಕರ್ತವ್ಯವು.

ಕೊಡಗಿನ ಸ್ಥಿತಿಯು ಎಲ್ಲಕ್ಕೂ ವಿಲಕ್ಷಣವಾದದ್ದು. ಅದು ದೂರ ಸಿಡಿದು ಬಿದ್ದ ಸಣ್ಣ ಪ್ರಾಂತ. ನನಗೆ ದಾರಿದ್ರ್ಯದ ಮೂಲಕ ಅಲ್ಲಿಯ ವರೆಗೆ ಹೋಗುವದಾಗಲಿಲ್ಲ. ಆದರೆ ಅಲ್ಲಿಯವರನ್ನು ಇಲ್ಲಿಗೆ ಮುಂದೆ ಕರೆಸಿಯಿಕೊಂಡೆ.

ಮೈಸೂರಿನ ರಾಜಕಾರಣವೇ ಬೇರೆ; ಅಥವಾ ಅದಕ್ಕೆ ಆಗ ರಾಜಕಾರಣವೇ ಇದ್ದಿಲ್ಲವೆಂದರೂ ಸಾಗುವದು. ಅಲ್ಪಸ್ವಲ್ಪಮಟ್ಟಿಗೆ ಅನುಕೂಲಸ್ಥಿತಿ ಇದ್ದದರಿಂದಲೂ ಕರ್ನಾಟಕದ ಸುದೈವದಿಂದ ಆ ಸಂಸ್ಥಾನಕ್ಕೆ ಕರ್ನಾಟಕದ ಅಭಿಮಾನಿಗಳೂ ಉದಾರರೂ ಧರ್ಮಶೀಲರೂ ಆದ ಪ್ರಭುಗಳೂ ನಿಷ್ಣಾತರಾದ ಅನೇಕ ದಿವಾನರೂ ದೊರೆತದ್ದರಿಂದಲೂ ಅದು ಶಿಕ್ಷಣದಲ್ಲಿ ಮುಂದುವರೆದಿತ್ತು. ಆದರೆ ಕರ್ನಾಟಕದ ಅಭಿಮಾನವು ಅವರಲ್ಲಿ ತಿಲಪ್ರಾಯವೂ ಒಡಮೂಡಿದ್ದಿಲ್ಲ; ಇನ್ನೂ ಪೂರ್ಣ ಒಡಮೂಡದಿರುವದು ಕರ್ನಾಟಕದ ದುರ್ದೈವ! ಚಿಕ್ಕ ಚಿಕ್ಕ ಸಂಸ್ಥಾನಗಳೂ ಮರಾಠಿಗರ ಆಳಿಕೆಯಲ್ಲಿ ಕರ್ನಾಟಕದಲ್ಲಿ ಬೇರೂರಿ, ಮರಾಠಿಯನ್ನು ಕನ್ನಡಿಗರ ಮೇಲೆ ಜುಲುಮೆಯಿಂದ ಹೇರಿ, ಕರ್ನಾಟಕವನ್ನು ತುಂಡು ತುಂಡು ಮಾಡಿದವು. ಸಾಂಗಲಿ, ಜಮಖಂಡಿ, ಮುಧೋಳ, ಮಿರಜ, ಜತ್ತ, ಔಂಧ, ಸವಣೂರು, ಅಕ್ಕಲಕೋಟೆ, ಕುರಂದವಾಡ ಮೊದಲಾದ ನಡುಗಡ್ಡೆಗಳಂತಿರುವ ಸಂಸ್ಥಾನಗಳು ಕರ್ನಾಟಕದ ಜೀವವನ್ನು ಹಣ್ಣು ಹಣ್ಣು ಮಾಡಿದವು. ಈ ತೆರಹದ ನೋಟವೇ ನನ್ನಲ್ಲಿ ಅಖಂಡ ಕರ್ನಾಟಕದ ಆವಶ್ಯಕತೆಯನ್ನು ಒಡಮೂಡಿಸುವದಕ್ಕೆ ಕಾರಣವಾಯಿತು! ಕರ್ನಾಟಕತ್ವದ ಚಳವಳಿಯು ಹೂಡಲ್ಪಡದಿದ್ದರೆ ಇವೆಲ್ಲವೂ ಮರಾಠೀಮಯವಾಗಿ ಪೂರಾ ನಷ್ಟವಾಗಿ ಹೋಗುತ್ತಿದ್ದವು! ಮರಾಠಿಯ ಹಾವಳಿ ಇನ್ನೂ ಪೂರಾ ತಪ್ಪಿಲ್ಲ. ನಿಜಾಮ ಕರ್ನಾಟಕವು ದಕ್ಷಿಣ ಹಿಂದುಸ್ತಾನದ ನಡುವೆ ಒಂದು ದ್ವೀಪ ಇದ್ದಂತೆ. ಆದರೆ ಅದರ ಆಗಿನ ದುಃಸ್ಥಿತಿಯನ್ನು ಬಣ್ಣಿಸುವದೇ ಅಸಾಧ್ಯ. ಅದನ್ನು ಊಹಿಸಿಯೇ ತಿಳಿದುಕೊಳ್ಳಬೇಕು! ಆ ಕಾರಣದಿಂದಲೇ ಅದಕ್ಕೆ ಮೊಗಲಾಯಿ ಎಂದು ಹೆಸರು ಬಿತ್ತು. ಮುಸಲ್ಮಾನರ ಸಂಸ್ಕೃತಿ ಮತ್ತು ಆಡಳಿತೆಯಿಂದ ಬದ್ಧವಾದ ಪ್ರದೇಶ. ಅಲ್ಲಿಯ ಕನ್ನಡಿಗರಿಗೆ ರಾಜಕಾರಣವೆಂದರೇನೇ ಗೊತ್ತಿರಲಿಲ್ಲ.

ಹೀಗೆ ನಾನು ಇಡೀ ಕರ್ನಾಟಕದ ರಾಜಕಾರಣದ ಸಾಮಾನ್ಯ ಸ್ವರೂಪವನ್ನು ತಿಳಿಸಿರುವೆನು. ಇದಾಯಿತು, ೧೯೦೫ರ ವರೆಗಿನ ಸ್ಥಿತಿ. ಸಾರಾಂಶ, ಈ **ಕತ್ತಲೆ ಯುಗದಲ್ಲಿ** ಕರ್ನಾಟಕದಲ್ಲಿ ಯಾವ ತರಹದ ರಾಜಕೀಯ ಚಟುವಟಿಕೆಯೂ ಇದ್ದಿಲ್ಲವೆಂದು ಸಾಮಾನ್ಯತಃ ಹೇಳಿದರೆ ಅತಿಶಯೋಕ್ತಿಯಾಗಲಿಕ್ಕಿಲ್ಲ.

೧೯೦೫**ರಿಂದ** ೧೯೧೦ **ಕರ್ನಾಟಕದ ಸ್ಥಿತಿ** :— ಆಗ ಧಾರವಾಡದಲ್ಲಿ

ಏಳೆಂಟು ವರ್ತಮಾನಪತ್ರಗಳಿದ್ದವು— ಕರ್ನಾಟಕವೃತ್ತ, ಕರ್ನಾಟಕಪತ್ರ, ಧನಂಜಯ, ಚಂದ್ರೋದಯ, ಹಿಂದುಸ್ಥಾನ ಸಮಾಚಾರ, ರಾಜಹಂಸ, ಕ್ಷೇಮ ಸಮಾಚಾರ, ಕನ್ನಡ ಕೇಸರಿ, ಧಾರವಾಡವೃತ್ತ ( ಮರಾಠೀ ಪತ್ರಿಕೆ ) ಲೋಕ ಬಂಧು. ೧೯೧೦ನೆಯ ಫೆಬ್ರುವರಿಯಲ್ಲಿ ಸರಕಾರದವರು ಮುದ್ರಣ ಬಿಲ್ಲನ್ನು ಪಾಸು ಮಾಡಿಕೊಂಡು, ವೃತ್ತಪತ್ರಿಕೆಗಳಿಗೆ ಬಾಯಿಚಂಡು ತುರುಕಿದರು. ಆಗ ಧಾರವಾಡವೃತ್ತ, ಚಂದ್ರೋದಯ, ಹಿಂದುಸ್ಥಾನ ಸಮಾಚಾರ, ರಾಜಹಂಸ, ಕ್ಷೇಮಸಮಾಚಾರ ಮುಂತಾದ ಪತ್ರಿಕೆಗಳು ನಿಂತುಹೋದವು. ಉಳಿದವು ಉಗ್ರಲೇಖ ಬರೆಯಲು ಹೆದರಹತ್ತಿದವು. ಲೋಕಬಂಧು, ವಿಜಾಪುರದ ಕರ್ನಾಟಕ ವೈಭವ ಇವು ರಾಜಕಾರಣದ ಸಂನ್ಯಾಸವನ್ನು ಸ್ವೀಕರಿಸಿದವು. ಕನ್ನಡ ಕೇಸರಿಯು ಅಜ್ಞಾತವಾಸವನ್ನು ಕೈಕೊಂಡಿತು. ಕರ್ನಾಟಕ ಪತ್ರಕ್ಕೆ ನಾನು ಸಂಪಾದಕನಾಗಿದ್ದೆನು. ಕರ್ನಾಟಕವೃತ್ತ ಮತ್ತು ಕನ್ನಡ ಕೇಸರಿ ಇವುಗಳಲ್ಲಿ ಸಂಪಾದಕೀಯ ಲೇಖಗಳನ್ನು ಬರೆಯುತ್ತಿದ್ದೆನು. ಆ ಸಂದರ್ಭ ದಲ್ಲಿ ಅದರೊಳಗಿನ ಅನೇಕ ಲೇಖಗಳೂ, ಪುಸ್ತಕಗಳೂ ಜಪ್ತ ಮಾಡಲ್ಪಟ್ಟವು. ಮತ್ತು ಸುಡಲ್ಪಟ್ಟವು. ೧೯೦೭ರಲ್ಲಿ ವಾಗ್ಭೂಷಣ ನಡೆಸಿದೆ. ಅದರ ಫೆಬ್ರುವರಿ ಸಂಚಿಕೆಯಲ್ಲಿ ನಾನು ಬಹುಶಃ ಮೊಟ್ಟಮೊದಲಿಗೆ ತುಂಡ ತುಂಡಾದ ಕರ್ನಾಟಕ ವನ್ನು ಒಂದುಗೂಡಿಸಿ, ಅಖಂಡ ಕರ್ನಾಟಕ ಮಾಡುವದರ ಆವಶ್ಯಕತೆಯನ್ನು ಸ್ಪಷ್ಟವಾಗಿ ಕರ್ನಾಟಕ ಜನತೆಯ ಮುಂದೆ ಇಟ್ಟೆನು. ಆ ಮುಂಚೆ ಅಷ್ಟು ಸ್ಪಷ್ಟವಾದ ಉಲ್ಲೇಖವನ್ನು ನಾನಾಗಲಿ, ಮತ್ತಾರಾಗಲಿ ಮಾಡಿದಂತಿಲ್ಲ. ಅದ ರಲ್ಲಿ ನಾನು ಬರೆದದ್ದೇನೆಂದರೆ, “ ಜರಾಸಂಧನ ದೇಹದ ತುಂಡುಗಳಲ್ಲಿ ಸಮ್ಮಿ ಲನ ಶಕ್ತಿ ಇದ್ದಂತೆ, ನಮ್ಮ ಕನ್ನಡ ಭಾಷೆಯ ಈಗ ನಿರ್ಜೀವವಾಗಿರುವ ತುಂಡುಗಳಲ್ಲಿ ತಮ್ಮಷ್ಟಕ್ಕೆ ತಾವೇ ಸಮ್ಮಿಲಿತವಾಗುವ ಶಕ್ತಿಯು ಇಲ್ಲ. ಈ ಐದು ತುಂಡುಗಳನ್ನು ಒತ್ತಟ್ಟಿಗೆ ಕೂಡಿಸಿ, ಅವುಗಳಲ್ಲಿ ಜೀವಕಳೆಯನ್ನು ತುಂಬಿ ಸುವ ಭಾರವು ಕನ್ನಡಿಗರ ಮೇಲೆ ಇರುತ್ತದೆಂಬುದನ್ನು ಯಾರೂ ಮರೆಯ ಬಾರದು.” **ಆ ನನ್ನ ಕಲ್ಪನೆಯು ಮೂರ್ತಸ್ವರೂಪವನ್ನು ತಾಳಿ ರಾಜ್ಯ ನಿರ್ಮಾಣವಾಗುವದಕ್ಕೆ ಸುಮಾರು ೫೦ ವರ್ಷಗಳಷ್ಟು ದೀರ್ಘಕಾಲ ಹಿಡಿಯಿತು!** ಇರಲಿ, ಆ ಹಿಂದಿನ ಕಾಲಕ್ಕೆ ಕರ್ನಾಟಕ ಏಕೀಕರಣ ಕಲ್ಪನೆ ಶ್ರೀಯುತ ಎಸ್. ಜಿ. ನರಸಿಂಹಾಚಾರ್ಯರಂಥ ಕನ್ನಡದ ಕಟ್ಟಭಿಮಾನಿಗಳಿಗೆ

ಕೂಡ ಇರಲಿಲ್ಲ! ಇಷ್ಟೇ ಅಲ್ಲ. ಅದು ಅವರಿಗೆ ಅಸಂಭವವಾಗಿಯೇ ತೋರುತ್ತಿತ್ತೆಂಬುದು, ಅದೇ ವರ್ಷ ಅಂದರೆ, ೧೯೦೭ನೆಯ ಇಸವಿಯ ಮೇ ತಿಂಗಳ ಕೊನೆಗೆ ನಾನು ಕೂಡಿಸಿದ ಪ್ರಥಮ ಅಖಿಲ ಕರ್ನಾಟಕ ಗ್ರಂಥಕರ್ತರ ಸಮ್ಮೇಲನದಲ್ಲಿ ಶ್ರೀ. ನರಸಿಂಹಾಚಾರ್ಯರು ತಮ್ಮ ಅಧ್ಯಕ್ಷೀಯ ಭಾಷಣದಲ್ಲಿ "ಅದು ಪುನಃ ಒಂದಾಗಿ ಸೇರುವ ಸಂಭವವಿಲ್ಲ " ಎಂದು ನಿರಾಶೆಯ ಉದ್ಗಾರ ತೆಗೆದುದೇ ಸಾಕ್ಷಿ. ಆದರೆ ಅಖಂಡ ಕರ್ನಾಟಕದ ಪ್ರಥಮ ಸಂಕಲ್ಪವನ್ನು ಮಾಡಿದ ನಾನು ಮಾತ್ರ ನಿರಾಶನಾಗದೆ ಅದರ ಬಗ್ಗೆ ಕೊನೆಯ ವರೆಗೆ ಪ್ರಯತ್ನ ಮಾಡಿದೆ.

**ನನ್ನಲ್ಲಿ ಕರ್ನಾಟಕತ್ವದ ಉಗಮ:**— ಈ ಕರ್ನಾಟಕತ್ವದ ಕಲ್ಪನೆ ನನ್ನ ತಲೆಯಲ್ಲಿ ಆಕಾಶದಿಂದ ಒಮ್ಮೆಲೇ ಬೀಳಲಿಲ್ಲ. ಅದು ನನ್ನ ದೀರ್ಘವಾದ ಅನುಭವದ ಮತ್ತು ಸ್ವತಂತ್ರವಾದ ಹಾಗೂ ಪರಿಪಕ್ವವಾದ ವಿಚಾರದ ಫಲ. ೧೯೦೫ರಲ್ಲಿ ದೇಶಸೇವೆ ಮಾಡಬೇಕೆಂಬ ಸಂಕಲ್ಪ ಮಾಡಿ ಹೊರಟ ನಾನು, ಯಾವ ಮಾರ್ಗದಿಂದ ಹೋದರೂ ಕೊನೆಗೆ ಈ 'ಕರ್ನಾಟತ್ವ'ಕ್ಕೇನೇ ಬಂದು ತಲುಪಿದೆ. ಸಂಪಾದಕನಾಗಬೇಕೆಂದು ಹವಣಿಸಿದೆ. ಮುಂದೆ ಅಡ್ಡಗೋಡೆ ಬಂದು ನಿಂತಿತು. ಏಕೆಂದರೆ, ವೃತ್ತಪತ್ರಿಕೆಗಳಿಗೆ ಉತ್ತರ ಕರ್ನಾಟಕದ ಹೊರಗೆ ಹೋಗಲಿಕ್ಕೆ ಆಸ್ಪದ ಇದ್ದಿಲ್ಲ. ಉತ್ತರಕ್ಕೆ ಮರಾಠಿ ಭಾಷೆ. ಪಶ್ಚಿಮಕ್ಕೆ ಸಹ್ಯಾದ್ರೀ ಅಡ್ಡಗೋಡೆ ಪೂರ್ವ ಮತ್ತು ದಕ್ಷಿಣದಲ್ಲಿ, ಪವಿತ್ರವಾದ ತುಂಗಭದ್ರಾ ನದಿಯು ನಮ್ಮನ್ನು ಪಾವನ ಮಾಡುವ ಬದಲು, ಹಾವಿನಂತೆ ಅಡ್ಡ ಬಂದಿತು. ಏಕೆಂದರೆ, ಪೂರ್ವ ದಿಕ್ಕಿನಲ್ಲಿ ಅದನ್ನು ದಾಟಿದ ಕೂಡಲೆ ಮೊಗಲಾಯಿ ಮತ್ತು ಮದ್ರಾಸ ಇಲಾಖೆ. ದಕ್ಷಿಣದಲ್ಲಿ ಅದನ್ನು ದಾಟಿದ ಕೂಡಲೆ ಮೈಸೂರ ಸಂಸ್ಥಾನ. ಹೀಗೆ ಸಂಪಾದಕರಿಗೆ ನಾಲ್ಕೂ ದಿಕ್ಕುಗಳಲ್ಲಿ ದಿಗ್ಬಂಧನವಾದ ನಂತರ ಅವು ಉಸುರುಗಟ್ಟಿ ಸಾಯದೆ ಹೇಗೆಇದ್ದಾವು! ಏನೋ ಧಾರವಾಡದಲ್ಲಿ ಮಾತ್ರ ಟುಕುಟುಕು ಜೀವ ಹಿಡಿದುಕೊಂಡಿದ್ದವು. ಕೆಲವು ನಿರಭಿಮಾನಿಗಳಾದ ಕನ್ನಡಿಗರು, 'ನಮ್ಮ ಲೇಖಗಳಲ್ಲಿ ಸಾಮರ್ಥ್ಯವಿಲ್ಲದಿರಬಹುದಾದ್ದರಿಂದ ಅವುಗಳ ಪ್ರಚಾರವಾಗಿರಲಿಕ್ಕಿಲ್ಲ' ಎಂದುನಮ್ಮನ್ನು ಹಂಗಿಸಿದರು. ಆಗ ನಾನು ಕನ್ನಡಕೇಸರಿ ಎಂಬಪತ್ರದಲ್ಲಿ ಲೋ. ಟಿಳಕರ ಕೇಸರಿ ಪತ್ರಿಕೆಯುಲ್ಲಿಯ ಅಗ್ರಲೇಖಗಳನ್ನೆ ಕನ್ನಡದಲ್ಲಿ ಭಾಷಾಂತರಿಸಿದೆ. ಮತ್ತು ಅವನ್ನು

ವಿಕೆಯ ಮುಖಾಂತರ ಇಟ್ಟು ತೋರಿಸಿದೆ. ಆಗ ಅವರಿಗೆ ಕರ್ನಾಟಕ ತುಂಡು ತುಂಡಾದದ್ದೇ ಅದರ ದುರ್ಬಲತೆಗೆ ಮೂಲಕಾರಣವೆಂಬುದು ಮನವರಿಕೆಯಾಯಿತು. ಗ್ರಂಥ ಬರೆದೆ. ಭಾಷಾಭೇದದ ಮೂಲಕ ಅವೂ ಉತ್ತರ ಕರ್ನಾಟಕದ ಗಡಿದಾಟಲಿಲ್ಲ. ರಾಜಕಾರಣವನ್ನು ಹಬ್ಬಿಸಹೋದೆ. ಕರ್ನಾಟಕಕ್ಕೆ ಪ್ರತ್ಯೇಕ ಅಸ್ತಿತ್ವವೇ ಇಲ್ಲದ್ದರಿಂದ ಅಲ್ಲಿಯೂ ಅದೇ ಗೋಡೆ ಮುಂದೆ ಬಂದು ನಿಂತಿತು.

**ತರುಣರ ತಂಡ**:—ನಾನು ತೆಗೆದ ರಾಷ್ಟ್ರೀಯ ಶಾಲೆಯನ್ನು ಆದರಲ್ಲಿ ಕೊಡಲ್ಪಡುವ ಶಿಕ್ಷಣವು ( Pernicious education ) ಎಂಬ ನೆವದಿಂದ ಸರಕಾರವು ನಿಲ್ಲಿಸಲು ಹುಕುಮು ಮಾಡಿತು. ಆ ರಾಷ್ಟ್ರೀಯ ಶಾಲೆ ನಿಂತಾಗಿನಿಂದ ನನ್ನ ತಲೆಯಲ್ಲಿ, ಮುಂಚೆ ಸ್ವಾರ್ಥತ್ಯಾಗಿಗಳಾದ ಪದವೀ ಧರರದೊಂದು ಕೇಂದ್ರವನ್ನು ಸ್ಥಾಪಿಸುವ ಕಲ್ಪನೆಯು ಜೋರಿನಿಂದ ಬರ ಹತ್ತಿತು. ಆ ಉದ್ಯೋಗಕ್ಕೆ ಹತ್ತಿದೆ. ನನಗೆ ಯಾವಾಗಲೂ ದೊಡ್ಡವರಿ ಗಿಂತ ತರುಣರಲ್ಲಿ ವಿಶ್ವಾಸ ಬಹಳ. ಆದ ಕಾರಣ ನನ್ನ ಉತ್ಸಾಹಶಕ್ತಿಯನ್ನು ತರುಣರಿಗೆ ಪ್ರೇರಣೆ ಕೊಡುವದರಲ್ಲಿಯೇ ವಿನಿಯೋಗಿಸುವದು ನನ್ನ ಸ್ವಭಾವ. ಸಂಸ್ಥೆಗಳ ಸುತ್ತಲೂ ವ್ಯಕ್ತಿಗಳನ್ನು ತಂದು ಜುಲುಮೆಯಿಂದ ನಿಲ್ಲಿಸುವದಕ್ಕಿಂತ, ಸ್ವಾರ್ಥತ್ಯಾಗಿಗಳಾದ ಜನರು ಸ್ವಲ್ಪೇ ಇದ್ದರೂ ಅವರ ಸುತ್ತಲೂ ಸಂಸ್ಥೆಗಳ ಜಾಳಿಗೆಯನ್ನು ಹೆಣೆಯುವದು ನನ್ನ ಕಾರ್ಯಪದ್ಧತಿ.

ನಾನು ಸಂಕಲ್ಪಿಸಿಕೊಂಡ ಅಖಂಡ ಕರ್ನಾಟಕ ಕಾರ್ಯವು ಅತಿಶಯ ವ್ಯಾಪಕವಾಗಿತ್ತೆಂಬುದೂ ಅದು ನನ್ನೊಬ್ಬನಿಂದ ಸಾಧ್ಯವಿಲ್ಲೆಂಬುದೂ ನನಗೆ ಗೊತ್ತಿತ್ತು. ಆ ಕಾರ್ಯವನ್ನು ಮುಂದುವರಿಸಲಿಕ್ಕೆ ಭಿನ್ನ ಭಿನ್ನ ಕ್ಷೇತ್ರಗಳಲ್ಲಿ ಕೆಲಸ ಮಾಡುವದಕ್ಕೆ, ಭಿನ್ನ ಭಿನ್ನ ಅಭಿರುಚಿಯುಳ್ಳ ತರುಣ ಪದವೀಧರರ ತಂಡವೊಂದು ಸಿದ್ಧವಾಗಬೇಕೆಂದು ನಾನು ಹಾತೊರೆದೆ. ೧೯೧೦ರಲ್ಲಿ ರಾಷ್ಟ್ರೀಯ ಶಾಲೆ ನಿಂತಾಗ ಈ ವಿಚಾರ ಜೋರಿನಿಂದ ಬರಹತ್ತಿತು. (೧) ವ್ಹಿಕ್ಟೋರಿಯಾ ಹಾಯಸ್ಕೂಲಿನ ಪುನರ್ಘಟನೆ. (೨) ಖಾಸಗೀ ಕಾಲೇಜ ಸ್ಥಾಪನೆ. (೩) ಕರ್ನಾಟಕ ಮಹಿಳಾ ವಿದ್ಯಾಲಯ ಸ್ಥಾಪನೆ. (೪) ಇತಿಹಾಸ ಮಂಡಳ ಸ್ಥಾಪನೆ—ಮುಂತಾದ ಅನೇಕ ರೂಪಗಳಲ್ಲಿ ಅದು ಮುಂದೆ ಹೊರ

ಬಿದ್ದಿತು. ೩೧—೩—೧೯೧೨ನೆಯ ದಿವಸ ನಾನು ಜಹಾಗಿರದಾರ ಆದ್ಯ ರಂಗಾಚಾರ್ಯ (ಮುಂದೆ ಹಾಯಕೋರ್ಟ ಜಜ್ಜರಾದವರು) ಇವರಿಗೆ ಬರೆದ ಅತಿ ಉದ್ದವಾದ ಪತ್ರದ ಸಂಬಂಧದ ಉಲ್ಲೇಖವು ನನ್ನ ಡಾಯರಿಯಲ್ಲಿ ಹೀಗಿದೆ.

"I stated my long cherished object of forming a nucleus body of young graduates, with Victoria High School as its centre, for the regeneration of Karnatak. I am strongly of opinion that, unless such a body as formed, no realworkcan begin." ರಂಗಾಚಾರ್ಯರೂ ಕರ್ನಾಟಕ ಭಾಷೆಯ ಉಜ್ವಲ ಅಭಿಮಾನಿಗಳು. ಅವರು "ಕರ್ನಾಟಕದ ಭಾಗ್ಯರವಿಯು ಎಂದುಉದಯವಾಗುವನೋ" ಎಂಬ ವಿಷಯದ ಬಗ್ಗೆ ನನಗೆ ಒಂದು ಪತ್ರ ಬರೆದಿದ್ದರು. ಅದಕ್ಕೆ ನಾನು ಕೊಟ್ಟ ಉತ್ತರ ಮೇಲೆ ಉಲ್ಲೇಖಿಸಿದ ನನ್ನ ಪತ್ರ. ಆ ಭಾಗ್ಯರವಿಯು ಉದಯಿಸಿದ್ದನ್ನು ನೋಡುವದಕ್ಕೆ, ನನ್ನಂತೆ ಅವರೂ ಇನ್ನೂ ಜೀವಂತ ಇದ್ದಾರೆ. ಇರಲಿ, ಪದವೀಧರರನ್ನು ಕುರಿತು ಹೀಗೆ ಬೇಟಿ ಮಾಡುತ್ತಿರುವಾಗ ನನಗೆ ಗುತ್ತಲ ರಂಗಾಚಾರ್ಯರೇ ಮುಂತಾದ ಹಲವು ಪದವೀಧರರು ದೊರೆತರು. ಅವರು ಹಿಂದುಮುಂದಿನ ವಿಚಾರವಿಲ್ಲದೇ ಸ್ವಾರ್ಥತ್ಯಾಗಕ್ಕೆ ಧುಮುಕಿದರು. ಶ್ರೀ. ಹುಕ್ಕೇರಿಕರ ರಾಮರಾಯರು ಇಲ್ಲಿಗೆ ಬಂದದ್ದು ಇದೇ ಕಾಲಕ್ಕೇ. ೨೭—೧೧—೧೯೧೨ನೆಯ ದಿವಸದ ನನ್ನ ಡಾಯರಿಯಲ್ಲಿ ಹೀಗೆ ಬರೆದಿರುವೆ. "ನಾನು ಈ ಊರಿಗೆ ಬಂದ ಒಟ್ಟು ನಾಲ್ಕಾರು ವರ್ಷಗಳಲ್ಲಿ, ಸಾರ್ವಜನಿಕ ಕೆಲಸಗಳಲ್ಲಿ ನನಗೆ ವಿಲಕ್ಷಣ ಅನುಭವ ಬಂದಿರುತ್ತದೆ. ನನಗೆ ಬಂದಂತೆ ನಮ್ಮ ದೇಶದಲ್ಲಿ ಎರಡನೆಯವರಿಗೆ ಯಾರಿಗೂ ಅನುಭವ ಬಂದಿಲ್ಲವೆಂದು ತೋರುತ್ತದೆ.........ನಾನು ದಿನಾಲು ಈ ಮಾತಿನ ವಿಚಾರ ಮಾಡುತ್ತಿರುತ್ತೇನೆ. ಇದರಿಂದ ನನಗೆ ಕಂಡುಬರುವದೇನೆಂದರೆ— ನಮ್ಮಲ್ಲಿ ಜನರು ಇಲ್ಲ. ಕಾರಣ. ಮೊದಲು ಜನರು ನಿರ್ಮಾಣವಾಗದೆ ಯಾವ ಕಾರ್ಯವೂ ಕೈಗೂಡುವದಿಲ್ಲ. ಎಲ್ಲಿ ಹೋದರೂ ಒಣ ಆಡಂಬರ ಬೆಳೆದಿದೆ.........ಮಿಕ್ಕ ಯಾವತ್ತೂ ಕೆಲಸಗಳನ್ನು ಬಿಟ್ಟುಕೊಟ್ಟು ಜನರನ್ನು ನಿರ್ಮಾಣ ಮಾಡುವದಕ್ಕೆ ನಾನು ಹೊರಟದ್ದಕ್ಕೆ ಇದೇ ಕಾರಣವು.

**"ನೂತನ ಕರ್ನಾಟಕ"**ವನ್ನು ಹುಟ್ಟಿಸುವದನ್ನೇ ನಾವೆಲ್ಲರೂ ಧ್ಯೇಯವನ್ನಾಗಿಟ್ಟುಕೊಳ್ಳಬೇಕು...........ನಾನು ಎರಡೇ ವರ್ಷ ಪ್ರಯತ್ನ ಮಾಡಿದ್ದರ ಫಲವು, ನಾನು ಈ ನಾಲ್ಕು ಜನರಿಗೆ ಒಂದು ತರಹದ ದೇಶಸೇವೆಗೆ ಹಚ್ಚಿದ್ದರಿಂದಾಯಿತೆಂದು ನಾನು ತಿಳಿಯುತ್ತೇನೆ. "ನೂತನ ಕರ್ನಾಟಕ" ಕ್ಕೆ ನಾನು ಪ್ರಾರಂಭ ಮಾಡಿಕೊಟ್ಟ ಕಿತ್ತಿಯು ಅಲ್ಲಿಗೇ ಮುಗಿಯುತ್ತದೋ ಎಂದು ನನಗೆ ಅಂಜಿಕೆ ಇತ್ತು. ಇಷ್ಟರಲ್ಲಿಯೇ ನನ್ನಿಂದಲೇ ಮುಂದಿನ ಕಾರ್ಯವು ಸಾಗಿತೆಂದು ನನ್ನ ಮನಸ್ಸಿಗೆ ಒಂದು ಬಗೆಯ ಸಂತೋಷವಾಗುತ್ತದೆ. ಇಲ್ಲಿಯವರೆಗೆ ನನ್ನ ಮನಸ್ಸಿಗೆ ಚೈನವೇ ಇರಲಿಲ್ಲ..........." ವ್ಹಿಕ್ಟೋರಿಯಾ ಹಾಯಸ್ಕೂಲಿನಲ್ಲಿ ( ಈಗಿನ ವಿದ್ಯಾರಣ್ಯ ಹಾಯಸ್ಕೂಲಿನಲ್ಲಿ ) ಆ ಪದವೀಧರರು ಸೇರಿ, ಅದರ ಹೊಸ ಆಡಳಿತಕ್ಕೆ ಪ್ರಾರಂಭವಾಯಿತು. ನಾನು ಆ ಆಡಳಿತದಲ್ಲಿ ಪುನಃ ಕೈ ಹಾಕಲಿಲ್ಲ. ಏಕೆಂದರೆ ನನ್ನ ಹೆಸರು ಆಗ ಸರಕಾರದ ಕರೀಪಟ್ಟಿ ( Black-list )ಯಲ್ಲಿ ಇದ್ದುದರಿಂದ ನಾನು ಅಲ್ಲಿ ಆಜೀವ ಸದಸ್ಯನಾಗಿರುವಂತೆ ಇದ್ದಿಲ್ಲ. ಅದೂ ಒಂದು ರೀತಿಯಿಂದ ಒಳಿತೇ ಆಯಿತು! ದೇವರು ನನ್ನನ್ನು ಬೇರೆ ಕೆಲಸಕ್ಕೆ ಅಂದರೆ, ಅಖಂಡ ಕರ್ನಾಟಕ ನಿರ್ಮಾಣಕ್ಕಾಗಿ ಹುಟ್ಟಿಸಿದ್ದನು. ೪-೪-೧೯೧೩ನೆಯ ದಿವಸದ ನನ್ನ ಡಾಯರಿಯಲ್ಲಿ ಹೀಗೆ ಇದೆ.

"I shall try my utmost, and as soon as I find another person willing to take up the responsibility I shall at once hand over the charge to any one at any time." ಇದರಿಂದ ನಾನು ಮೊದಲಿನಿಂದಲೂ ಸಾರ್ವಜನಿಕ ಕಾರ್ಯ ಮಾಡುವದರಲ್ಲಿ ಯಾವ ಧೋರಣೆ ಇಟ್ಟುಕೊಂಡಿದ್ದೆನೆಂಬುದು ಗೊತ್ತಾಗುವದು.

**ಕರ್ನಾಟಕ ಮಹಿಳಾ ವಿದ್ಯಾಲಯ:**--- ಇದೇ ಸುಮಾರಕ್ಕೆ, ಗಂಡು ಮಕ್ಕಳಿಗೆ ರಾಷ್ಟ್ರೀಯ ಶಿಕ್ಷಣ ಕೊಡುವದಕ್ಕೆ ಸರಕಾರದವರು ಅಡ್ಡ ಬಂದರೂ ಬರಲಿ, ಹೆಣ್ಣುಮಕ್ಕಳಿಗಾದರೂ ರಾಷ್ಟ್ರೀಯ ಶಿಕ್ಷಣ ಸಿಗಲಿ ಎಂಬ ಉದ್ದೇಶದಿಂದ ಶ್ರೀ. ಕುಂಭಕೋಣಂ ಎಂಬ ಪದವೀಧರರೂ ಮತ್ತು ಅವರ ಪತ್ನಿ ಲಕ್ಷ್ಮೀಬಾಯಿ ಈ ದಂಪತಿಗಳ ಮುಖಾಂತರವಾಗಿ ಇದನ್ನು ಹೊರಡಿಸಿದೆ. ಇದರ ಉದ್ಘಾಟನ ಸಮಾರಂಭಕ್ಕೆ ನಾನೂ ನನ್ನ ಪರಮ ಸ್ನೇಹಿತರೂ ಅಭಿಮಾನಿಗಳೂ ಆದ

ಸೌ|| ಎಚ್. ರುಕ್ಮಿಣಮ್ಮ ಎಂಬವರನ್ನು ಬೆಂಗಳೂರಿನಿಂದ ಕರೆಸಿದ್ದೆ! ಮುಂದೆ ನನ್ನ ತರುಣ ಮಿತ್ರಳಾದ ಶಹಾಪುರದ ಡಾ. ಇಂದುಮತಿಬಾಯಿ ನಾಯಿಕ ಇವಳನ್ನು ವಾರ್ಷಿಕ ಸಮಾರಂಭಕ್ಕೆ ಕರೆಸಿಕೊಂಡಿದ್ದೆ. ಮತ್ತು ಮುಂದೆ ಕೆಲವು ವರ್ಷಗಳ ನಂತರ ಕರ್ನಾಟಕದ ಅತ್ಯುಜ್ವಲ ಅಭಿಮಾನಿಗಳಾದ ಮತ್ತು ನನ್ನ ಜಯಕರ್ನಾಟಕ ಮಾಸಪತ್ರಿಕೆಗೆ ಪ್ರಥಮ ಪೋಷಕರಾದ ಕುಂ|| ಸೌ|| ತಿರುಮಲೆ ರಾಜಮ್ಮನವರನ್ನು ಮತ್ತು ಅವರ ಪತಿಯಾದ ಶ್ರೀ. ತಾತಾಚಾರ್ಯ ಶರ್ಮಾ ಇವರನ್ನು ಕರೆಸಿಯಿಕೊಂಡು ಹತ್ತೆಂಟು ದಿವಸ ಸೌ|| ರಾಜಮ್ಮನವರ ವೀಣಾ ಕಚೇರಿಗಳನ್ನು ಮಹಿಳಾ ವಿದ್ಯಾಲಯದಲ್ಲಿಯೂ ನನ್ನ ಸ್ವಂತ ಮನೆಯಲ್ಲಿಯೂ ಏರ್ಪಡಿಸಿ ಕರ್ನಾಟಕ ಸಂಗೀತವನ್ನು ಇಲ್ಲಿ ಪ್ರಚುರ ಪಡಿಸಿದೆನು. ಮತ್ತು ಮುಂದೆ ಶ್ರೀ. ನರಸಿಂಗರಾಯ ಉರ್ಫ ಅಪ್ಪಣ್ಣ ಎಂಬ ಕೊಳಲು ಊದುವರನ್ನು ಕರೆಯಿಸಿ ಕರ್ನಾಟಕ ಸಂಗೀತದ ರುಚಿ ಹೆಚ್ಚಿಸಿದೆ. ಆದರೆ ಇನ್ನೂ ವರೆಗೂ ಉತ್ತರ ಕರ್ನಾಟಕದವರಿಗಂತೂ ಆ ರುಚಿ ಹತ್ತಿಲ್ಲವೆನ್ನಬೇಕು. ಸಂಗೀತದ ರುಚಿ ಬೇರೂರಬೇಕಾದರೆ ಅದು ಮೇಲಿಂದ ಮೇಲೆ ಕಿವಿಗೆ ಬಿದ್ದು ರೂಢಿಯಾಗಬೇಕು. ದಾಸರ ಪದಗಳ ಮೂಲಕವೇ ಈ ರುಚಿ ಬೆಳೆಯಬಹುದೆಂದು ನನ್ನ ಅಭಿಪ್ರಾಯ. ಆ ಉದ್ದೇಶದಿಂದ ಯೋಗಾ ನರಸಿಂಹಂ, ಎಮ್. ಎ. ಇವರಿಂದ ಇಲ್ಲಿಯ ಜನರಿಗೆ ಕರ್ನಾಟಕ ಸಂಗೀತದ ರುಚಿ ತೋರಿಸಿಕೊಟ್ಟೆ. ೩–೪ ಸಲ ಸಂಗೀತ ಕಚೇರಿಗಳನ್ನು ಏರ್ಪಡಿಸಿದೆ. ಯದುಗಿರಿಯಮ್ಮಳೆಂಬ ಚಿಕ್ಕ ಬಾಲಿಕೆಯನ್ನೂ ಅವಳ ತಂದೆಯನ್ನೂ ನನ್ನ ಮನೆಯಲ್ಲಿ ತಿಂಗಳುಗಟ್ಟಲೆ ಇಟ್ಟುಕೊಂಡು ಕೀರ್ತನಗಳನ್ನು ಮಾಡಿಸಿದೆನು. ಸಾರಾಂಶ, ನನ್ನ ಆಯುಷ್ಯದಲ್ಲಿ ಕರ್ನಾಟಕತ್ವದ ಏಳಿಗೆಗಾಗಿ ಹೊರಟ ಯಾವ ಚಳವಳಿಯನ್ನೂ ನಡಿಸದೆ ಇರಲಿಲ್ಲ. ನಾಟಕಪ್ರೇಮಿಯಲ್ಲದಿದ್ದರೂ ಭರತ ಕಲೋತ್ತೇಜಕವೆಂಬ ಧಾರವಾಡದಲ್ಲಿಯ ತರುಣರು ತೆಗೆದ ವಿಲಾಸಿ ನಾಟಕ ಮಂಡಳಕ್ಕೆ ವ್ಹಾಯಿಸ ಪ್ರೆಸಿಡೆಂಟನಾಗಿದ್ದೆ. ಕೀರ್ತನಕಾರನಲ್ಲದಿದ್ದರೂ ಬೆಂಗಳೂರಿನಲ್ಲಿ ಕೀರ್ತನ ಸಮ್ಮೇಳನ ಕೂಡಿಸಿ ಒಂದು ವಾರದ ವರೆಗೆ ಕರ್ನಾಟಕದ ವಿವಿಧ ಭಾಗಗಳಿಂದ ಪ್ರಸಿದ್ಧ ಕೀರ್ತನಕಾರರನ್ನು ಕರೆಯಿಸಿ ಕೀರ್ತನ ಮಾಡಿಸಿದೆ. ಆ ಸಮ್ಮೇಲನಕ್ಕೆ ನಿವೃತ್ತ ದಿವಾಣರಾದ ವ್ಹಿ. ಪಿ. ಮಾಧವರಾಯರು ಪ್ರೆಸಿಡೆಂಟರು. ನಾನು ವೈದ್ಯನಲ್ಲದಿದ್ದರೂ ನನ್ನ ಪರಮ ಮಿತ್ರರಾದ ಸವಣೂರ ಹನುಮಂತ

ರಾಯರು ಬೆಳಗಾವಿಯಲ್ಲಿ ಕೂಡಿಸಿದ ಒಂದನೆಯ ಕರ್ನಾಟಕ ಆಯುರ್ವೇದ ಸಮ್ಮೇಲನವನ್ನು ಸಂಘಟಿಸುವದರಲ್ಲಿ ನಾನು ಪ್ರಮುಖ ಭಾಗವಹಿಸಿದೆ. ಮತ್ತು ಬೆಂಗಳೂರಿನಲ್ಲಿ ಸವಣೂರ ಹನುಮಂತರಾಯರ ಅಧ್ಯಕ್ಷತೆಯಲ್ಲಿ ನಡೆದ ಎರಡನೆಯ ಆಯುರ್ವೇದ ಸಮ್ಮೇಲನದಲ್ಲಿ ಭಾಗ ತೆಗೆದುಕೊಂಡೆ. ವ್ಯಾಪಾರೀ ಪರಿಷತ್ತು, ವಾಚನಾಲಯ ಪರಿಷತ್ತು, ನಾಟ್ಯಸಮ್ಮೇಲನ, ಪಂಪಮಹೋತ್ಸವ ಮುಂತಾದ ಚಟುವಟಿಕೆಗಳಲ್ಲಿಯೂ ಮನಸ್ಸು ಹಾಕಿದ್ದುದರ ಉದ್ದೇಶ ಒಂದೇ. ಅದೆಂದರೆ, ಕರ್ನಾಟಕತ್ವದ ಪ್ರಸಾರ. ಮತ್ತು ಅಖಂಡ ಕರ್ನಾಟಕ ಹುಟ್ಟಿಸುವದಕ್ಕೆ ಪೂರ್ವಭಾವಿಯಾಗಿ ಬೇಕಾಗಿರುವ ಸ್ನೇಹಸಂಬಂಧವನ್ನು ಬೆಳೆಸುವದು. ವಿದ್ಯಾರಣ್ಯ ಉತ್ಸವ, ನಾಡಹಬ್ಬ ಮುಂತಾದವುಗಳ ಉದ್ದೇಶವೂ ಅದೆ. ಮಹಾರಾಷ್ಟ್ರಕ್ಕೆ ಗತವೈಭವ ತೀರ ಸ್ವಲ್ಪ; ಆದರೂ ಅವರು ಉಜ್ವಲ ಅಭಿಮಾನದಿಂದ ಶ್ರೀ. ಶಿವಾಜಿ ಉತ್ಸವವೊಂದರ ಮೂಲಕ ಜಾಗ್ರತಿ ಮಾಡಿದರು! ನಾನು, ಮುಂಚೆ ವಿಜಯನಗರ ರಾಜ್ಯಕ್ಕೆ ಕಾರಣಪುರುಷರಾದ ಶ್ರೀ. ವಿದ್ಯಾರಣ್ಯರ ಉತ್ಸವ ಹೂಡಿದೆ. ನಮ್ಮ ಗತವೈಭವದ ಇತಿಹಾಸದಲ್ಲಿ ಒಬ್ಬರಲ್ಲ, ಅನೇಕ ಅಂಥ ವೀರರೂ ಘನವಿದ್ವಾಂಸರೂ ಇದ್ದ ಕಾರಣ, ಯಾರ ಉತ್ಸವವನ್ನು ಮಾಡಬೇಕು, ಯಾರದನ್ನು ಬಿಡಬೇಕು ಎಂದೆನಿಸಿ, ವಿದ್ಯಾರಣ್ಯ ಉತ್ಸವವನ್ನು ವಿಸ್ತರಿಸಿ ಇಡೀ ವಿಜಯನಗರ ಸಾಮ್ರಾಜ್ಯೋತ್ಸವವನ್ನೇ ಹೂಡಿದೆ! ಈ ಮಧ್ಯದಲ್ಲಿ, ಗೆಳೆಯರು ನವರಾತ್ರಿಯ ೯ ದಿನಗಳ ಸಾಂಸ್ಕೃತಿಕ ಉತ್ಸವದ ಅಂದರೆ ನಾಡಹಬ್ಬದ ಕಲ್ಪನೆ ತೆಗೆದಾಗ, ಅದನ್ನು ನಾವು ಹೂಡಿದೆವು. ಇಂದಿಗೂ ಅದೇ ನಮ್ಮ ಕರ್ನಾಟಕದ ರಾಷ್ಟ್ರೀಯ ಉತ್ಸವವಾಗಿದೆ. ಇವೆಲ್ಲ ಕಿರುಕಳ ಪ್ರಯತ್ನಗಳನ್ನು ಒಟ್ಟಾಗಿ ಇಲ್ಲಿಯೇ ಹೇಳಿಬಿಟ್ಟಿರುವೆ.

ಕೈಲಾಸಂ ಇವರು ಪ್ರಸಿದ್ಧ ನಾಟಕಕಾರರು. ಅವರನ್ನು ಮೊಟ್ಟಮೊದಲಿಗೆ ಧಾರವಾಡಕ್ಕೆ ಕರೆಸಿಯಿಕೊಂಡು ಇಲ್ಲಿ ಅನೇಕ ಪ್ರಯೋಗಗಳನ್ನು ಮಾಡಿಸಿದೆ. ಇವೆಲ್ಲ ನನ್ನ ಪ್ರಯತ್ನಗಳ ಮೂಲಕ, ಮೈಸೂರಿನವರಿಗೂ ನಮಗೂ ಸ್ನೇಹ ಸಂಬಂಧವು ಬೆಳೆದದ್ದರಿಂದ, ಆಗಿನ ಕಾಲದಲ್ಲಿ ಮೈಸೂರಿನವರು ಅಖಂಡ ಕರ್ನಾಟಕದ ನನ್ನ ಕಲ್ಪನೆಗೆ ಹಾರ್ದಿಕ ಬೆಂಬಲವನ್ನು ಕೊಟ್ಟರು. ಇತ್ತೀಚೆಗೆ ನಾಲ್ಕಾರು

ವರ್ಷಗಳಲ್ಲಿಯೇ ಮಾತ್ರ, ಕೆಲ ಮೈಸೂರಿನವರು, ಬೇರೆ ಪ್ರಾಂತವಾಗಬೇಕೆಂದು ಆಗ್ರಹ ತೊಟ್ಟರಂತೆ! ಅದು ಎಂಥ ಸಂಕುಚಿತ ಕಲ್ಪನೆ! ನಾನು ಇತ್ತೀಚಿಗೆ ಆ ಕ್ಷೇತ್ರದಲ್ಲಿ ಇರದಿರುವದರಿಂದ ಆ ಬಗ್ಗೆ ಹೆಚ್ಚಿಗೆ ಬರೆಯಲಾರೆ. ಮೈಸೂರ ಮಹಾರಾಜರ ವಿಷಯಕ್ಕೆ ಪೂಜ್ಯಭಾವ ನನ್ನಲ್ಲಿ ಇಲ್ಲವೆಂದು ಯಾರೂ ಭಾವಿಸ ಕೂಡದು. ನಮ್ಮ ಸುದೈವದಿಂದ ಅವರೆಲ್ಲರು ಕೇವಲ ಅರಸರಾಗಿರದೆ ಉದಾರ ಹೃದಯರೂ, ಧರ್ಮಿಷ್ಠರೂ, ಕನ್ನಡದ ಕಟ್ಟಭಿಮಾನಿಗಳೂ ಆಗಿದ್ದುದರಿಂದಲೇ ಅವರ ವಿಷಯಕ್ಕೆ ಪೂಜ್ಯಭಾವವು ನೆಲೆಗೊಂಡಿತ್ತು; ನೆಲೆಗೊಂಡಿದೆ. ಸ್ವತಃ ನನಗೆ ಅವರ ಬಗ್ಗೆ ಎಂಥ ಉಜ್ವಲವಾದ ಪೂಜ್ಯಭಾವ ಇತ್ತೆಂಬುದು ಈಗಿನ ಮಹಾರಾಜರಿಗೆ ನಾನು ಕೆಲ ವರ್ಷಗಳ ಹಿಂದೆ ಬರೆದ ಖಾಸಗೀ ಪತ್ರದಿಂದ ವ್ಯಕ್ತವಾಗುವದು ಆ ಪತ್ರದ ಸಾರಾಂಶವನ್ನು ಇಲ್ಲಿ ಕೊಡುತ್ತೇನೆ.

ಈ ಪತ್ರದಲ್ಲಿ ನಾನು, ಅವರನ್ನು ವಿದ್ಯಾರಣ್ಯರ ತರುವಾಯದಲ್ಲಿ ವಿದ್ಯಾರಣ್ಯರು ಸಂಸ್ಕೃತ ಧಾರ್ಮಿಕ ಗ್ರಂಥಗಳಿಗೆ ಪ್ರೋತ್ಸಾಹ ಕೊಟ್ಟಂತೆ ಕನ್ನಡ ಸಾಹಿತ್ಯಕ್ಕೆ ಪ್ರೋತ್ಸಾಹ ಕೊಟ್ಟಿರುವದಕ್ಕಾಗಿ ಅವರನ್ನು ಅಭಿನಂದಿಸಿ, ಇಡೀ ಕರ್ನಾಟಕ ಕ್ಷೇನೇ ತಮ್ಮನ್ನು ಅರಸರನ್ನಾಗಿ ಮಾಡುವ ( ಆಗ ಇನ್ನೂ ಸಂಸ್ಥಾನವನ್ನು ನಿಲ್ಲಿಸಿಬಿಡುವ ಕಲ್ಪನೆ ಹೊರಟಿದ್ದಿಲ್ಲ. ) ನಮ್ಮ ಕಲ್ಪನೆಗೆ ತಾವು ಒಪ್ಪಬೇಕೆಂದು ಬೇಡಿಕೊಂಡಿದ್ದೆ. ಅರ್ಥಾತ್ ಉತ್ತರ ಅಪೇಕ್ಷಿಸಿರಲಿಲ್ಲ.

**ಖಾಸಗೀ ಕಾಲೇಜದ ಸ್ಥಾಪನೆ** :— ವ್ಹಿಕ್ಟೋರಿಯಾ ಹಾಯಸ್ಕೂಲಿನ ಪುನರ್ಘಟನೆ ಮಾಡಿದ ಮಾತ್ರದಿಂದ ನನಗೆ ಸಮಾಧಾನವಾಗಲಿಲ್ಲ. ಧಾರವಾಡದಲ್ಲಿ ಒಂದು ಖಾಸಗಿ ಕಾಲೇಜವು ಸ್ಥಾಪಿತವಾದರೆ ಇಲ್ಲಿಯ ರಾಜಕೀಯ ವಾತಾವರಣವೂ ಉದಾತ್ತವಾಗಿ ಬೆಳೆಯುತ್ತದೆಂದು ನನಗೆ ಪ್ರತಿಕ್ಷಣಕ್ಕೆ ಹೊಳೆಯುತ್ತಿತ್ತು. ಏಕೆಂದರೆ, ಖಾಸಗೀ ಕಾಲೇಜಿನ ಶಿಕ್ಷಕರಿಗೆ ಸ್ವಾಭಾವಿಕವಾಗಿಯೇ ವಿದ್ಯಾರಣ್ಯ ಉತ್ಸವ, ನಾಡಹಬ್ಬ, ಸಮ್ಮೇಲನಗಳು ಮುಂತಾದವುಗಳಲ್ಲಿ ಭಾಗ ತೆಗೆದುಕೊಳ್ಳಲಿಕ್ಕೆ ಹೆಚ್ಚು ಒಲವೂ ಅನುಕೂಲವೂ ಇರುತ್ತದೆ. ಅಂಥವರನ್ನು ಹುರಿದುಂಬಿಸಲಿಕ್ಕೆ ಪ್ರಯತ್ನಿಸಿದೆ.

ಶ್ರೀ. ರುಕ್ಮಾಂಗದರಾವ ದೇಶಪಾಂಡೆ, ( ಈಗ ನಿವೃತ್ತ ಇನ್‌ಕಮ್ ಟ್ಯಾಕ್ಸ್ ಆಫೀಸರ. ) ಶ್ರೀ. ರಂಗರಾವ ಅಸುಂಡಿ, (ಬನಾರಸ ವಿಶ್ವವಿದ್ಯಾ

ಲಯದ ನಿವೃತ್ತ ಪ್ರೊಫೆಸರರು ಮುಂತಾದವರು ಸ್ವಾರ್ಥತ್ಯಾಗಕ್ಕೆ ಸಿದ್ಧರಾದರು. ಅವರ ಪ್ರಯತ್ನದಿಂದ ರ್‍ಯಾಂಗಲರ ಕಟ್ಟಿ, ದಾತಾರ(ಈಗಿನ ಸೆಂಟ್ರಲ್ ಹೋಮ ಮಿನಿಸ್ಟರ ) ಮುಂತಾದವರು ಬಂದರು. ಮತ್ತು ಖಾಸಗೀ ಕಾಲೇಜ ಹೊರಟಿತು. ಇದೇ ಕಾಲಕ್ಕೆ ಶ್ರೀ. ರಂಗರಾವ ದಿವಾಕರ ( ಈಗಿನ ಬಿಹಾರದ ರಾಜ್ಯಪಾಲರು. ) ಇವರೂ ಸ್ವಂತ ಪ್ರೇರಣೆಯಿಂದ ಈ ಕಾಲೇಜಕ್ಕೆ ಬಂದು ಕೂಡಿಕೊಂಡರು. ಅಸಹಕಾರ ಚಳವಳಿಯಲ್ಲಿ ಕರ್ನಾಟಕದ ಸಂಕುಚಿತ ಧೋರಣೆಯ ಮೂಲಕ ಅದು ಹಳ್ಳಕೂಡಿತು!



# ೧೩ನೆಯ ಪ್ರಕರಣ

## ರಾಜಕಾರಣದಲ್ಲಿ ಕರ್ನಾಟಕತ್ವ

( ರಾಷ್ಟ್ರೀಯತ್ವದ ಮೀಮಾಂಸೆ ಮತ್ತು ಹನ್ನೆರಡು ‘ ಸ್ವರಾಜ್ಯ ’ ಹೊತ್ತಿಗೆಗಳು )

ವಸ್ತುತಃ ನಾನು ಮೊದಲಿಗೆ ರಾಜಕಾರಣದಲ್ಲಿ ಸೇರಬೇಕೆಂದು ಇಚ್ಛಿಸಿದವನಲ್ಲ. ಮೂಲ ಸ್ವಭಾವದಿಂದಲೂ ರಾಜಕಾರಣಿ ಅಲ್ಲ. ಆದರೆ ಆಗಿನ ಕಾಲದ ಮಹಿಮೆಯ ಮೂಲಕ ನನಗೆ ಒಮ್ಮೆಲೆ ರಾಜಕಾರಣ ದಲ್ಲಿ ಪ್ರಾಮುಖ್ಯದಿಂದ ಬೀಳಬೇಕಾಯಿತು. ರಾಜಕಾರಣವು ಭರತಭೂಮಿಗೆ ಆಗ ಎಲ್ಲಕ್ಕಿಂತ ಹೆಚ್ಚಿಗೆ ಜೀವಾಳದ ಕೆಲಸವಾಗಿತ್ತು. ಎಲ್ಲಿಯವರೆಗೆ ನಮ್ಮ ದೇಶಕ್ಕೆ ಪೂರ್ಣ ಸ್ವಾತಂತ್ರ್ಯವು ಸಿಕ್ಕಿಲ್ಲವೋ ಅಲ್ಲಿಯವರೆಗೆ ನಮ್ಮ ಧರ್ಮ, ನಮ್ಮ ಭಾಷೆ, ನಮ್ಮ ಇತಿಹಾಸ, ನಮ್ಮ ಕಲೆ ನಮ್ಮ ಆರ್ಥಿಕ ಪರಿಸ್ಥಿತಿ ಮುಂತಾದ ಯಾವದೊಂದೂ ಏಳ್ಗೆ ಹೊಂದಲಾರವೆಂಬುದು ಸ್ವತಃಸಿದ್ಧವಾದ ಮಾತಾಗಿತ್ತು. ಅರ್ಥಾತ್, ಸಾರ್ವಜನಿಕ ಜೀವನದಲ್ಲಿ ಅವರವರು ಅವರವರ ಕ್ಷೇತ್ರದಲ್ಲಿ ತಮ್ಮ ತಮ್ಮ ಒಲವಿನ ಮತ್ತು ಅನುಕೂಲತೆಯ ಪ್ರಕಾರ ಕೆಲಸ ಮಾಡಿದರೂ ಆ ಮುಖ್ಯ ಮಾತನ್ನು ಎಲ್ಲರೂ ಆಗ ಮನಗಂಡಿದ್ದರು. ರಾಜ ಕಾರಣಕ್ಕೆ ಮಿಕ್ಕ ವಿಷಯಗಳಂತೆ ಒಂದೇ ಬಾಹ್ಯಸ್ವರೂಪವು ಇರುವದಿಲ್ಲ. ಕಾಲಮಾನ ಪರಿಸ್ಥಿತಿಗನುಸಾರವಾಗಿ ಭಿನ್ನ ಭಿನ್ನ ಸ್ವರೂಪಗಳುಂಟಾಗುತ್ತಿ ದ್ದವು. ಕರ್ನಾಟಕದಲ್ಲಿಯ ರಾಜಕಾರಣದ ಯುಗಗಳನ್ನು ಹೀಗೆ ವಿಂಗಡಿಸ ಬಹುದು:

೧೮೯೫ರ ಪೂರ್ವದಲ್ಲಿ — ಕತ್ತಲೆ ಯುಗ.
೧೮೯೫ರಿಂದ ೧೯೦೫ — ಅರುಣೋದಯದ ಯುಗ.
೧೯೦೫ರಿಂದ ೧೯೧೦ — ಜಾಗ್ರುತಿ ಯುಗ, ಸ್ವದೇಶೀ ಚಳವಳಿ.
೧೯೧೦ರಿಂದ ೧೯೧೫ — ಸುಪ್ತ ಯುಗ.

೧೯೧೫ರಿಂದ ೧೯೨೦ — ಸ್ವರಾಜ್ಯ ಚಳವಳಿ ಅಥವಾ ಹೋಮರೂಲ ಲೀಗ.

೧೯೨೦ರಿಂದ ೧೯೨೫ — ಅಸಹಕಾರ ಯುಗ.

೧೯೩೫ರಿಂದ ೧೯೩೫ — ಕಾಯದೆ ಭಂಗ ಯುಗ.

ನನ್ನ ಜೀವನದ ಸಂಬಂಧವು ಮೊದಲನೆಯ ಯುಗ ಒಂದನ್ನು ಬಿಟ್ಟು, ಮಿಕ್ಕೆಲ್ಲ ಯುಗಗಳೊಡನೆ ಬಂದಿರುತ್ತದೆ. ಇದರ ಇತಿಹಾಸವು ಬಹಳ ದೊಡ್ಡದಿದ್ದು ಅದು 'ನನ್ನ ಜೀವನ ಸ್ಮೃತಿಗಳು' ಎಂಬ ಪುಸ್ತಕದಲ್ಲಿ ೧೫ರಿಂದ ೧೦೪ ಪುಟಗಳ ವರೆಗೆ ಬಂದಿದೆ. ಅದೆಲ್ಲವನ್ನು ಇಲ್ಲಿ ಕೊಡುವ ಆವಶ್ಯಕತೆ ಇಲ್ಲ. ಆ ನನ್ನ ಪುಸ್ತಕದ ಪ್ರತಿಗಳು ತೀರಿಹೋಗಿರುವದರಿಂದ 'ಕರ್ನಾಟಕತ್ವ'ಕ್ಕೆ ಸಂಬಂಧಿಸಿದವುಗಳನ್ನಷ್ಟೇ ಇಲ್ಲಿ ಸಂಕ್ಷೇಪಿಸಿ ಬರೆಯುವೆ.

ಹೇಳತಕ್ಕ ಮೊದಲನೆಯ ಮಾತೆಂದರೆ ನಾನು ನನ್ನ ರಾಜಕಾರಣವನ್ನು ಕೇವಲ ಕರ್ನಾಟಕ ಪ್ರದೇಶಕ್ಕೆ ಮಿತಿಗೊಳಿಸಿದ್ದು. ನನಗೆ ನಡುನಡುವೆ ಅಖಿಲ ಭಾರತದಲ್ಲಿ ಪ್ರಸಿದ್ಧಿ ಪಡೆಯಬೇಕೆಂಬ ಮೋಹವು ಉಂಟಾಗುತ್ತಿತ್ತು. ಆದರೆ ಪ್ರೊ. ವಿಜಾಪುರಕರ ಮತ್ತು ಲೋಕಮಾನ್ಯ ಟಿಳಕರಂಥವರ ಉಪದೇಶದಿಂದ ನಾನು ಈ 'ಪ್ರಸಿದ್ಧಿ' ಕಲ್ಪನೆಯನ್ನು ಮೊದಲು ಬಲಿಕೊಟ್ಟೆನು. ಕರ್ನಾಕವನ್ನಷ್ಟೇ ಕರ್ಮಭೂಮಿಯನ್ನಾಗಿಟ್ಟುಕೊಂಡೆನು. ಅದಕ್ಕೆ ಮುಖ್ಯ ಕಾರಣ, ಕರ್ನಾಟಕವು ಮಿಕ್ಕೆಲ್ಲ ಪ್ರಾಂತಗಳಿಗಿಂತ ತೀರ ಹಿಂದುಳಿದಿರುವದರಿಂದ ಅದರಲ್ಲಿ ಸಂಪೂರ್ಣ ಜಾಗ್ರತೆಯಾಗುವ ಆವಶ್ಯಕತೆಯಿರುತ್ತದೆಂಬುದು. ಮಹಾರಾಷ್ಟ್ರದಲ್ಲಿ ಲೋಕಮಾನ್ಯರು ಅದೇ ತತ್ವವನ್ನು ಅವಲಂಬಿಸಿದ್ದರು. ಅದೊಂದು ಅವರ ವೈಶಿಷ್ಟ್ಯ. ಅಂತೇ ಅವರು ನಾಮದಾರ ಗೋಖಲೆಯವರಂತೆ ಇಂಗ್ಲಿಷ ಭಾಷೆಯನ್ನವಲಂಬಿಸದೆ ಮತ್ತು ಇಡೀ ಭರತಖಂಡದಲ್ಲೆಲ್ಲ ಪ್ರಸಿದ್ಧಿ ಹೊಂದುವದನ್ನಪೇಕ್ಷಿಸದೆ ಅನೇಕ ವರ್ಷಗಳ ವರೆಗೆ ಮಹಾರಾಷ್ಟ್ರ ಪ್ರಾಂತಕ್ಕಷ್ಟೇ ವಿಶೇಷವಾಗಿ ಅಂಟಿಕೊಂಡಿದ್ದರು. ಅಂತೇ ಮಹಾರಾಷ್ಟ್ರವು ಮಿಕ್ಕೆಲ್ಲ ಪ್ರಾಂತಗಳಿಗಳಿಗಿಂತಲೂ ಮುಂದುವರೆದ ಪ್ರಾಂತವಾಗಿದೆ. ಈ ಅವರ ವೈಶಿಷ್ಟ್ಯವನ್ನು ಅವರ ಗೀತಾರಹಸ್ಯದ ಭಾಷಾಂತರಕ್ಕೆ ಜೋಡಿಸಿ ನಾನು ಸ್ವತಂತ್ರವಾಗಿ ಬರೆದಿರುವ ಅವರ ಜೀವನ ಚರಿತ್ರೆಯಲ್ಲಿ ಸ್ಪಷ್ಟಪಡಿಸಿರುವೆ. ನಾನು ಹಿಡಿದ

ಮಾರ್ಗವು ಆವರ ಅನುಕರಣ ಮಾರ್ಗವು. ಅದು ಎಲ್ಲಿಯ ವರೆಗೆ ಹೋಯಿ ತೆಂದರೆ, ಕನ್ನಡ ಅಭಿಮಾನವನ್ನು ಹುಟ್ಟಿಸುವದಕ್ಕೋಸ್ಕರ ಇಂಗ್ಲಿಷಿನಲ್ಲಿ ಪತ್ರ ಗಳನ್ನು ಬರೆಯುವದನ್ನೂ ಬಿಟ್ಟುಬಿಟ್ಟೆದ್ದೆನು. ರಾಜಕಾರಣಕ್ಕೆ ಹೇಗೆ ಕರ್ನಾ ಟಕತ್ವದ ಸ್ವರೂಪವನ್ನು ಕೊಡಲೆಳ್ಳಿಸಿದೆನೆಂಬದನ್ನಿಷ್ಟೇ ಇಲ್ಲಿ ಹೇಳುವೆ.

**ಸ್ವದೇಶ ಚಳವಳಿಯ ಯುಗ- ೧೯೦೫-೧೯೧೦:**— ಸ್ವದೇಶ ಚಳ ವಳಿಯು ವಂಗಭಂಗ ಚಳವಳಿಯಿಂದ ಹುಟ್ಟಿತು. ಮತ್ತು ಹಾಹಾ ಎನ್ನುವ ದರಲ್ಲಿ ಹಿಂದುಸ್ತಾನದಲ್ಲೆಲ್ಲ ಹಬ್ಬಿತು. (೧) ಸ್ವದೇಶಿ. (೨) ಬಹಿ ಷ್ಕಾರ. (೩) ರಾಷ್ಟ್ರೀಯ ಶಿಕ್ಷಣ. (೪) ಮದ್ಯಪಾನ ನಿಷೇಧ. ಇವೇ ಮುಂತಾದವುಗಳು ಇದರ ನಾನಾ ರೂಪಗಳು. ಆ ಚಳವಳಿಯ ತೆರೆಗಳು ಕರ್ನಾಟಕಕ್ಕೆ ಬಂದು ತಲುಪುವದಕ್ಕೂ ನಾನು ವಕೀಲಿಗಾಗಿ ಧಾರವಾಡಕ್ಕೆ ಬರುವದಕ್ಕೂ ಕೂಡಿತು. ಪಿತ್ರೆ, ವಿಠ್ಠಲರಾವ ಜೋಶಿ, ಮುದವೇಡಕರ, ಹೊನ್ನಾಪುರಮಠ, ಬಿಂದುರಾವ ಮುಂತಾದವರು ಹಾಲಗೇರಿಯ ಮೇಲೆ ಪ್ರತಿ ನಿತ್ಯ ವ್ಯಾಖ್ಯಾನ ಕೊಡುತ್ತಿದ್ದರು. ರಾಜಕಾರಣದ ಅಭ್ಯಾಸವನ್ನು ಆಳ ವಾಗಿ ಮಾಡದೆ ರಾಜಕೀಯ ರಣರಂಗದಲ್ಲಿ ಪ್ರವೇಶಿಸಬಾರದೆಂದು ಮುಂಚೆ ಸಂಕಲ್ಪ ಮಾಡಿದ್ದೆ. ಆದರೆ ಯಾವದೋ ಒಂದು ಅದೃಶ್ಯ ಶಕ್ತಿಯು ನನ್ನನ್ನು ಎಲ್ಲಕ್ಕೂ ಮುಂಚೆ ರಾಜಕಾರಣದಲ್ಲಿಯೇ ಎತ್ತಿ ಒಗೆಯಿತು. ನಾನೂ ಸ್ವ ದೇಶೀ ಮತ್ತು ಬಹಿಷ್ಕಾರಗಳ ಬಗ್ಗೆ ಉಪನ್ಯಾಸಗಳನ್ನು ಕೊಡುತ್ತ ತಿರು ಗಿದೆ. ದೀಪದಕಡ್ಡಿ ಕಾರಖಾನೆ, ಸೀಸಪೆನ್ಸಿಲಿನ ಕಾರಖಾನೆ, ಪೆನ್ಸಿಲ್ ಕಾರಖಾನೆ, ಮಂಗಳೂರ ಹಂಚಿನ ಕಾರಖಾನೆ, ಸಕ್ಕರೆ ಕಾರಖಾನೆ, ಸ್ವದೇಶೀ ವಸ್ತ್ರ ಕಾರಖಾನೆ, ಸ್ವದೇಶೀ ಅಂಗಡಿಗಳು, ಸ್ವದೇಶೀ ಬಳೆಗಳು, ಶೀಗೇ ಕಾಯಿ ಪುಡಿ ಇವೇ ಮುಂತಾದ ತರತರದ ಸ್ವದೇಶೀ ಉದ್ಯೋಗಗಳು ಹೊರ ಟವು ಇದೇ ಕಾಲದಲ್ಲಿ. ಅವು ಹೊರಟವು; ಅನೇಕ ಕಾರಣಗಳ ಮೂಲಕ ಬಹುಶಃ ಮುಗ್ಗಿಯೂ ಹೋದವು. ಆದರೆ ಈ ಎಲ್ಲ ಚಳವಳಿಗಳ ಮೂಲಕ ಕರ್ನಾಟಕದಲ್ಲಿ ಉಂಟಾದ ಚೈತನ್ಯವು ಮಾತ್ರ ಅಸ್ತವಾಗದೆ ಸ್ಥಿರವಾಗಿ ಉಳಿಯಿತು. ದೀಪದಕಡ್ಡಿ ಕಾರಖಾನೆ, ಸೀಸಪೆನ್ಸಿಲ್ ಕಾರಖಾನೆ, ಪೆನ್ಸಿಲ್ ಕಾರಖಾನೆ, ಮಂಗಳೂರ ಹಂಚಿನ ಕಾರಖಾನೆ ಇವುಗಳಲ್ಲೆಲ್ಲ ಹಣ ತೊಡ ಗಿಸಿ ಮುಣುಗಿಸಿಕೊಂಡೆ. ಮಂಗಳೂರ ಹಂಚಿನ ಕಾರಖಾನೆಯೊಂದನ್ನು ಮಾತ್ರ

ನಾಯಕರೆಂಬ ಪೆನಶನ್ ಮಾಮಲೇದಾರರು ತಕ್ಕೊಂಡು ಅದನ್ನು ಜೀವಂತ ವಾಗಿ ಇಟ್ಟರು. ಅದನ್ನು ಅಲ್ಲಿಯೇ ಅಂದರೆ ಖಾನಾಪುರದಲ್ಲಿಯೇ ಇನ್ನೂ ವರೆಗೂ ಅವರ ಮನೆತನದವರು ನಡಿಸುತ್ತಲಿದ್ದಾರೆ.

ಬಹಿಷ್ಕಾರದ ಪ್ರಭಾವವು ಎಲ್ಲ ಕಡೆಗೂ ಕಂಡುಬಂದಿತು. ವಿಲಾಯತಿಯ ವಸ್ತ್ರವು 'ಅಸ್ಪೃಶ್ಯಕೋಟಿ'ಯಲ್ಲಿ ಸೇರಿತು. ಪರದೇಶಿ ಸಕ್ಕರೆಗೆ ಬಹಿಷ್ಕಾರ ಬಿದ್ದಿತು. ಮೊನ್ನೆ ಮೊನ್ನಿನ ವರೆಗೆ ಅಂದರೆ, ಈ ದೇಶದಲ್ಲಿ ಸ್ವದೇಶಿ ಸಕ್ಕರೆ ಹುಟ್ಟುವ ವರೆಗೆ ಸಕ್ಕರೆಯನ್ನು ನಾನು ಸೇವಿಸಲಿಲ್ಲ; ಚಹಾ-ಕಾಫಿಯನ್ನು ಕುಡಿಯಲಿಲ್ಲ. ಆಗಿನ ಬಹಿಷ್ಕಾರ ಸ್ವರೂಪವು ಬಹಳ ವ್ಯಾಪಕವಾಗಿತ್ತು. ಚಿಮಣೀ ಎಣ್ಣೆಗೂ ಆಗ ಬಹಿಷ್ಕಾರ ಬಿದ್ದಿತ್ತು. ನಾವು ಮನೆಯಲ್ಲಿ ಹುಲಗಲ ಎಣ್ಣೆಯನ್ನು ಉಪಯೋಗಿಸುತ್ತಿದ್ದೆವು. ಹೆಣ್ಣುಮಕ್ಕಳು ಪರದೇಶಿ ಬಳೆಗಳನ್ನು ಒಡೆದು, ಕಾಜಿನ ಉರುಟು ಬಳೆಗಳನ್ನು ಹಾಕಿಕೊಳ್ಳುವ ಕೆಲಸವು ಭರದಿಂದ ನಡೆದಿತ್ತು. ಟ್ರೇನಿಂಗ್ ಕಾಲೇಜದಲ್ಲಿ ರೊದ್ದ ಶ್ರೀನಿವಾಸರಾಯರು ಗ್ಯಾಸಿನ ದೀಪಗಳನ್ನು ಮಾಯಮಾಡಿದರು. ಅಲ್ಲಿ ಒಳ್ಳೆಣ್ಣೆ, ಹುಲಗಲ ಎಣ್ಣೆಗಳ ಸಮೆಗಳು ಕಂಗೊಳಿಸಹತ್ತಿದವು.

ಮೊಹರಮ್ ಮತ್ತು ಹೋಳಿಯ ಹಬ್ಬಗಳಲ್ಲಿ ಮೇಳಗಳನ್ನು ಹೊರಡಿಸಲಿಕ್ಕೆ ಪ್ರಾರಂಭವಾಯಿತು. ದೀಪಾವಳಿಯಲ್ಲಿಯ ಹೆಣ್ಣುಮಕ್ಕಳ ಅಲೀ ಆಟಗಳನ್ನೂ, ಕೋಲಾಟಗಳನ್ನೂ ಸ್ವದೇಶೀ ಚಳವಳಿಗೆ ಉಪಯೋಗ ಮಾಡಿಕೊಂಡೆನು. ಹೂವಿಳ್ಯಗಳ ದ್ವಾರಾ ಹೆಂಗಸರಲ್ಲಿ ಸ್ವದೇಶಿಯ ಬಗ್ಗೆ ಪ್ರೀತಿಯನ್ನು ಹುಟ್ಟಿಸಲಿಕ್ಕೆ ಪ್ರಾರಂಭಿಸಿದೆನು. ಮದ್ಯಪಾನ ನಿಷೇಧ ಚಳವಳಿಯು ಕರ್ನಾಟಕಕ್ಕೆ ಅಷ್ಟೊಂದು ತೀಕ್ಷ್ಣವಾದ ಪ್ರಶ್ನೆಯಾಗಿಲ್ಲವೆಂದು ನನ್ನ ಸ್ವಂತದ ಅಭಿಪ್ರಾಯ. ಸೆರೆ ಕುಡಿಯುವವರೇನೋ ಎಲ್ಲ ಕಡೆಗೆ ಇದ್ದೇ ಇರುತ್ತಾರೆ. ಆದರೆ ಮಹಾರಾಷ್ಟ್ರದಲ್ಲಿಯ ರೈತರು ಸೆರೆ ಕುಡಿಯುವಂತೆ ಇಲ್ಲಿಯ ರೈತರು ಕುಡಿಯುವದಿಲ್ಲ. ಲಿಂಗಾಯತ ಧರ್ಮವು ಕರ್ನಾಟಕವನ್ನು ಈ ವಿಷಯದಲ್ಲಿ ಉದ್ಧಾರ ಮಾಡಿರುತ್ತದಾದ್ದರಿಂದ ಮಹಾರಾಷ್ಟ್ರದವರನ್ನು ನಾನು ಅಂಥವಾಗಿ ಅನುಕರಣ ಮಾಡಿ ಆ ಚಳವಳಿಯನ್ನು ಕೈಕೊಳ್ಳಲು ಒಪ್ಪಲಿಲ್ಲ. ಈ ವಿಷಯದಲ್ಲಿ ನನ್ನ ಮಿತ್ರರಿಗೂ ನನಗೂ ಮತಭೇದವಾಯಿತು. ಅವರಿಗೆ

ನಾನೇನು ಅಡ್ಡ ಬರಲಿಲ್ಲ. ಆದರೆ ಆ ಚಳವಳಿಯಲ್ಲಿ ನಾನು ಅಷ್ಟೇನೂ ಉತ್ಸಾಹ ದಿಂದ ಭಾಗ ವಹಿಸಲಿಲ್ಲ.

ನನಗೂ ದೇ. ಸಾವರಕರರಿಗೂ ಕಾಲೇಜ ದಿನಗಳಿಂದ ಸ್ನೇಹ. ಮುಂದೆ ಇಂಗ್ಲಂಡದಲ್ಲಿ ಅವರು ಇದ್ದಾಗ ನಮ್ಮ ಅವರ ಪತ್ರವ್ಯವಹಾರ ಮತ್ತು ಸಂಬಂಧವಿತ್ತು. ಇಲ್ಲಿಯ ಕಲೆಕ್ಟರರಿಗೂ ಆ ಸುದ್ದಿ ಇತ್ತು. ಅದರಲ್ಲಿ ಮುಚ್ಚಿ-ಕಚ್ಚಿದ್ದೇನೂ ಇರಲಿಲ್ಲ. ಹೀಗಿರುವಲ್ಲಿ ನಾಶಿಕದಲ್ಲಿ ೧೯೦೯ನೆಯ ಡಿಶಂಬರದಲ್ಲಿ ಜ್ಯಾಕ್ಸನ್ ಕಲೆಕ್ಟರರ ಕೊಲೆಯಾಯಿತು! ಆ ಸಂಬಂಧದಲ್ಲಿ ಇಂಗ್ಲಂಡದಲ್ಲಿದ್ದ ಸಾವರಕರರು ಬಂಧಿಸಲ್ಪಟ್ಟರು. ಅವರು ಕೂಡಲೆ ನನಗೆ ಗುಪ್ತ ರೀತಿಯಿಂದ ಆ ಸುದ್ದಿಯನ್ನು ತಿಳಿಸಿದರು. ಕೆಲವು ದಿವಸಗಳ ನಂತರ ಕೊಲ್ಹಾಪುರದಿಂದ ಸಿ. ಆಯ್. ಡಿ. ಸುಪರಿಂಟೆಂಡೆಂಟರು ಬಂದು, ಇಲ್ಲಿಯ ಡಿಸ್ಟ್ರಿಕ್ಟ್ ಮ್ಯಾಜಿಸ್ಟ್ರೇಟರಿಗೆ ನನ್ನ ಮೇಲೆ ಸರ್ಚ ವಾರಂಟ ಕೊಡಲಿಕ್ಕೆ ಕೇಳಿ ದರು. ಆ ಹೊತ್ತಿನಲ್ಲಿ ಬಳ್ಳಾರಿಯ ರಾಮರಾಯರೆಂಬ ಇಲ್ಲಿಯ ಪ್ರಸಿದ್ಧ ವಕೀಲರು ತಮ್ಮದೊಂದು ಖಟ್ಲೆಯ ಸಲುವಾಗಿ ಹೋಗಿ ಕಲೆಕ್ಟರರ ಕೋಣೆಯ ಹೊರಮಗ್ಗಲಿಗೆ ಕುಳಿತಿದ್ದರು. ಅವರು ಕೂಡಲೆ ಆ ಸುದ್ದಿ ಯನ್ನು ನನಗೆ ಹೇಳಿ ಕಳಿಸಿದರು. ನಾನೂ ನನ್ನ ವಕೀಲಿಯ ಪಾಲುಗಾರ ರಾದ ಮುದವೇಡಕರ ವೆಂಕಟರಾಯರೂ ಬಂಧನ ವಾರಂಟಿನ ಹಾದೀ ನೋಡು ತ್ತಲೇ ಕುಳಿತಿದ್ದೆವು. ಆದರೆ ಡಿಸ್ಟ್ರಿಕ್ಟ್ ಮ್ಯಾಜಿಸ್ಟ್ರೇಟರು ಆ ವಾರಂಟು ಕೊಡಲೊಪ್ಪಲಿಲ್ಲ. I dont want to disturb the peace of my district. ಎಂದು ಸಿ. ಆಯ್. ಡಿ. ಅಧಿಕಾರಿಗೆ ಹೇಳಿಬಿಟ್ಟರು. ಇತ್ತ ಕಡೆಗೆ ನಾನೊಬ್ಬನೇ ಸಾವರಕರರ ಮಿತ್ರನಾದ್ದರಿಂದ ಇಲ್ಲಿ ಆ ಚಳವಳಿ ಹಬ್ಬಿದ್ದಿಲ್ಲ ಸಾವರಕರರ "ಬಂಡಿ"ನ ಪುಸ್ತಕವೂ ನನಗೆ ಗುಪ್ತವಾಗಿ ಬಂದಿತ್ತು.

**ಸುರತ ಕಾಂಗ್ರೆಸ್ಸಿನ ಕಥೆ**:— ೧೯೦೭ನೆಯ ಇಸವಿಯ ಡಿಶಂಬರ ದಲ್ಲಿ ಸುರತ ಕಾಂಗ್ರೆಸ್ಸು ಮುರಿದದ್ದು ಸರ್ವಶ್ರುತವೇ ಅದೆ. ಆ ಕಾಂಗ್ರೆ ಸ್ಸಿಗೆ ನಾನು ೩೦–೩೫ ಮಂದಿ ಮಿತ್ರರನ್ನು ಕರೆದುಕೊಂಡು ಹೋಗಿದ್ದೆನು. ಪೋಲೀಸರು ಮಂಟಪದಲ್ಲಿ ಹೊಕ್ಕು ಅದನ್ನು ವಶಪಡಿಸಿಕೊಂಡಾಗ ನಾನು, ಕೌಜಲಗಿ ಶ್ರೀನಿವಾಸರಾಯರು, ಹೊಸಕೇರಿ ಅಣ್ಣಾಚಾರ್ಯರೂ ಕೂಡಿ ಹೊರಗೆ ಬರುತ್ತಿದ್ದಾಗ ಅವರಿಬ್ಬರನ್ನು ಹಿಡಿದರು. ನಾನು ತೆಳ್ಳಗಿದ್ದದರಿಂದ

ನನ್ನನ್ನು ಬಿಟ್ಟುಕೊಟ್ಟರು. ತೆಳ್ಳಗಿದ್ದುದರ ಲಾಭವಿದು! ನಾಲ್ಕಾರು ಗಂಟೆ ಲಾಕಪ್ಪಿನಲ್ಲಿಟ್ಟು ಅವರನ್ನು ಬಿಟ್ಟುಕೊಟ್ಟರು.

**ಸುಪ್ತಯುಗ:**— ೧೯೧೦ರಿಂದ ೧೯೧೫. ಕ್ರಾಂತಿಕಾರಕ ಚಳವಳಿಯ ಉಗಮವು ೧೯೦೮ರಲ್ಲಿಯೇ ಆಗಿತ್ತು. ಅದರ ಮೂಲಕ ಸರಕಾರಕ್ಕೆ ಕಾಯದೆ ಶೀರ ಚಳವಳಿಯ ಮೇಲೆ ತನ್ನ ನಖಪಂಜರವನ್ನು ಹಿರಿಯುವದಕ್ಕೆ ಆಸ್ಪದ ದೊರೆಯಿತು. ಮತ್ತು ೧೯೧೦ನೆಯ ಇಸವಿಯ ಸುಮಾರಕ್ಕೆ ದೇಶದೊಳಗಿನ ಸಾರ್ವಜನಿಕ ಚಳವಳಿಗಳೆಲ್ಲವೂ ತಣ್ಣಗಾದವು. ಕ್ರಾಂತಿಕಾರಕ ಚಳವಳಿಯು ಬೇಗೆಯು ಕರ್ನಾಟಕದ ವರೆಗೆ ವಿಶೇಷವಾಗಿ ಹಬ್ಬಲಿಲ್ಲ. ಕರ್ನಾಟಕ ಹೇಳಿ ಕೇಳಿ ಹಿಂದುಳಿದ ಪ್ರಾಂತವೇ ಅಲ್ಲವೇ? ಹಬ್ಬು ಹಬ್ಬುವಷ್ಟರಲ್ಲಿ ಆರಿ ಹೋಯಿತು. ಲಾರ್ಡ್ ಮಿಂಟೊ ಇವರು ಒಮ್ಮೆ ಗೋವಾ ಪ್ರಾಂತಕ್ಕೆ ವಿಜಾಪುರದ ಮೇಲಿಂದ ಹಾಯ್ದು ಹೋಗುವಾಗ ಅವರ ಕೊಲೆ ಮಾಡಬೇಕೆಂಬ ವಿಚಾರವು ಕೆಲ ತರುಣರ ಮನಸ್ಸಿನಲ್ಲಿ ಹೊಕ್ಕಿತ್ತೆಂಬುದನ್ನು ಮಧ್ವರಾವ ಕಬ್ಬೂರ ಇವರು ನನಗೆ ತಿಳಿಸಿದರು. ಆದರೆ ಅದು ಎಷ್ಟು ಅಪಕ್ವವಿತ್ತೆಂದರೆ ಈ ತರುಣರಿಗೆ ತಿಳಿಯುವ ಮೊದಲೇ ಲಾರ್ಡ್ ಮಿಂಟೋ ಇವರ ಗಾಡಿಯು ಹೊರಟು ಹೋಗಿತ್ತು!

**ರ್‍ಯಾಂಡ್ ಸಾಹೇಬರ ಕೊಲೆಯೂ ಬಲಕುಂದಿ ಹನುಮಂತರಾಯರೂ:**— ೧೮೯೭ನೆಯ ಇಸವಿಯಲ್ಲಿ ಪುಣೆಯಲ್ಲಿ ರ್‍ಯಾಂಡ್ ಸಾಹೇಬರ ಕೊಲೆ ಆಯಿತು. ಅದು ಆಗಿ ೧೦ ವರ್ಷಗಳು ಆಗಿ ಹೋಗಿದ್ದವು. ಆದರೂ ಅಧಿಕಾರಿಗಳು ಅದರ ಸಂಬಂಧವನ್ನು ಹೇಗಾದರೂ ಮಾಡಿ ಕೆಲವು ದೇಶಭಕ್ತರಿಗೆ ಹಚ್ಚಬೇಕೆಂದು ಮಾಡಿದ್ದಂತೆ ತೋರುತ್ತದೆ. ನಮ್ಮ ತಂದೆಯ ಸೋದರ ಅಳಿಯಂದಿರಾದ ಬಲಕುಂದಿ 'ಸಣ್ಣಹನುಮಂತ'ರಾಯರ ಹೆಂಡತಿ ಗದುಗಿನಲ್ಲಿರುತ್ತಿದ್ದರು. ಸಣ್ಣಹನುಮಂತರಾಯರು ಮೊಗಲಾಯಿಯ ಯಲ-ಬುರ್ಗಿಯಲ್ಲಿ ತಹಸೀಲದಾರರಿರುವಾಗ ರ್‍ಯಾಂಡ್ ಸಾಹೇಬರ ಕೊಲೆ ಮಾಡಿದ ಚಾಫೇಕರರು ಗುಪ್ತವೇಷದಲ್ಲಿ ಅವರ ಆಶ್ರಯದಲ್ಲಿದ್ದರು. ಅವರ ಹೆಂಡತಿಯ ಹತ್ತಿರ ದೇಶಭಕ್ತರಿಗೆ ಸಂಬಂಧ ಹಚ್ಚುವ ಕಾಗದಪತ್ರಗಳೇನಾದರೂ ಸಿಕ್ಕಬಹುದೆಂದು ಅಧಿಕಾರಿಗಳಿಗೆ ಆಸೆ. ಸಿ. ಆಯ್. ಡಿ. ಅಧಿಕಾರಿಗಳಾದ ಪಾಗೆ ಎಂಬವರು ಹಲಸಗಿಯಲ್ಲಿದ್ದ ಪಾಂಗರಿ ಸಮೀರಣಾಚಾರ್ಯರ ಕಡೆಗೆ ಹೋಗಿ

ಸಣ್ಣಹನುಮಂತರಾಯರ ಹೆಂಡತಿಯ ಹತ್ತಿರ ಕೆಲವು ಕಾಗದಪತ್ರಗಳಿವೆ, ಅವು ಒಂದು ಖಟ್ಲೆಯ ಸಲುವಾಗಿ ಬೇಕಾಗಿವೆ, ಅವನ್ನು ಕೊಡಿಸಿದರೆ ಉಪಕಾರವಾಗುವದೆಂದು ಅವರಿಗೆ ಕೇಳಿದರು. ಪಾಂಗರಿ ಸವಿೂರಣಾಚಾರ್ಯರು ನನ್ನ ತಂದೆಯವರನ್ನು ಕೇಳುತ್ತೇವೆಂದು ಹೇಳಿದರು. ಧಾರವಾಡದಲ್ಲಿ ನಮ್ಮ ಮನೆಗೆ ಬಂದು, ನಮ್ಮ ತಂದೆಯವರಿಗೆ ತಿಳಿಸಿದರು. ಪಾಗೆಯವರ ಮಾತಿನ ಮೇಲಿಂದ ನಮ್ಮ ತಂದೆಯವರಿಗೆ ಏನೋ ಸಂಶಯ ಬಂತು. ನಿಷ್ಕಾರಣವಾಗಿ ಸಣ್ಣಹನುಮಂತರಾಯರ ಹೆಂಡತಿಗೆ ತ್ರಾಸ ಆಗಬಹುದೆಂದು ನನ್ನನ್ನು ಗದುಗಿಗೆ ಕಳುಹಿಸಿಕೊಟ್ಟರು. ಇದ್ದಬಿದ್ದ ಕಾಗದಪತ್ರಗಳನ್ನೆಲ್ಲ ನಾಶಮಾಡಲಾಯಿತು. ಮತ್ತು ಕಾಗದಪತ್ರಗಳಿಲ್ಲವೆಂದು ಪಾಗೆಯವರಿಗೆ ತಿಳಿಸಲಾಯಿತು. ಮತ್ತು ನನ್ನ ತಂದೆಯವರು ಹನುಮಂತರಾಯರ ಹೆಂಡತಿಯನ್ನು ಕರೆದುಕೊಂಡು ಹೋಗಿ ಹೊಳೆಆಲೂರಲ್ಲಿ ತಮ್ಮ ಹತ್ತಿರ ಇಟ್ಟುಕೊಂಡರು.

**ಕರ್ನಾಟಕದ ಸ್ಥಿತಿ**:— ಧಾರವಾಡದಲ್ಲಿ ಆಗ ಏಳೆಂಟು ವೃತ್ತಪತ್ರಗಳು ಹೊರಡುತ್ತಿದ್ದವು. ೧೯೧೦ನೆಯ ಫೆಬ್ರುವರಿಯಲ್ಲಿ ಸರಕಾರದವರು ಮುದ್ರಣ ಬಿಲ್ಲನ್ನು ಮಾಡಿಕೊಂಡು ಅವಕ್ಕೆ ಬಾಯಿಚೆಂಡು ತುರುಕಿದರು. ಆಗ ಬರಿ ಸೆರೆಮನೆಗೆ ಕಳಿಸಿದರೆ ಬೇಕಾದವರು ಸೆರೆಮನೆಗೆ ಹೋಗಬಹುದೆಂದು ಸರಕಾರದವರು ಮನಗಂಡಿದ್ದರು! ಆದ ಕಾರಣ ಸರಕಾರದವರು ಹಾಗೆ ಮಾಡುವದನ್ನು ಬಿಟ್ಟು, ಇಡೀ ಪ್ರೆಸ್ಸನ್ನೇ ಜಪ್ತ ಮಾಡುವ ಹೊಸ ಉಪಾಯವನ್ನು ತೆಗೆದರು. ಅದರ ಮೂಲಕ ಅನೇಕ ಪತ್ರಿಕೆಗಳು ತಾವಾಗಿಯೆ ನಿಂತುಹೋದವು. ಮಹಾರಾಷ್ಟ್ರದಲ್ಲಿ ರಾಷ್ಟ್ರಮತ, ವಿಹಾರಿ, ಕಾಳ, ಗುಜರಾಥಿ, ಭಾಲಾ ಮುಂತಾದ ಪತ್ರಿಕೆಗಳು ಅಸ್ತವಾಗಿ ಹೋದಂತೆ, ಧಾರವಾಡದಲ್ಲಿಯೂ ಧಾರವಾಡವೃತ್ತ, (ಮರಾಠಿ), ಚಂದ್ರೋದಯ, ಹಿಂದುಸ್ಥಾನ ಸಮಾಚಾರ, ರಾಜಹಂಸ, ಕ್ಷೇಮಸಮಾಚಾರ, ಮುಂತಾದ ಪತ್ರಗಳು ನಿಂತವು. ಉಳಿದವು ಉಗ್ರಲೇಖ ಬರೆಯಲು ಹೆದರಹತ್ತಿದವು. ಲೋಕಬಂಧು ಮತ್ತು ವಿಜಾಪುರದ ಕರ್ನಾಟಕ ವೈಭವ ಇವು ರಾಜಕಾರಣದ ಸಂನ್ಯಾಸವನ್ನು ಸ್ವೀಕರಿಸಿದವು. ಕನ್ನಡ ಕೇಸರಿಯು ಅಜ್ಞಾತವಾಸ ಕೈಕೊಂಡಿತು. ನಾನು ಕರ್ನಾಟಕವೃತ್ತದಲ್ಲಿ ಉಗ್ರವಾದ ರಾಜಕೀಯ ಲೇಖಗಳನ್ನು ಬರೆಯಹತ್ತಿದ್ದು ಇದೇ ಸಂದರ್ಭದಲ್ಲಿ. ಅದರೊಳಗಿನ ಅನೇಕ ಲೇಖಗಳೂ, ಪುಸ್ತಕಗಳೂ ಜಪ್ತ ಮಾಡಲ್ಪಟ್ಟು ಸುಡಲ್ಪಟ್ಟವು.

**ಸ್ವರಾಜ್ಯ ಚಳವಳಿಯ ಯುಗ** ೧೯೧೫ರಿಂದ ೧೯೨೦ :— ತಾ. ೨೯,೨೭-೪—೧೯೧೪ರಲ್ಲಿ ಸಾತಾರೆಯೊಳಗೆ ಮುಂಬಯಿ ಇಲಾಖಾ ರಾಜಕೀಯ ಪರಿಷತ್ತು, ಬೆಳಗಾವಿಯ ಕಟ್ಟಾ ಕನ್ನಡಿಗರಾದ ನಾಮದಾರ ಬೆಳವಿಯವರ ಅಧ್ಯಕ್ಷತೆಯಲ್ಲಿ ಕೂಡಿತ್ತು. ೧೯೦೮ರಲ್ಲಿ ಟಿಳಕರು ಮಂಡಾಲೆಗೆ ಅಟ್ಟಲ್ಪಟ್ಟಾಗಿನಿಂದ ನಾವು ರಾಷ್ಟ್ರೀಯ ಪಕ್ಷದವರು ಸ್ವಸ್ಥವಾಗಿ ಮಲಗಿಕೊಂಡಿದ್ದೆವು. ನಾವು ಸಾತಾರೆಯ ಪರಿಷತ್ತಿಗೆ ಹೋದಾಗ ಪುನಃ ಚೇತರಿಸಿಕೊಂಡೆವು. ೧೯೧೫ರ ಜೂನ ತಿಂಗಳಲ್ಲಿ ಟಿಳಕರು ಬಿಡಲ್ಪಟ್ಟರು. ಆಗ ಹೊಸ ಹುರುಪು ಬಂದಿತು. ಕಾಂಗ್ರೆಸ್ಸು ಮಂದಪಕ್ಷದವರ ಕೈಯಲ್ಲಿ! ಬೇರೆ ಕಾಂಗ್ರೆಸ್ಸನ್ನೇ ಕಟ್ಟುವ ವಿಚಾರವನ್ನು ನಾವು ವೀರಪಕ್ಷದವರು ಮಾಡಹತ್ತಿದೆವು. ಆದರೆ ಟಿಳಕರು ಬೇರೆ ಕಾಂಗ್ರೆಸ್ಸು ಹುಟ್ಟುವದಕ್ಕೆ ವಿರುದ್ಧವಿದ್ದರು. ೧೯೧೪ ಆಗಸ್ಟದಲ್ಲಿ ಯುರೋಪದ ಮಹಾಯುದ್ಧವು ಪ್ರಾರಂಭವಾಯಿತು. ಆದ ಕಾರಣ ಜನರಲ್ಲಿ ಹೊಸ ಆಕಾಂಕ್ಷೆಗಳು ಉಕ್ಕೇರಿದವು. ೧೯೧೫ರ ಮೇ ತಿಂಗಳಲ್ಲಿ ಇಲಾಖಾ ರಾಜಕೀಯ ಪರಿಷತ್ತು ಪುಣೆಯಲ್ಲಿ ಕೂಡಿತ್ತು. ಆ ರಾಜಕೀಯ ಪರಿಷತ್ತಿಗೆ ಬ್ಯಾರಿಸ್ಟರ ಬ್ಯಾಪ್ಟಿಷ್ಟಾ ಇವರು ಅಧ್ಯಕ್ಷರು. ಅದೇ ವರ್ಷ ೧೯—೨—೧೯೧೫ನೆಯ ಇಸವಿ ದಿವಸ ನಾಮದಾರ ಗೋಖಲೆಯವರು ತೀರಿಕೊಂಡಿದ್ದರು. ೮—೫—೧೯೧೫ನೆಯ ದಿವಸ ಕೂಡಿದ ಪುಣೆಯ ಆ ಕಾನ್ಫರನ್ಸಿನಲ್ಲಿ ಟಿಳಕರು ನಾಮದಾರ ಗೋಖಲೆಯವರ ಬಗ್ಗೆ ದುಃಖ ಪ್ರದರ್ಶನದ ಸೂಚನೆಯನ್ನು ತಂದರು. ಭಾಷಾನ್ವಯ ಪ್ರಾಂತರಚನೆಯ ತತ್ವವನ್ನು ಸಾಧಿಸುವದಕ್ಕೋಸ್ಕರ ಕನ್ನಡದಲ್ಲಿಯೇ ನಾನು ಮಾತನಾಡುತ್ತೇನೆಂದು ಟಿಳಕರಿಗೆ ತಿಳಿಸಿ, ಅವರ ಆ ಸೂಚನೆಗೆ ಅನುಮೋದನ ಕೊಟ್ಟೆ. ಕಾಂಗ್ರೆಸ್ಸಿನಲ್ಲಿ ಕನ್ನಡ ಭಾಷಣ ಮಾಡುವ ತತ್ವವು ಪ್ರಥಮತಃ ಪುರಸ್ಕರಿಸಲ್ಪಟ್ಟದ್ದು ಆ ಸಭೆಯಲ್ಲಿ.

**ಹೋಮರೂಲ ಲೀಗಿನ ಸ್ಥಾಪನೆ ಮತ್ತು ಕರ್ನಾಟಕಕ್ಕೆ ಪ್ರತ್ಯೇಕ ಶಾಖೆ:**—೧೯೧೬ರಲ್ಲಿ ಪುಣೆಯಲ್ಲಿ ಹೋಮರೂಲ ಲೀಗಿನ ಸ್ಥಾಪನೆಯಾಯಿತು. ಆಗ ಕರ್ನಾಟಕತ್ವದ ದೃಷ್ಟಿಯಿಂದ ಒಂದು ಮಹತ್ವದ ಬದಲಾವಣೆ ಮಾಡಿದೆ. ನಮ್ಮ ರಾಜಕೀಯ ಮುಖಂಡರಲ್ಲಿ ಕರ್ನಾಟಕತ್ವವು ಇನ್ನೂ ಬೇರೂರಿದ್ದಿಲ್ಲ. ಕರ್ನಾಟಕಕ್ಕೆ ಪ್ರತ್ಯೇಕವಾದ ಹೋಮರೂಲ ಲೀಗಿನ ಶಾಖೆ

ಇರಬೇಕೆಂಬ ನನ್ನ ಸೂಚನೆಗೆ ನಮ್ಮವರದೇ ವಿರೋಧ! ಆದರೆ ನಾನು ಹಟಹಿಡಿದು ಅದನ್ನು ಮಾಡಿಸಿಕೊಂಡೆ. ಲೋ. ಟಿಳಕರವರಿಗೆ ನನ್ನ ಮತವು ಸಮ್ಮತವಾಯಿತು. ಈ ತರಹದ ಸ್ಥಿತಿಯನ್ನು ನನಗೆ ನನ್ನ ರಾಜಕಾರಣ ದಲ್ಲಿ ಕೊನೆಯವರೆಗೆ ಅನುಭವಿಸಬೇಕಾಯಿತು! ಕಾಂಗ್ರೆಸ್ಸು ಕೊಟ್ಟಾಗ ಕೊಡಲಿ ಎಂದು ಹೇಳುವವರು ನಮ್ಮಲ್ಲಿಯ ಕಾಂಗ್ರೆಸ್ಸಿಗರು. ಕಾಂಗ್ರೆಸ್ ಮುಖಂಡರಿಗೆ ನಮ್ಮಲ್ಲಿಯ ವಿಶಿಷ್ಟ ಪರಿಸ್ಥಿತಿಯು ಗೊತ್ತಿರುವದು ಶಕ್ಯವಿಲ್ಲ ವಾದ್ದರಿಂದ ನಾವು ಅವರಿಗೆ ತಿಳಿಸಿ ಹೇಳಿ, ಅವರಿಂದ ಕಾರ್ಯ ಮಾಡಿಸಿ ಕೊಳ್ಳುವದು ನಮ್ಮ ಕರ್ತವ್ಯವೆಂದು ನನ್ನ ವಾದ. ಕರ್ನಾಟಕ ರಾಜ್ಯ ನಿರ್ಮಾಣದ ವಿಷಯದಲ್ಲಂತೂ ನನ್ನ ಆಟವು ಸಾಗಲೇ ಇಲ್ಲ. ನಾನು ಸೋತು ಕೈಬಿಟ್ಟೆನು. ಇರಲಿ, ಕರ್ನಾಟಕ ಶಾಖೆಗೆ ದೇ. ಗಂಗಾಧರರಾಯರು ಅಧ್ಯ ಕ್ಷರು. ನಾನು ಕಾರ್ಯದರ್ಶಿ. ಆಗ ನಾನು ಟಿಳಕರ ಮೂರು ಉಪನ್ಯಾಸ ಗಳನ್ನು ಕನ್ನಡಿಸಿ, ಅವುಗಳ ಹತ್ತೆಂಟು ಸಾವಿರ ಪ್ರತಿಗಳನ್ನು ಹಂಚಿದೆ. ಹಾಗೆಯೇ ಸ್ವರಾಜ್ಯವೆಂದರೇನೆಂಬುದರ ಬಗ್ಗೆ ೧೨ ಚಿಕ್ಕ ಹೊತ್ತಿಗೆಗಳನ್ನು ಬರೆದು ತೆಗೆದೆ. ಅವುಗಳಲ್ಲಿ ಐದಾರು ಹೊತ್ತಿಗೆಗಳು ಮುದ್ರಿತವಾಗಿ ಅವು ಗಳ ಹತ್ತಾರು ಸಾವಿರ ಪ್ರತಿಗಳು ಹಂಚಲ್ಪಟ್ಟವು. ಅಷ್ಟರಲ್ಲಿ 'ರೌಲೆಟ್ ಆ್ಯಕ್ಟ್' ಬಂದ ಕಾರಣ ಪ್ರೆಸ್ಸಿನವರು ಮಿಕ್ಕವುಗಳನ್ನು ಮುದ್ರಿಸಲಿಕ್ಕೆ ಅಂಜಿದರು.

**ಕರ್ನಾಟಕಕ್ಕೆ ಪ್ರತ್ಯೇಕ ರಾಜಕೀಯ ಪರಿಷತ್ತು** :— ಕರ್ನಾ ಟಕತ್ವದ ಬಗ್ಗೆ ನನ್ನ ಮುಂದಿನ ಹೆಜ್ಜೆಯೆಂದರೆ, ಪ್ರತ್ಯೇಕ ರಾಜಕೀಯ ಪರಿ ಷತ್ತನ್ನು ಹೂಡುವದು. ೧೯೧೭ನೆಯ ಇಸವಿಯಲ್ಲಿ ನಾಸಿಕದಲ್ಲಿ ಮುಂಬಯಿ ಪ್ರಾಂತದ ರಾಜಕೀಯ ಪರಿಷತ್ತು ಮತ್ತು ಹೋಮರೂಲಿನ ಸಭೆ ಇವು ಕೂಡಿ ದ್ದವು. ಅರ್ಥಾತ್ ಅವಕ್ಕೂ ನಾನು ಹೋಗಿದ್ದೆ. ಅಲ್ಲಿ ಕೂಡಿದ ನನ್ನ ಕರ್ನಾಟಕ ಬಂಧುಗಳ ಮುಂದೆ, ಕರ್ನಾಟಕಕ್ಕೆ ಪ್ರತ್ಯೇಕ ರಾಜಕೀಯ ಪರಿಷತ್ತಿನ ಆವಶ್ಯ ಕತೆ ಇರುವದೆಂಬ ನನ್ನ ಹೊಸ ವಿಚಾರವನ್ನು ಮಂಡಿಸಿದೆ. ಅದಕ್ಕೂ ನಮ್ಮ ವರದೇ ವಿರೋಧ! ರಾಜಕೀಯ ಪರಿಷತ್ತುಗಳಲ್ಲಿ ಮುಂಚೆ ಇಂಗ್ಲಿಷ ಭಾಷೆ ಯಿಂದಲೇ ಸರ್ವ ವ್ಯವಹಾರವು ನಡೆಯುತ್ತಿತ್ತು. ಅಲ್ಲಿಯವರೆಗೆ ಯಾರಿಗೂ ತೊಂದರೆಯಾಗುತ್ತಿರಲಿಲ್ಲ. ಮುಂದೆ ದೇಶಭಾಷೆಗೆ ಅನುವು ದೊರೆತಾಗ,

ಗುಜರಾಥೀ ಜನರು ಗುಜರಾಥಿಯಲ್ಲಿಯೂ, ಮರಾಠೀ ಜನರು ಮರಾಠಿಯಲ್ಲಿಯೂ ಭಾಷಣ ಮಾಡಹತ್ತಿದರು. ಪುಣೆಯ ಪರಿಷತ್ತಿನಲ್ಲಿ ನಾನು ಕನ್ನಡದ ಹಕ್ಕನ್ನು ಸ್ಥಾಪಿಸಿದ ಬಗ್ಗೆ ಹೇಳಿಯೇ ಇರುವೆ. ಮುಂದೆ ಆ ವಿಷಯವಾಗಿ ಹೆಚ್ಚಿಗೆ ವಿಚಾರ ಮಾಡಿದಾಗ ನನಗೆ ತೋರಿದ್ದೇನೆಂದರೆ, ಇನ್ನು ಮುಂದೆ ಆಯಾ ಭಾಷಾಮಂಡಲಗಳ ಬಗ್ಗೆ, ಪ್ರತ್ಯೇಕ ರಾಜಕೀಯ ಪರಿಷತ್ತುಗಳ ಏರ್ಪಾಡಾಗುವದು ಅನಿವಾರ್ಯವೂ, ಆವಶ್ಯಕವೂ ಎಂದೆನಿಸಿತು. ನನ್ನ ಈ ಕಲ್ಪನೆಯು ಕಲ್ಪನಾಸಾಮ್ರಾಜ್ಯದಲ್ಲಿ ಇರುವಾಗಲೆ, ಮುಂದೆ ಸ್ವಲ್ಪ ದಿವಸಗಳಲ್ಲಿ ಮ. ಗಾಂಧಿಯವರು ಗುಜರಾಥದಲ್ಲಿ ತಮ್ಮ ಗುಜರಾಥದ ಪ್ರತ್ಯೇಕ ರಾಜಕೀಯ ಪರಿಷತ್ತನ್ನು ಕೂಡಿಸಿಯೇ ಬಿಟ್ಟರು. ಆಗ ನನಗೆ ಆನೆಯ ಬಲ ದೊರೆತಂತಾಯಿತು. ಅಥಣಿಯಲ್ಲಿ ಕೂಡಿದ ಜಿಲ್ಲಾ ಪರಿಷತ್ತಿನಲ್ಲಿ ಪ್ರತ್ಯೇಕ ರಾಜಕೀಯ ಪರಿಷತ್ತಿನ ಸೂಚನೆ ತಂದೆ. ಅದನ್ನು ಅಂತೂ ಇಂತೂ ಮಂಜೂರ ಮಾಡಿಸಿಕೊಂಡೆ. ಚಿಕ್ಕೋಡಿಯಲ್ಲಿ ಕೂಡಿದ ಪರಿಷತ್ತಿನಲ್ಲಿಯೂ ಮಂಜೂರ ಮಾಡಿಸಿಕೊಂಡೆ. ಆದರೆ ಅದನ್ನು ಕೃತಿಯಲ್ಲಿ ತರಲಿಕ್ಕೆ ಒಂದೆರಡು ವರ್ಷ ಹಿಡಿದವು.

**ಲೋ. ಟಿಳಕರ ಸಂಬಂಧದ ಸ್ಮೃತಿ**:— ೨೩—೬—೧೯೧೬ಕ್ಕೆ ಟಿಳಕರಿಗೆ ೬೦ ವರ್ಷ ತುಂಬಿದವು. ಆಗ ಅದಕ್ಕಾಗಿ ಫಂಡು ಕೂಡಿಸಿಕೊಟ್ಟೆ. ಮತ್ತು ಮುಂದೆ ಅವರನ್ನು ಇತ್ತ ಕಡೆಯ ಪ್ರವಾಸಕ್ಕೆ ಕರೆಯಿಸಿಕೊಂಡೆವು. ಅವರು ೧೦ ವರ್ಷಗಳಲ್ಲಿ ಕರ್ನಾಟಕಕ್ಕೆ ಬಂದಿದ್ದೇ ಇಲ್ಲ. ಇಲ್ಲಿ ಅವರನ್ನು ಗದಗ, ಧಾರವಾಡ, ಹುಬ್ಬಳ್ಳಿಗಳಿಗೆ ಕರೆದುಕೊಂಡು ಹೋಗಿಬಂದೆ. ಗದುಗಿನಲ್ಲಿ ಅವರ ಭಾಷಣದ ಬಗ್ಗೆ ಬಂದೀ ಹುಕುಮು ಬಂದದ್ದೂ, ಅದನ್ನು ಅವರು ಲೆಕ್ಕಿಸದೆ ಭಾಷಣ ಮಾಡಿದ್ದೂ ಇವೇ ಮುಂತಾದ ಸಂಗತಿಗಳ ಬಗ್ಗೆ ನಾನು ಪುಸ್ತಕಗಳಲ್ಲಿಯೂ, ಪತ್ರಿಕೆಗಳಲ್ಲಿಯೂ ಬರೆದೇ ಇರುವೆ. ಕರ್ನಾಟಕತ್ವಕ್ಕೆ ಅವು ಪ್ರತ್ಯಕ್ಷವಾಗಿ ಸಂಬಂಧಿಸದೆ ಇರುವದರಿಂದ ಅವನ್ನು ಬಿಟ್ಟು ಬಿಟ್ಟಿರುವೆ.

**ಹೋಮರೂಲ ಲೀಗಿನ ದವಾಖಾನೆ**:— ೧೯೧೮ನೆಯ ಇಸವಿಯಲ್ಲಿ ಈ ದೇಶದಲ್ಲಿ ' ಇನ್‌ಫ್ಲೂಎಂಝಾ ' ಬೇನೆಯು ಮೊದಲಿಗೆ ಪ್ರಾದುರ್ಭವಿಸಿ, ಲಕ್ಷಾವಧಿ ಜನರನ್ನು ಆಹುತಿಯಾಗಿ ತೆಗೆದುಕೊಂಡಿತು. ಆಗ ಈ ಸಂಸ್ಥೆಯ

ವತಿಯಿಂದ ಒಂದು ಪುಕ್ಕಟೆ ದವಾಖಾನೆಯನ್ನು ತೆಗೆದೆ. ಹಗಲೂ ರಾತ್ರಿ ದುಡಿದು ರೋಗಿಗಳ ಮನೆಮನೆಗೆ ಹೋಗಿ, ಅಂಥ ಗಂಡಾಂತರ ಸ್ಥಿತಿಯಲ್ಲಿ ಔಷಧ ಮತ್ತು ಗಂಜಿ ಹಾಕಿ ಬರುತ್ತಿದ್ದೆ. ಒಂದೊಂದು ಮನೆಯಲ್ಲಿ ೮-೧೦ ಹಾಸಿಗೆ ಗಳು ಇರುತ್ತಿದ್ದವು. ಗಂಜೀ ಹಾಕಲಿಕ್ಕೂ ಒಬ್ಬರೂ ದಿಕ್ಕಿದ್ದಿಲ್ಲ.

**ಅಸಹಕಾರ ಯುಗ ೧೯೨೦-೧೯೨೫ :—** ೧೯೨೦ನೆಯ ಅಗಸ್ಟದಲ್ಲಿ ಕಲಕತ್ತೆಯಲ್ಲಿ ಮ. ಗಾಂಧಿಯವರು ಅಸಹಕಾರದ ಘೋಷಣೆ ಮಾಡಿದೊಡನೆ ನಾನು ಪುನಃ ವಕೀಲಿಗೆ ಶರಣು ಹೊಡೆದೆ. ಅಸಹಕಾರವು ನನ್ನ ಪ್ರೀತಿಯ ತತ್ವವು. ಅರವಿಂದ ಘೋಷರು No control, No co-operation ಎಂದು ಅಂದರೆ, **ಸ್ವಾತಂತ್ರ್ಯವಿಲ್ಲದಲ್ಲಿ ಸಹಕಾರವಿಲ್ಲ** ಎಂಬುದಾಗಿ ಸಾರಿದ್ದರು. ಅದರ ಮೂಲಕವೇ ಹಿಂದಕ್ಕೆ ನಾನು ಕಾಯ್ದೆ ಕೌನ್ಸಿಲಿಗೆ ಕರ್ನಾಟಕದ ಪ್ರತಿ ನಿಧಿಯಾಗಿ ನಿಲ್ಲಬೇಕೆಂದು ಪುಣೆಯಿಂದ ಹೋಮರೂಲ ಲೀಗಿನವರು ಒತ್ತಾ ಯದ ತಂತೀ ಕಳಿಸಿದಾಗ ನನಗೆ ಅದು ಬೇಡವೆಂದು ತಟ್ಟನೇ ಮಾರುತ್ತರದ ತಂತೀ ಕಳಿಸಿಬಿಟ್ಟೆ. ಅಸಹಕಾರ ಚಳವಳಿಯಲ್ಲಿ ಎಂದಿನಂತೆ ನನ್ನ ಸುತ್ತಲೂ ತರುಣರ ತಂಡವಿತ್ತು. ಅರವಿಂದರ ಗ್ರಂಥಗಳನ್ನೂ ಲೇಖಗಳನ್ನೂ ಅವರಿಗೆ ಓದಿ ಹೇಳುತ್ತಿದ್ದೆ. ಇದೇ 'ಗೆಳೆಯರ ಗುಂಪು' ಎಂಬುದು.

**ಮ. ಗಾಂಧಿಯವರಿಗೂ ನನಗೂ ತತ್ವಭೇದ :—** ಮ. ಗಾಂಧಿ ಯವರು ಟಿಳಕರಿಗಿಂತ ಹೆಚ್ಚಿನ ತಪಸ್ವಿಗಳು. ಅಸಹಕಾರದ ಕಲ್ಪನೆ ಅತ್ಯು ತ್ಕೃಷ್ಟ ಕಲ್ಪನೆ. ಅದು ನನ್ನ ಮನವನ್ನೆಳೆಯಿತು. ಆದರೆ ಅದರ ಸಂಗಡ ತಳಕು ಹಾಕಲ್ಪಟ್ಟ ಮಿಕ್ಕ ಕೆಲವು ಕಲ್ಪನೆಗಳಲ್ಲಿ ನನಗೆ ತಿಲಪ್ರಾಯವೂ ವಿಶ್ವಾ ಸವು ಇರಲಿಲ್ಲ. ಇಷ್ಟೇ ಅಲ್ಲ, ಅವುಗಳಿಂದ ಕೊನೆಗೆ ದೇಶಕ್ಕೆ ಹಾನಿಯೇ ಆಗುತ್ತದೆಂದು ನನ್ನ ಪ್ರಾಮಾಣಿಕವಾದ ಭಾವನೆಯಿದೆ. ಅಹಿಂಸೆಯು ಹಿಂಸೆ ಗಿಂತ ಶ್ರೇಷ್ಠವಾದ ತತ್ವವೆಂಬುದು ಎಲ್ಲರೂ ಒಪ್ಪತಕ್ಕ ಮಾತೇ. ಅದೇ ಮೇರೆಗೆ ನಿಃಶಸ್ತ್ರವೂ ನಿರ್ವೀರ್ಯವೂ ಆದ ಹಿಂದುಸ್ಥಾನಕ್ಕೆ ಆಗಿನ ಕಾಲದಲ್ಲಿ ಅಹಿಂಸಾ ತತ್ವವನ್ನು ಹಚ್ಚುವವರೇ ಬೇಕಾಗಿದ್ದರೆಂಬುದು ನಿರ್ವಿವಾದ. ಆದರೆ ಆ ತತ್ವವೊಂದನ್ನೇ ತಲೆಯ ಮೇಲೆ ಎತ್ತಿಕೊಂಡು ಕುಣಿಯುವದು ಸನಾತನ ಧರ್ಮಕ್ಕೆ ವಿರುದ್ಧವಾದುದೆಂದೇ ನನ್ನ ಮತ. ಸ್ವಭಾವತಃ ನಾನು ಕ್ಷತ್ರಿಯ ನಲ್ಲ. ಅಂದ ಮಾತ್ರಕ್ಕೆ ಕ್ಷಾತ್ರತೇಜವು ನಮ್ಮ ದೇಶದಲ್ಲಿ ಮಿಂಚಲೇಬಾರ

ದೆಂಬ ಅಭಿಪ್ರಾಯದವನು ನಾನಲ್ಲ. ಅರಾಜಕ ಚಳವಳಿಯ ತರುಣರು ತಪ್ಪುದಾರಿ ಹಿಡಿದವರೆಂದು ಹೇಳುವದು ಬೇರೆ, ಅವರು ಪುಕ್ಕರೂ ಹೇಡಿಗಳೂ ಮುಂತಾಗಿ ಎಂದೆನ್ನುವದೆಂದರೆ ಸತ್ಯದ ವಿಪರ್ಯಾಸ! ಅಹಿಂಸೆಯು ಒಂದು ವಿಶಿಷ್ಟ ಮನೋವೃತ್ತಿಯುಳ್ಳ ವಿಶಿಷ್ಟ ವರ್ಗದ ಪರಮ ಧರ್ಮವಾಗಬಹುದೇ--ಪರಮಧರ್ಮವಾಗಬೇಕೇ ವಿನಃ ಅದು ಇಡೀ ರಾಷ್ಟ್ರದ ಮನೋಭಾವನೆಯಾಗಲಾರದು, ಆಗಬಾರದು ಎಂದು ನನ್ನ ಮತ.

ಅದೇ ಮೇರೆಗೆ, ಕಾಂಗ್ರೆಸ್ಸು ಮುಖ್ಯತಃ ರಾಜಕಾರಣ ಸಂಸ್ಥೆಯಾಗಿದ್ದು, ಆದರಲ್ಲಿ ಸಮಾಜ ಸುಧಾರಣೆಯೇ ಮುಂತಾದ ಮಿಕ್ಕ ವಿಷಯುಗಳನ್ನು ಹೊಗಿಸುವದು---ಅದನ್ನೂ ಅಪ್ರತ್ಯಕ್ಷವಾಗಿ ಹೊಗಿಸುವದು ಸರಿಯಲ್ಲ ಎಂದು ನನಗೆ ತೋರುತ್ತದೆ. ಆದರಿಂದ ಸಮಾಜ ಸುಧಾರಣೆಗೂ ಹಾನಿ, ರಾಜಕಾರಣಕ್ಕೂ ಹಾನಿ. ಹಾಗೆಯೇ ಸೆರೆಮನೆಗಾಗಿಯೇ ಸೆರೆಮನೆಗೆ ಹೋಗುವದೂ ಒಂದು ಬಾಹ್ಯಾಡಂಬರವಾಗಬಾರದು. ಈ ಪ್ರಕಾರವಾಗಿ ಮ. ಗಾಂಧಿಯವರಿಗೂ ನನಗೂ ಅನೇಕ ವಿಷಯಗಳಲ್ಲಿ ಮತಭೇದವುಂಟಾದವು. ಅಸಹಕಾರ ಮಾಡಿದ ಸ್ವಲ್ಪ ದಿನಗಳಲ್ಲಿ ತಮಣಾಚಾರ್ಯ ಪುರೋಹಿತ, ಎಲ್ಎಲ್. ಬಿ. ಎಂಬವರು ಅಸಹಕಾರ ಮಾಡಿದರು. ಅವರೂ ಧಾರ್ಮಿಕ ಮನೋವೃತ್ತಿಯವರು; ಆವರೂ ನಾನೂ ವಿಚಾರವಿನಿಮಯ ಮಾಡಿದೆವು. ನಾನು ಮಹಾತ್ಮರಿಗೆ ರಜಿಸ್ಟರ ಪತ್ರ ಮುಖಾಂತರವಾಗಿ ನನ್ನ ವಿಚಾರಗಳನ್ನು ತಿಳಿಸಿದೆ. ಮತ್ತು ನಾನು ಇಲ್ಲಿಯ ಕಾಂಗ್ರೆಸ್ ಕಮಿಟಿಯ ಉಪಾಧ್ಯಕ್ಷನಾಗಿದ್ದ ಕಾರಣ ಅವರ ಕಾರ್ಯಕ್ರಮದಲ್ಲಿ ಪೂರ್ಣವಾದ ಶ್ರದ್ಧೆಯಿಲ್ಲದ ನನ್ನಂಥವನು ಅಧಿಕಾರ ಸ್ಥಳದಲ್ಲಿದ್ದು ಅವರ ಕಾರ್ಯಕ್ರಮುವನ್ನು ತೋರಗಾಣಿಕೆಯಲ್ಲಿ ನಡೆಯಿಸಿ ಅವರನ್ನು ತಪ್ಪು ತಿಳುವಳಿಕೆಯಲ್ಲಿಡುವದು ಉಚಿತವಲ್ಲವೆಂದು ತಿಳಿದು ನಾನು ಮುಂದೆ ಅಧಿಕಾರ ಪದಕ್ಕೆ ರಾಜೀನಾಮೆ ಕೊಟ್ಟೆ. ತರುಣ ದಿವಾಕರ ರಂಗರಾಯರು ನನ್ನ ಉಪಾಧ್ಯಕ್ಷ ಸ್ಥಳವನ್ನು ಸ್ವೀಕರಿಸುವ ವರೆಗೆ ಮಾತ್ರ ನಾನು ಅಲ್ಲಿ ಇದ್ದೆ.

**ಧಾರವಾಡದಲ್ಲಿ ಗುಂಡಿನ ಸುರಿಮಳೆಯು** :— ೧೯೨೧ರಲ್ಲಿ ದೇಶದಲ್ಲೆಲ್ಲ ಅಸಹಕಾರದ ಕೋಲಾಹಲವೇ ಕೋಲಾಹಲ! ಕಾಂಗ್ರೆಸ್ಸಿನ ಆಧ್ಯಕ್ಷ,

ರಾವ ಜೋಶಿಯವರು ಮುಪ್ಪಿನವರಾದ್ದರಿಂದ ಕಾರ್ಯದ ಯಾವತ್ತೂ ಭಾರವು ಸಹಜವಾಗಿ ನನ್ನ ಮೇಲೆಯೆ ಬೀಳುತ್ತಿತ್ತು. ದೇಶದಲ್ಲೆಲ್ಲ ಧ್ವಜವಂದನೆ ಮುಂತಾದವುಗಳಿಗೋಸ್ಕರ ನಾನೇ ಊರೂರಿಗೆ ಹೋಗುತ್ತಿದ್ದೆ. ಧಾರವಾಡ ದಲ್ಲಿ ಹಿಂದು-ಮುಸಲ್ಮಾನ ತರುಣರು ಕೂಡಿ ಪಿಕೆಟಿಂಗ ಚಳವಳಿ ಜೋರಿ ನಿಂದ ನಡೆಸಿದ್ದರು. ಆ ಚಳವಳಿಯಲ್ಲಿ ಒಂದು ದಿವಸ ಮುಸಲ್ಮಾನ ತರುಣ ನಿಗೆ ೬ ತಿಂಗಳ ಶಿಕ್ಷೆಯಾಯಿತು ಆ ದಿವಸ ಅಂದರೆ ೩೦—೬—೧೯೨೧ ನೆಯ ದಿವಸ ಸಾಯಂಕಾಲಕ್ಕೆ ಪ್ರೋಲೀಸ ಠಾಣೆಯ ಹತ್ತಿರ ವಿಲಕ್ಷಣ ಜನ ಸಂದಣಿ ಸೆರೆದಿತ್ತು. ಶಿವಲಿಂಗಪ್ಪನೆಂಬ ಫೌಜದಾರನು ಜನರ ಮೇಲೆ ಗುಂಡು ಗಳನ್ನು ಹಾರಿಸಿ ೩ ಹೆಣ ಕೆಡಹಿದನು. ಅನೇಕರಿಗೆ ಗಾಯಗಳಾದವು. ಹಿಂದಕ್ಕೆ ನನ್ನ ವಕೀಲಿಯಲ್ಲಿ ಪಾಲುಗಾರರಾಗಿದ್ದ ಮುದವೇಡ ವೆಂಕಟ ರಾಯರು ಆ ಕಾಲದಲ್ಲಿ ಧೈರ್ಯದಿಂದ ಗುಂಡಿನ ಸುರಿಮಳೆ ನಡೆದಿದ್ದಾಗಲೆ ಜನಸಂದಣಿಯಲ್ಲಿ ಒಳನುಗ್ಗಿ ಹೆಣಗಳನ್ನು ಎತ್ತಿಕೊಂಡು ಸರಿಸಿ, ಶಿವ ಲಿಂಗಪ್ಪನಿಗೆ ಶಾಂತವಾಗಲಿಕ್ಕೆ ಹೇಳಹೋದರು. ಆತನು ಅವರ ಮೇಲೆಯೇ ಖಟ್ಲೆ ಹಾಕಿದನು! ಅವರಿಗೆ ಆ ಪ್ರಕರಣದಲ್ಲಿ ೩ ವರ್ಷ ಕಠಿಣ ಶಿಕ್ಷೆ ಯಾಯಿತು. ಮುಂದೆ ತಿರುಗಿ ಬಂದ ಮೇಲೆ ಸಹ ೬-೭ ವರ್ಷ ಸನದು ಸಿಗಲಿಲ್ಲ. ಇರಲಿ, ಗುಂಡಿನ ಸುರಿಮಳೆ ಆದ ದಿವಸ, ಏಕಾದಶಿ ಉಪವಾಸ ವಿದ್ದದರಿಂದ ನಾನು, ಊರಿಂದ ದೂರ ಸಾಧನಕೇರಿಯ ನನ್ನ ಮನೆಯಲ್ಲಿ ಇದ್ದೆ. ಮರುದಿವಸ ಆದ ಹೆಣಗಳ ಮೆರವಣಿಗೆಯ ಕಾಲದಲ್ಲಿ ಜನರು ಒಗೆದ ಸಾವಿರಾರು ರೂಪಾಯಿಗಳನ್ನು ಉಪಾಧ್ಯಕ್ಷನಾದ ನಾನು ನಮ್ಮ ಅಂಗಡಿಯಲ್ಲಿ ಸುರಕ್ಷಿತವಾಗಿ ಇಟ್ಟು ಮುಂದೆ ಕಾಂಗ್ರೆಸ್ಸಿಗೆ ಕೊಟ್ಟೆನು.

**ಅನೇಕ ಪತ್ರಗಳ ಸಂಪಾದಕತ್ವ:—** ಗುಂಡಿನ ಸುರಿಮಳೆ ಆದ ಕೂಡಲೆ ಸರಕಾರದವರು ಮಾಡಿದ ಮೊದಲನೆಯ ಕೆಲಸವೆಂದರೆ ಪತ್ರಿಕೆಗಳ ಸಂಪಾದಕರನ್ನೆಲ್ಲ ಸೆರೆಹಿಡಿದು, ಇಲ್ಲಿಂದ ನಿಜಸುದ್ದಿ ಹೊರಗೆ ಹೋಗದಂತೆ ದಿಗ್ಬಂಧನ ಮಾಡಿದ್ದು. ಅದಕ್ಕೆ ಪ್ರತ್ಯುತ್ತರವಾಗಿ ಅವೆಲ್ಲ ಪತ್ರಿಕೆಗಳನ್ನು ನಡೆಸಿಯೇ ತೀರುವದು ನಮ್ಮ ಹಟ! ಆ ಪ್ರಕಾರ ರಾಜಹಂಸ, ವಿಜಯ, ಕರ್ಮವೀರ, ಕರ್ನಾಟಕವೃತ್ತ ಮುಂತಾದ ಪತ್ರಿಕೆಗಳನ್ನೆಲ್ಲ ಕೆಲವು ತಿಂಗಳು ಗಳ ವರೆಗೆ ನಾನೊಬ್ಬನೇ ನಡೆಯಿಸಿದೆ.

**ಕರ್ಮವೀರ ಪತ್ರಿಕೆಯ ಸಂಪಾದಕತ್ವ :—** ಅಸಹಕಾರ ಚಳವಳಿಯ ಕಾಲಕ್ಕೆ ರಾಜಕಾರಣದಲ್ಲಿ ಧುಮುಕಿದ ಮುಖ್ಯ ವ್ಯಕ್ತಿ ಎಂದರೆ "ಕರ್ಮವೀರ"ರೆಂಬ ನಿಜವಾಗಿಯೇ ಅನ್ವರ್ಥಕನಾಮ ಪಡೆದಿರುವ ದಿವಾಕರ ರಂಗರಾಯರು. ರಾಜಕಾರಣದಲ್ಲಿ ಅದೇ ಆಗ ಅವರ ಪ್ರಥಮ ಪ್ರವೇಶ. ಕರ್ಮವೀರದಲ್ಲಿ ಮೊದಲಿನಿಂದಲೂ ನಾನು ಲೇಖ ಬರೆಯುತ್ತಿದ್ದೆ. ಗುಂಡಿನ ಸುರಿಮಳೆ ಖಟ್ಲೆಯಲ್ಲಿ ೮—೧೦—೧೯೨೧ನೆಯ ದಿವಸ ಅನೇಕರಿಗೆ ಶಿಕ್ಷೆಯಾದಂತೆ ಇವರಿಗೆ ಶಿಕ್ಷೆ ಆಗಲಿಲ್ಲ. ದಿವಾಕರರು ಬಿಡಲ್ಪಟ್ಟರು. ಮಿಕ್ಕವರಿಗೆ ಶಿಕ್ಷೆ ಆದ ದಿವಸ 'ಭೂರಕ್ಕಸಾಯ ಸ್ವಾಹಾ' (= Beurocracy) ಎಂಬ ಲೇಖ ಬರೆದೆ. ಅದಕ್ಕಾಗಿ ಕರ್ಮವೀರ ಸಂಪಾದಕರಾದ ಅವರೂ ಮುದ್ರಣಕಾರರಾದ ಹುಕ್ಕೇರಿ ರಾಮರಾಯರೂ ಹಿಡಿಯಲ್ಪಟ್ಟರು. ನಿಜವಾಗಿ ಲೇಖ ಬರೆದವನು ನಾನು ಎಂಬುದು ಊರಿಗೇ ಗೊತ್ತಿತ್ತು. ಆದರೆ ನನ್ನನ್ನು ಹಿಡಿಯುವಂತಿರಲಿಲ್ಲ. ದಿವಾಕರರು ಅದು ತಮ್ಮ ಲೇಖವಲ್ಲೆಂದು ಹೇಳಿಬಿಟ್ಟರು. ಹೀಗಾಗಿ ಆ ಖಟ್ಲೆಯಲ್ಲಿ ಶಿಕ್ಷೆಯಾಗದಿದ್ದರೂ ಪುನಃ ಅದೇ ದಿವಸ ಮತ್ತೊಂದು ನೆವದಿಂದ ಹಿಡಿದು, ಅವರಿಗೆ ಶಿಕ್ಷೆ ಕೊಟ್ಟರು. ಆಗ ಕರ್ಮವೀರ ಪತ್ರಿಕೆಯ ಸಂಪಾದಕನೂ, ಪ್ರಕಾಶಕನೂ, ಮುದ್ರಕನೂ ಮೂರೂ ನಾನೇ ಆದೆ. ನಾನೂ ಜೋಶಿ ಶಂಕರರಾಯರೂ ಪುನಃ ಮೊದಲಿಗಿಂತ ಉಗ್ರವಾದ ಲೇಖಗಳನ್ನು ಬರೆದು ಹೆಸರನ್ನು ಕಾಯ್ದುಕೊಂಡೆವು. ಧೃತ—ರಾಷ್ಟ್ರರೆಲ್ಲರೂ ಕುರುಡರೇ—ಎಂಬ ಮುಂತಾದ ಲೇಖಗಳನ್ನು ನಾನು ಬರೆದದ್ದು ಆ ಕಾಲಕ್ಕೆ. ರಂಗರಾಯರು ಮರಳಿ ಬರುವ ವರೆಗೆ ಅವರ ಪತ್ರಿಕೆ ನಡೆಯಿಸಿ, ಬಂದ ಬಳಿಕ ಅವರಿಗೆ ಒಪ್ಪಿಸಿ ನಾನು ಮುಕ್ತನಾದೆ.

**ಕರ್ನಾಟಕದ ಧ್ವಜ ;—** ಕಾಂಗ್ರೆಸ್ ಕಮಿಟಿಯವರು ಕರ್ನಾಟಕದ ವಿಶಿಷ್ಟ ಧ್ವಜ ಯಾವದಿರಬೇಕೆಂಬದನ್ನು ಗೊತ್ತುಮಾಡುವದರ ಸಲುವಾಗಿ ನನ್ನನ್ನೂ ಮತ್ತಿಬ್ಬರನ್ನೂ ನೇಮಿಸಿದ್ದರು. ಗಜ-ವೃಷಭಗಳ ಚಿಹ್ನವನ್ನು ಮಾಡಿಕೊಟ್ಟೆ. ಆ ಬಗ್ಗೆ ಕರ್ಮವೀರದಲ್ಲಿ ಲೇಖವನ್ನೂ ಬರೆದೆ. ಪ್ರಾಂತಿಕ ಕಾಂಗ್ರೆಸ್ ಕಮಿಟಿಯಲ್ಲಿ ಸ್ವೀಕೃತವಾಯಿತು. ಅದೇ ಚಿಹ್ನವು ಈಗ 'ಸಂಯುಕ್ತ ಕರ್ನಾಟಕ' ಪತ್ರಿಕೆಯ ಮೇಲೆ ಇರುವದು. ಗಜ-ವೃಷಭಗಳ ಚಿತ್ರಗಳೊಂದಿಗೆ ಮುಸುರಿ ಮುಸುರಿಯಾಗಿ ಮಿಕ್ಕ ಚಿಹ್ನಗಳನ್ನು ಕೂಡಿಸ

ಬೇಡಿರೆಂದು ಹೇಳಿದ್ದೆ. ಆದರೂ ನನ್ನ ಮುಖ್ಯ ಕಲ್ಪನೆಯು ಇದ್ದಕ್ಕಿದ್ದಂತೆಯೇ ಇದೆ.

**ಮಿಕ್ಕ ಚಳವಳಿಗಳು :—** ಬೆಳಗಾಂವಿ ಕಾಂಗ್ರೆಸ್ಸು ಆದ ಬಳಿಕ ನಾನು ಬಹುಶಃ ರಾಜಕಾರಣ ಮುಖಂಡತ್ವದಿಂದ ಹಿಂದೆ ಸರಿಯಹತ್ತಿದೆ. ಅಖಂಡ ಕರ್ನಾಟಕ ರಾಜ್ಯನಿರ್ಮಾಣ ಕಾರ್ಯವು ಮುಖ್ಯವಾಗಿ ಕಾಂಗ್ರೆಸ್ ಕಾರ್ಯಕ್ರಮದ ಒಂದು ಭಾಗವೇ ಎಂದು ನನ್ನ ಅಭಿಪ್ರಾಯ. ನನ್ನ ಹೆಸರು ಮುಂದೆ ಅನೇಕ ವರ್ಷ ಕಾರ್ಯಸಮಿತಿಯಲ್ಲಿ ಹಾಕುತ್ತಲೇ ಇದ್ದರು. ಹೋಗುತ್ತಲೂ ಇದ್ದೆ. ಆದರೆ ಅಲ್ಲಿ ನನ್ನ ಆಟವೇನೂ ಸಾಗುವಂತಿದ್ದಿಲ್ಲ! ನಾನು ಮಂಗಳೂರು ಕಾರ್ಕಳ ಮುಂತಾದ ಊರುಗಳಲ್ಲಿ ಕೂಡಿಸಿದ ಕಾಂಗ್ರೆಸ್ ಸಭೆಗಳಿಗೆ ಹೋಗುತ್ತಲೇ ಇದ್ದೆ. ೧೯೨೮ನೆಯ ಇಸವಿಯಲ್ಲಿ ಧಾರವಾಡದಲ್ಲಿ ಅನೇಕ ರಾಷ್ಟ್ರೀಯ ಪರಿಷತ್ತುಗಳು ಕೂಡಿದ್ದವು. ಖಾದೀ ಪರಿಷತ್ತಿಗೆ ನಾನು ಸ್ವಾಗತ ಮಂಡಲದ ಅಧ್ಯಕ್ಷನು. ಮುಂದಿನ ಕಾಯದೇಭಂಗ ಮುಂತಾದ ಯಾವತ್ತೂ ಚಟುವಟಿಕೆಗಳಲ್ಲಿ ಗುಪ್ತವಾಗಿ ಸಹಾಯಮಾಡಿದೆನು. ೧೯೩೦ರಲ್ಲಿ ಜಯಕರ್ನಾಟಕವನ್ನು ಬೇಂದ್ರೆಯವರಿಗೆ ಒಪ್ಪಿಸಿದಾಗಲೇ ನಾನು ಅಧ್ಯಾತ್ಮವನ್ನು ಕ್ಷೇತ್ರವನ್ನಾಗಿ ಇಟ್ಟುಕೊಂಡಿದ್ದೆ. ಆದರೂ ಗುಪ್ತರೀತಿಯಿಂದ ಚಳವಳಿ ಮಾಡುತ್ತೇನೆಂದು ೨-೩ ಸಲ ನನ್ನ ಬಂಗ್ಲೆ ಝಡತಿಯನ್ನು, ನಾನು ಇಲ್ಲದಾಗ ಮಾಡಿ ಅನೇಕ ಕಾಗದಪತ್ರಗಳನ್ನು ಒಯ್ದರು. ಮೂವರು ಗುಪ್ತ ಪೋಲೀಸರ ಪಹರೆಯಂತೂ ನನ್ನ ಮೇಲೆ ಹಗಲು ರಾತ್ರಿ ಇದ್ದೇ ಇತ್ತು! ನನ್ನ ಪತ್ರಗಳನ್ನು ಒಡೆದು ನೋಡುವ ಕ್ರಮವಂತೂ ಇದ್ದೇ ಇತ್ತು! ಹೀಗಿರುವಾಗ ಒಂದು ದಿವಸ ಶಿರಸಿಯಿಂದ ನನಗೆ ಒಂದು ಗುಪ್ತ ಪತ್ರ ಬಂದಿತು. ಆದರಲ್ಲಿ ಹಿಂಡಲಗಿ ಜೇಲಿನಿಂದ ಕೆಲವು ಹೆಣ್ಣುಮಕ್ಕಳು ಬಿಟ್ಟುಬರುವರೆಂದೂ ನಾನು ಅವರ ಆದರ ಸತ್ಕಾರ ಮಾಡಿ ಅವರನ್ನು ಸುರಕ್ಷಿತವಾಗಿ ಶಿರಸಿಗೆ ಕಳಿಸಬೇಕೆಂದೂ ಬರೆದಿತ್ತು. ಆ ಪ್ರಕಾರ ನನ್ನ ಹತ್ತಿರ ಇದ್ದ ಹೇಜೀಬ ರಾಮಚಂದ್ರನಿಗೆ ತಿಳಿಸಿ ವ್ಯವಸ್ಥೆ ಮಾಡಿ, ಪೋಲೀಸರು ನನ್ನನ್ನು ಹಿಡಿಯಲಿಕ್ಕೆ ಬರುವ ಹಾದಿಯನ್ನೇ ನೋಡುತ್ತಿದ್ದೆ! ಆ ಪ್ರಕಾರ ಮರುದಿನ ನಸುಕಿನಲ್ಲಿ ಪೋಲೀಸರು ನನ್ನನ್ನು ಸೆರೆಹಿಡಿದೊಯ್ದರು! ಆದರೆ ವಯಸ್ಸಿನವನಾದ್ದರಿಂದ ಹಿಂಡಲಗಿ ಜೇಲಿಗೆ ಕಳಿಸದೆ, ಕಲಘಟಗಿ ಗ್ರಾಮದಲ್ಲಿ ದಿಗ್ಬಂಧನೆ

( Detinue ) ಮಾಡಿ ಇಟ್ಟರು. ಅಲ್ಲಿ ಒಂದು ವರ್ಷ ಇದ್ದಾಗ ಗೀತಾ ಅಭ್ಯಾಸಕ್ಕೆ ಅನುವು ದೊರೆತು ಮರಳಿ ಬಂದ ಬಳಿಕ ೫ ಗೀತಾ ಸ್ವತಂತ್ರ ಗ್ರಂಥಗಳನ್ನು ಮುದ್ರಿಸಿದೆ. ಅದು ಬೇರೆ ಕೆಲಸ.

**ರಂಗರಾವ ದಿವಾಕರ ಇವರಿಗೆ ಬರೆದ ಪತ್ರ**:—ಅಧ್ಯಾತ್ಮ ಜೀವನವನ್ನು ಕೈಕೊಂಡ ಕಾರಣದ ಮೂಲಕವೂ ಮಹಾತ್ಮರ ಕೆಲವು ವಿಚಾರಗಳೊಡನೆ ತಾದಾತ್ಮ್ಯ ಹೊಂದದಿದ್ದ ಮೂಲಕವೂ ಪುನಃ ಚಳವಳಿಯಲ್ಲಿ ಸೇರಲಿಲ್ಲ. ಆದರೆ ಒಳಗೆ ನಿಂತು ಸಹಾಯ ಮಾಡುವದನ್ನು ಬಿಡಲಿಲ್ಲ. ನಾನು ದಿವಾಕರರಿಗೆ ೯-೧೦-೧೯೩೪ನೆಯ ಇಸವಿ ದಿವಸ ಬರೆದ ಪತ್ರದಲ್ಲಿ ಹೀಗೆ ಬರೆದಿರುವೆ. ನಾನು ಚಳವಳಿಯಲ್ಲಿ ಪುನಃ ಸೇರಬೇಕೆಂದೂ ಕಾಂಗ್ರೆಸ್ ಕಮಿಟಿಗಳಲ್ಲಿ ಚುನಾವಣೆಯ ಮಾತುಗಳೇ ನಡೆಯುತ್ತಿರುವದರಿಂದ ತಾವು ಬಹಳ ಬೇಸತ್ತಿರುವರೆಂದೂ ಅವರು ನನಗೆ ತಿಳಿಸಿ ೮-೧೦-೧೯೩೪ನೆಯ ದಿವಸ ಬರೆದ ಪತ್ರದಲ್ಲಿ "ಈಗ ನೀವು ಚಳವಳಿಯಲ್ಲಿ ಇಲ್ಲ, ಇದು ನಿಜ. ಆದರೆ ಬರಬೇಕು ಎಂದು ನಾವು ಇಚ್ಛಿಸುವದು ಸಹಜವಲ್ಲವೇ? ನಮಗೆ ಬೇಸರ ಬಂದಿರುವದಾದರೂ ನಿಜ! ಆದರೂ ನೀವು ಹೇಳಿದಂತೆ ಬಿಡದ ಕರ್ಮ" ಎಂಬುದಾಗಿ ಬರೆದಿದ್ದರು. ನಾನು ಬರೆದ ಉತ್ತರದ ಕೆಲ ಭಾಗ ಹೀಗದೆ. "ಪುನಃ ನಾನು ಚಳವಳಿಯಲ್ಲಿ ಬರಬೇಕೆಂದು ನೀವು ಇಚ್ಛಿಸುವದು ನನ್ನ ಮೇಲಿನ ಪ್ರೇಮಾದರಗಳ ದ್ಯೋತಕ. ನಾನು ಬರುವಂತಿಲ್ಲ ಎಂಬುದನ್ನು ಜ್ಞಾಣಾಕ್ಷರಾದ ನೀವು ಕಂಡುಹಿಡಿದಿರಲಿಕ್ಕೆ ಸಾಕು........ಏನೋ ಏನೂ ಸ್ವಂತ ವಿಚಾರಗಳೇ ಇಲ್ಲದಿದ್ದರೆ ಅದೊಂದು ರೀತಿಯಿಂದ ಸುಖವಾಗುತ್ತಿತ್ತು. ಹಾಗೂ ಇಲ್ಲ. ನನ್ನ ತಲೆಯಲ್ಲಿ ಮನೆಮಾಡಿಕೊಂಡಿರುವ ಕೆಲವು ವಿಚಾರಗಳು ನನ್ನನ್ನು ಚಳವಳಿಯಿಂದ ದಿನದಿನಕ್ಕೆ ದೂರ ಮಾಡಹತ್ತಿವೆ. ಆ ವಿಚಾರಗಳನ್ನು ಬಿಡದೆ ಎಲ್ಲಿಯ ವರೆಗೆ ಕೆಲಸ ಮಾಡಲಿಕ್ಕೆ ಬರುತ್ತಿತ್ತೋ ಅಲ್ಲಿಯ ವರೆಗೆ ಮಾಡಿದೆ. ಚ್ಯುತಿ ಬರುವ ಪ್ರಸಂಗ ಬಂದ ಕೂಡಲೇ ಹೊರಬಿದ್ದೆ."

ಚಲೇಜಾವ ಚಳವಳಿಯಲ್ಲಿಯೂ ಆಕಸ್ಮಿಕವಾಗಿ ನಾನು ಭಾಗ ತಕ್ಕೊಳ್ಳುವ ಪ್ರಸಂಗ ಬರಲಿಲ್ಲ! ಆ ಚಳವಳಿ ಹೊರಟದ್ದೇ ನನಗೆ ಗೊತ್ತಾಗಲಿಲ್ಲ! ಏಕೆಂದರೆ ಆ ಕಾಲಕ್ಕೆ ಗದುಗಿನಲ್ಲಿ ನನ್ನ ಮಗಳಾದ ಚಿ|| ಕುಂ|| ಸೌ|| ರಂಗೂಬಾಯಿ ಇವಳು ೭೫ ದಿವಸ ಟಾಯಫಾಯಿಡದಿಂದ ಮಲಕೊಂಡಿದ್ದ ಕಾರಣ ನಾನು

ನನ್ನ ಹೆಂಡತಿಯೂ ಅವಳ ಹಾಸಿಗೆಯ ಹತ್ತಿರವೇ ಇದ್ದೆವು. ಮುಂದೆ ಒಂದೆರಡು ತಿಂಗಳ ನಂತರ ನಾವು ಧಾರವಾಡಕ್ಕೆ ಬಂದಾಗ ನನ್ನ ಹಿರಿಯ ಮಗ ಚಿ॥ ಭೀಮು ಎಂಬವನು ( ಈಗ ಆತನು ಖಾನಾಪುರದಲ್ಲಿರುವ ಸರಕಾರೀ ಕುಂಬಾರ ಟ್ರೇನಿಂಗ್ ಕೇಂದ್ರಕ್ಕೆ ಮುಖ್ಯಸ್ಥನಾಗಿ ೧೦-೧೨ ವರ್ಷಗಳಿಂದ ಕೆಲಸ ಮಾಡುತ್ತಿರುವನು. ) 'ಚಲೇಜಾವ' ಚಳವಳಿಯಲ್ಲಿ ಮುಖ್ಯ ಭಾಗ ವಹಿಸಿದ್ದನು ! ಆತನು ಬನಾರಸ ಯುನಿವ್ಹರ್ಸಿಟಿಯಲ್ಲಿ ಕಲಿಯುತ್ತಿದ್ದನು. ಅದೇ ವರ್ಷ ಕೊನೆಯ ಪರೀಕ್ಷೆ. ಆದರೂ ಲೆಕ್ಕಿಸದೆ ಎಲ್ಲರಿಗಿಂತ ಮುಂಚೆ ಆ ಚಳವಳಿಯಲ್ಲಿ ಬಿದ್ದು, ಧಾರವಾಡಕ್ಕೆ ಬಂದು ಗುಪ್ತ ಚಳವಳಿಯಲ್ಲಿ ಪ್ರಮುಖನಾಗಿದ್ದನು ! ಆದ ಕಾರಣ ಆ ಚಳವಳಿಯಲ್ಲಿ ಬೀಳಲಿಕ್ಕೆ ಮುಮುಕನಾದ ನನಗೆ ಕಾರಣಬೀಳಲಿಲ್ಲ. ಮುಂದೆ ಮೂರನೇ ಮಗ ಚಿ॥ ಕೃಷ್ಣನೂ ಕಾಂಗ್ರೆಸ್ ಚಳವಳಿಯಲ್ಲಿ ಬಿದ್ದಿರುವ ಮೂಲಕ ನನಗೆ ನನ್ನ ಆಧ್ಯಾತ್ಮ ಜೀವನ ನಡಿಸಲಿಕ್ಕೆ ದೇವರು ಅನುಕೂಲ ಮಾಡಿಕೊಟ್ಟಿದ್ದಾನೆ !



# ೧೪ನೆಯ ಪ್ರಕರಣ

## ವಾಙ್ಮಯದಲ್ಲಿ ಕರ್ನಾಟಕತ್ವ

**ಕರ್ನಾಟಕತ್ವವೂ ಮತ್ತು ಕನ್ನಡ ನುಡಿಯೂ**:— ಅಖಂಡ ಕರ್ನಾಟಕಕ್ಕೆ ಅತ್ಯಂತ ನಿಕಟವಾದ ವಿಷಯವೆಂದರೆ ಕನ್ನಡ ನುಡಿ. ಅಖಂಡ ಕರ್ನಾಟಕ ನಿರ್ಮಾಣಕ್ಕೆ ಕನ್ನಡ ನುಡಿಯೇ ಬೆನ್ನೆಲಬು. ಕನ್ನಡ ನುಡಿಯ ಆಧಾರದ ಮೇಲೆಯೇ ಅದರ ಭವಿತವ್ಯವು ಅವಲಂಬಿಸಿದೆ. ನುಡಿಯೊಂದಾಗದೆ ನಾಡೊಂದಾಗದು ! ಈಗ ಆ ದೃಷ್ಟಿಯಿಂದ ಈ ವಿಷಯವನ್ನು ವಿಚಾರಿಸೋಣ. ಕೇವಲ ಕನ್ನಡ ನುಡಿಯೊಂದರ ಏಳಿಗೆಯ ಬಗ್ಗೆ ಮಾತ್ರವೇ ವಿಚಾರ ಮಾಡುವದು ಈಗ ಅಪ್ರಸ್ತುತವು. ಅದು ಸಾಹಿತಿಗಳಿಗೆ ಸಂಬಂಧಿಸಿದ್ದು. ತದ್ವಿರುದ್ಧವಾಗಿ ಸಾಹಿತಿಗಳಿಗೂ ಕನ್ನಡನಾಡ ನಿರ್ಮಾಣಕ್ಕೂ ಮಾತ್ರ ವಿಶೇಷ ಸಂಬಂಧವಿದೆ. ಭಾಷಾನುಗುಣ ಪ್ರಾಂತರಚನೆಯ ಪ್ರಶ್ನೆ ಹೋಟಿದುದು ಮುಖ್ಯವಾಗಿ ಆಡಳಿತೆಯ ದೃಷ್ಟಿಯಿಂದ. ಅಖಂಡ ಭಾರತವನ್ನು ಆಳುವಾಗ ಪ್ರಾಂತಗಳನ್ನಂತೂ ಕಲ್ಪಿಸಲೇ ಬೇಕಷ್ಟೇ ? ಯಾವ ತತ್ವದ ಮೇಲೆ ಈ ವಿಭಾಗವನ್ನು ಮಾಡಬೇಕೆಂಬುದೇ ಈ ಪ್ರಶ್ನೆ. ನಾನು ಮೊದಲನೆಯ ಆಯೋಗಕ್ಕೆ ಕೊಟ್ಟ ಮನವಿಯಲ್ಲಿ ನನ್ನ ಅಭಿಪ್ರಾಯ ಸ್ಪಷ್ಟಪಡಿಸಿರುವೆ. ಭಾಷಾನ್ವಯ ದೃಷ್ಟಿಯಿಂದ ವಿಂಗಡಿಸುವದೇ ಹೆಚ್ಚು ಸುಗಮವಾದುದು ; ಸಮರ್ಪಕವಾದುದು. ಮಿಕ್ಕ ಯಾವ ವಿಧದಲ್ಲಿ ವಿಂಗಡಿಸುವದೂ ಸರಿಯಾದುದಲ್ಲ. ಹಾಗೆ ಮಾಡಿದಲ್ಲಿ ಹೆಚ್ಚಿನ ತೊಡಕುಗಳೇ ಉಂಟಾಗುವವು. ಅದೇ ಕಾಲಕ್ಕೆ ನಾನು ಮತ್ತೊಂದು ಮಾತನ್ನು ಸ್ಪಷ್ಟಪಡಿಸಿರುವೆ. ಏನೆಂದರೆ, ಭಾಷಾನ್ವಯ ಪ್ರಾಂತರಚನೆಯಲ್ಲಿ ತೊಡಕುಗಳು ಇಲ್ಲವೇ ಇಲ್ಲವೆಂದು ನಾನು ಹೇಳುವದಿಲ್ಲ. ಆದರೆ ಮಿಕ್ಕ ಯಾವ ತತ್ವಕ್ಕಿಂತಲೂ ಈ ತತ್ವದಲ್ಲಿ ಕಡಿಮೆ ತೊಡಕುಗಳು ಇವೆ. ಅಂತೇ ಈ ತತ್ವವನ್ನು ಸ್ವೀಕರಿಸಬೇಕೆಂಬ ಕಾರಣವನ್ನು ಕೊಟ್ಟಿರುವೆನಲ್ಲದೆ ಇದೇ ಸರ್ವಸ್ವವೆಂದು ನಾನು ಹೇಳಿಲ್ಲ. ಇರಲಿ.

ಈ ಬಗ್ಗೆ ಬ್ರಿಟಿಶ ಸರಕಾರವಿದ್ದಾಗಲೂ ಈ ತತ್ವವೇ ಹೆಚ್ಚು ಸುಖಕರವಾದ ತತ್ವವೆಂಬುದು ಕೆಲಮಟ್ಟಿಗೆ ಮಾನ್ಯವಾಗಿತ್ತು. ಆದರೆ ಅದು ಅನೇಕ ಕಾರಣಗಳ ಮೂಲಕ ಮುಂದೆ ಬಿತ್ತು. ಅದೆಲ್ಲವನ್ನು ಇಲ್ಲಿ ಹೇಳುವದು ಅಪ್ರಸ್ತುತ. ಒಂದೇ ಒಂದು ಮಹತ್ವದ ಮಾತನ್ನು ಇಲ್ಲಿ ಪುನಃ ಹೇಳುತ್ತೇನೆ. ಅದೆಂದರೆ, ಕರ್ನಾಟಕಸ್ಥರು ಭಾಷಾನ್ವಯ ಪ್ರಾಂತದ ಬಗ್ಗೆ ಪ್ರಯತ್ನಿಸಿದಾಗ ರಾಷ್ಟ್ರೀಯತ್ವವನ್ನು ಎಂದೂ ಮರೆತಿಲ್ಲ.

ಸಾಯಮನ್ ಕಮಿಶನ್ ಬಂದಾಗ (೧೯೨೮) ನಾವು ಎಷ್ಟೇ ಪ್ರಾಂತದ ಕಟ್ಟಾಭಿಮಾನಿಗಳಿದ್ದರೂ ಇಡೀ ರಾಷ್ಟ್ರಕ್ಕೆ ಅಪಮಾನಕರವಾಗುವಂಥ ಆಗಿನ ಸ್ಥಿತಿಯಲ್ಲಿ ( ಆಗ ಇಡೀ ರಾಷ್ಟ್ರವು ಸಾಯಮನ್ ಕಮೀಶನ್ನಕ್ಕೆ ಬಹಿಷ್ಕಾರ ಹಾಕಬೇಕೆಂದು ನಿರ್ಣಯಿಸಿತ್ತು. ) ನಾವು ಸಹ ಬಹಿಷ್ಕಾರ ಹಾಕಿದೆವಲ್ಲದೆ ಪ್ರತ್ಯೇಕ ಪ್ರಾಂತದ ಭಿಕ್ಷೆ ಅವರೆದುರಿಗೆ ಬೇಡಲು ಹೋಗಲಿಲ್ಲ. ಅದೇ ಕಾಲಕ್ಕೆ ಓಡಿಸಾ ಪ್ರಾಂತದವರು ಹಾಗೆ ಭಿಕ್ಷೆ ಬೇಡಿದ್ದರಿಂದ ಆಗಲೇ ಅವರಿಗೆ ಪ್ರಾಂತ ದೊರಕಿತು.

ಹೀಗೆ ಪ್ರಾಂತಗಳಾಗುವದರಿಂದ ಕನ್ನಡ ಭಾಷೆಯ ಏಳ್ಗೆ ಆಗುವದು. ನಾನು ೧೯೨೪-೧೯೨೫ರಲ್ಲಿ ಉಟಕಮುಂಡಲಕ್ಕೆ ಹೋದಾಗ ಅಲ್ಲಿ ಕನ್ನಡ ನುಡಿಯ ದುರ್ದಶೆ ಎಷ್ಟಾಗಿರುತ್ತದೆಂಬುದು ಗೊತ್ತಾಯಿತು. ಹೈದರಾಬಾದ ಪ್ರಾಂತಕ್ಕೆ ಹೋದಾಗ ಅಲ್ಲಿ ಉರ್ದು ಮತ್ತು ಮರಾಠಿ ಭಾಷೆಗಳು ಕನ್ನಡದ ಕುತ್ತಿಗೆಯನ್ನು ಹಿಚುಕುತ್ತಿರುವವೆಂಬುದು ಗೊತ್ತಾಯಿತು. ಅದೇ ಕಾಲಕ್ಕೆ ನಾವು ಕನ್ನಡಿಗರು ಕರ್ನಾಟಕದಲ್ಲಿರುವ ಕೊಂಕಣಿ, ತುಳುವು, ಕೊಡಗು ಮುಂತಾದ ಉಪಭಾಷೆಗಳನ್ನಾಡುವ ಜನರಿಗೆ ಅವರವರ ಭಾಷೆಗಳಿಗೆ ತಕ್ಕ ಸ್ಥಾನ ಕೊಟ್ಟು, ಇಡೀ ಕರ್ನಾಟಕ ದೃಷ್ಟಿಯಿಂದ ಕನ್ನಡವನ್ನು ರಾಜ್ಯಭಾಷೆಯನ್ನಾಗಿ, ಮಾಡುವದರ ಮತ್ತು ರಾಜಕಾರಣಕ್ಕೋಸ್ಕರ ಆ ಭಾಷೆಯಲ್ಲಿ ನೈಪುಣ್ಯವನ್ನು ಪಡೆಯುವದರ ಮಹತ್ವವನ್ನು ತಿಳಿಹೇಳಿದೆನು. ಅದರ ಪರಿಣಾಮವಾಗಿಯೇ ೧೯೩೧ರಲ್ಲಿ ಕಾರವಾರದಲ್ಲಿ ಕೂಡಿದ ಸಾಹಿತ್ಯಸಮ್ಮೇಲನದ ಕಾಲಕ್ಕೆ ನಾವು ಕೂಡಿಸಿದ ಕರ್ನಾಟಕ ಏಕೀಕರಣ ಸಭೆಯಲ್ಲಿ ತಂದ ನಮ್ಮ ಕರ್ನಾಟಕ ಪ್ರಾಂತ ನಿರ್ಮಾಣದ ಪ್ರಶ್ನೆಗೆ ಕಾರವಾರದ ಪ್ರಮುಖ ಕೊಂಕಣಿಗರಾದ ಶ್ರೀ. ನಾಡಕರ್ಣಿ

ಎಂಬ ವಕೀಲರು ತಮ್ಮ ಹೃತ್ಪೂರ್ವಕ ಬೆಂಬಲವನ್ನು ಕೊಟ್ಟದ್ದರಿಂದ ಆ ಗೊತ್ತುವಳಿಯು ಮಂಜೂರಾಯಿತು. ಸಾರಾಂಶ, ಕರ್ನಾಟಕವು ಕನ್ನಡಕ್ಕಿಂತ ವ್ಯಾಪಕವಾಗಿರುವದೆಂಬದನ್ನು ನಾವು ಮರೆಯಬಾರದು. ಮತ್ತು ಉಪಭಾಷಿಗರನ್ನು ಮಾತ್ರವೇ ಅಲ್ಲ, ನೆರೆಭಾಷೆಗಳ ಅಲ್ಪಸಂಖ್ಯಾಕರನ್ನೂ ಮರೆಯಕೂಡದು—ಎಂಬುದು ಅಖಂಡ ಕರ್ನಾಟಕ ರಚನೆಯಲ್ಲಿ ನಾವು ಒಂದು ಅವಶ್ಯವಾಗಿ ನೆನಪಿನಲ್ಲಿಡತಕ್ಕ ಮಾತು. ಅರ್ಥಾತ್, ಕನ್ನಡಕ್ಕೆ ಪ್ರಧಾನ ಸ್ಥಾನವಿದೆ. ಆದರೆ ಜ್ಞಾನಕ್ಕೆ ಸರ್ವದಿಶೆಯಿಂದಲೂ ಸ್ವಾಗತವಿದೆ. ಕರ್ನಾಟಕ ಚಳವಳಿಯನ್ನು ಉತ್ಕಟವಾಗಿ ನಡೆಸಿದ ನಾನು, ಅದನ್ನು ಎಂದೂ ಮರೆಯಲಿಲ್ಲ. ಅಂತೇ ಧಾರವಾಡದಲ್ಲಿ ಮರಾಠಿ ಲಾಯಬ್ರರಿಯು ನಿಂತುಹೋಗುವ ಸಂದರ್ಭದಲ್ಲಿ ನಾನು ಅದನ್ನು ತಕ್ಕೊಂಡು ನನ್ನ ಸ್ವಂತ ಭಾರತ ಪುಸ್ತಕಾಲಯಕ್ಕೆ ಜೋಡಿಸಿ, ಕೆಲ ವರ್ಷ ನಡೆಯಿಸಿ, ಮುಂದೆ ಇಲ್ಲಿಯ ಮರಾಠಿಗರು ಅದನ್ನು ನಡಿಸಲು ಮುಂದೆ ಬಂದಾಗ ಅದನ್ನು ಅವರಿಗೆ ಒಪ್ಪಿಸಿದೆನು. ನಾನು ನನ್ನ ಸ್ವಂತ ಲಾಯಬ್ರರಿಯಲ್ಲಿ ನೂರಾರು ಮರಾಠಿ ಗ್ರಂಥಗಳನ್ನು ಸಂಗ್ರಹಿಸಿರುವೆನು.

**ಬೃಹನ್ಮಹಾರಾಷ್ಟ್ರ ಕಲ್ಪನೆ:**— ಇದೊಂದು ಅತ್ಯಂತ ವಿಲಕ್ಷಣವಾದ ಅರಾಷ್ಟ್ರೀಯವಾದ ವಿಕ್ಷಿಪ್ತವಾದ ಆಕ್ರಮಣಶೀಲ ಕೆಲ ಮರಾಠಿಗರ ಕಲ್ಪನೆ. ಅದರ ಉದ್ದೇಶವು ಸ್ಥೂಲವಾಗಿ ಹೀಗೆ.—ಮರಾಠಿ ಭಾಷೆ ಆಡುವ ಜನರು ಅವರು ಯಾವ ದೇಶದಲ್ಲಿಯೇ ಇರಲಿ, ಯಾವ ಕಾಲದಲ್ಲಿಯೇ ಇರಲಿ, ತಾವು ಕಟ್ಟಾ ಮರಾಠಿಗರೆಂಬ ಅಭಿಮಾನವನ್ನು ಬಿಡಕೂಡದು. ಇಷ್ಟೇ ಅಲ್ಲ, ಅವರು ಯಾವ ಮೂಲೆಯಲ್ಲಿಯೇ ಇರಲಿ, ಆ ಪ್ರದೇಶವು ಕೂಡ ಮಹಾರಾಷ್ಟ್ರವೆಂದೇ ತಿಳಿಯತಕ್ಕದ್ದು ಎಂಬುದು ಅವರ ಹುಚ್ಚು ಕಲ್ಪನೆ. ಇದರ ಪ್ರಕಾರ ಮದ್ರಾಸ ಇಲಾಖೆಯಲ್ಲಿ ತಮಿಳು ಮುಂತಾದ ಪ್ರಾಂತಗಳಲ್ಲಿ ೩೦೦, ೪೦೦ ವರ್ಷಗಳ ಹಿಂದೆಯೇ ಹೋಗಿ, ಶಾಶ್ವತ ನೆಲೆಸಿದ ಮರಾಠಿಗರು ಕೂಡ ಕೊನೆಯ ವರೆಗೆ, ಮರಾಠಿ ಅಭಿಮಾನವನ್ನೇ ತಾಳಿ ತಾವು ಪ್ರತ್ಯೇಕ ಹಾಗೂ ಹೆಚ್ಚಿನವರು ಎಂದು ಭಾವಿಸರಬೇಕು. ಇಷ್ಟೇ ಅಲ್ಲ, ಇಂದೂರು, ಗ್ವಾಲ್ಹೇರ, ಬಡೋದಾ ಮುಂತಾದ ಹಿಂದೀ ಮತ್ತು ಗುಜರಾಥಿ ಭಾಷೆಯ ನಟ್ಟನಡುವಿನ ಪ್ರದೇಶಗಳಲ್ಲಿ ಕೂಡ, ಹಿಂದಕ್ಕೆ ಎಂದೋ ಒಂದು ಕಾಲಕ್ಕೆ ಅಲ್ಲಿ ಮರಾಠಾ

ಅರಸರು ಆಳಿದರೆಂಬ ಕಾರಣದಿಂದ ಅಲ್ಲಿ ಮರಾಠಿಯನ್ನು ಬೆಳೆಸಬೇಕೆಂದು ಅವರ ಪ್ರಯತ್ನ. ಇತ್ತ, ಬೆಳಗಾವಿ, ಸೊಲ್ಲಾಪುರ ಪ್ರದೇಶಗಳಲ್ಲಿ ಮರಾಠಿಯನ್ನು ಮುನ್ನುಗ್ಗಿಸುವ ಆಕ್ರಮಣಶೀಲ ಪ್ರಯತ್ನ! ಇಂಥ ಇವರ ದುರಾಗ್ರಹದ ಭಾಷಾಭಿಮಾನದ ಅತಿರೇಕದ ಬುದ್ಧಿಯೇ ಸುತ್ತಲಿನವರಿಗೂ ಹಾನಿ ಮಾಡಹತ್ತಿದೆ. ಇಂಥ ಕಲ್ಪನೆಯು ಆತ್ಮಘಾತುಕವಾದುದಲ್ಲದೆ, ರಾಷ್ಟ್ರಘಾತುಕವಾದುದು. ಈ ಕಾರಣದ ಮೂಲಕವೇ ಧಾರವಾಡದಲ್ಲಿ ಮಾತ್ರವೇ ಅಲ್ಲ, ಬೆಂಗಳೂರ, ಮೈಸೂರುಗಳಲ್ಲಿ ನೂರಾರು ವರ್ಷಗಳಿಂದ ನೆಲೆಸಿದ ಅನೇಕ ಮರಾಠಿಗರು ಕರ್ನಾಟಕದೊಡನೆ ಎಷ್ಟೋ ದಿವಸ ತಾದಾತ್ಮ್ಯ ಹೊಂದಲಿಲ್ಲ. ನಮ್ಮ ಕರ್ನಾಟಕತ್ವದ ಭಾವನೆಯಲ್ಲಿ ಇಂಥ ಅತಿರೇಕಕ್ಕೆ ನಾವು ಆಸ್ಪದ ಕೊಡಲಿಲ್ಲ. ಕನ್ನಡಿಗನೊಬ್ಬನು ಬಂಗಾಲದಲ್ಲಿ ಹೋಗಿ, **ಶಾಶ್ವತವಾಗಿ** ನೆಲೆಸಿದನೆಂದು ತಿಳಿಯಿರಿ. ಆಗ ಅವನು ಬಂಗಾಲ ಭಾಷೆಯೊಡನೆ, ಬಂಗಾಲಿಗರೊಡನೆ ತಾದಾತ್ಮ್ಯವನ್ನು ಹೊಂದಲೇಬೇಕು. ಶಾಶ್ವತವಾಗಿ ನಿಲ್ಲುವ ಇಚ್ಛೆಯಿಲ್ಲದೆ ಇಂದಿಲ್ಲ ನಾಳೆ ತಿರುಗಿ ಕರ್ನಾಟಕಕ್ಕೆ ಬರುವ ಸಂಭವವಿದ್ದರೆ ಮಾತ್ರ ಕನ್ನಡದ ಅಭಿಮಾನವನ್ನು ಬಿಡಕೂಡದು. ಇಷ್ಟೇ ಕಾರಣಕ್ಕಾಗಿಯೇ ನಾವು ಹೊರನಾಡ ಕನ್ನಡ ಸಂಸ್ಥೆಗಳನ್ನು ತೆಗೆದದ್ದು. ಈ ನಮ್ಮ ತತ್ವವು ಸರಿಯಾಗಿದ್ದುದರಿಂದಲೇ ಶ್ರೀ. ಗುರುನಾಥರಾವ ಘಾಟಕ, ಮಹರ್ಷಿ ರಾನಡೆ, ಶ್ರೀ. ಕರಮರಕರ, ಶ್ರೀ. ಬೇಂದ್ರೆ, ಶ್ರೀ. ಶಂ. ಬಾ. ಜೋಶಿ, ಶ್ರೀ. ಭಾಲಚಂದ್ರ ಘಾಣೇಕರ, ಶ್ರೀ. ಗದ್ರೆ ಮುಂತಾದವರು ಕನ್ನಡ ಭಾಷೆಯೊಡನೆ ತಾದಾತ್ಮ್ಯವನ್ನು ಹೊಂದಿರುವರು. ಮತ್ತು ಕರ್ನಾಟಕ ಸೇವೆಯನ್ನು ಸತತವಾಗಿ ಮಾಡುತ್ತಿರುವರು. ಕೆಲ ದುರಭಿಮಾನಿ ಮರಾಠಿಗರು ಇಲ್ಲಿ ಶಿವಾಜಿ ಉತ್ಸವ ಮುಂತಾದ ಉತ್ಸವಗಳನ್ನು ಮಾಡಿದರೂ ವಿದ್ಯಾರಣ್ಯ ಉತ್ಸವ ನಾಡಹಬ್ಬ ಮುಂತಾದ ಉತ್ಸವಗಳಲ್ಲಿ ಬೆರೆಯುತ್ತಿರಲಿಲ್ಲ. ಈ ಕಾರಣಕ್ಕಾಗಿಯೇ ನಾವು ಅಂಥವರೊಡನೆ ವಿರೋಧ ಕಟ್ಟಿಕೊಂಡು ಮುಂದೆ ಬಡಿದಾಡಬೇಕಾಯಿತು.

**ವಾಙ್ಮಯದಲ್ಲಿ ಕರ್ನಾಟಕತ್ವ:—ಕರ್ನಾಟಕತ್ವವೆಂದರೆ ಕನ್ನಡ ವಾಙ್ಮಯ ಮಾತ್ರವಲ್ಲ.** ಕನ್ನಡ ನುಡಿಯೆಂದರೆ, ಕರ್ನಾಟಕ ಸರ್ವಸ್ವವೆಂದು ತಿಳಿಯುವದೊಂದು ವರ್ಗವು ನಮ್ಮಲ್ಲಿದೆ. ಅದು ಅಷ್ಟು ಸರಿಯಲ್ಲ. “ ಅತ್ಯತಿಷ್ಠತ್ ದಶಾಂಗುಲಂ ” ಎಂಬಂತೆ ಕರ್ನಾಟಕತ್ವವು ವ್ಯಾಪಾರ, ಕಲೆ,

ಭೂಸುಧಾರಣೆ, ಬಂದರ ಸುಧಾರಣೆ, ಆಯುರ್ವೇದ ಮುಂತಾದ ಅನೇಕ ವಿಷಯಗಳನ್ನು ಒಳಗೊಂಡಿದೆ. ಕರ್ನಾಟಕದಲ್ಲಿ ಕನ್ನಡವಲ್ಲದೆ ತುಳು, ಕೊಂಕಣಿ, ಕೊಡಗು ಮುಂತಾದ ಉಪಭಾಷೆಗಳಿವೆ. ಈ ಜನರಿಗೆ ತಮ್ಮ ಮಾತೃಭಾಷೆಯ ಅಭಿಮಾನವನ್ನು ಬಿಡಹೇಳುವದು ಸರಿಯಲ್ಲ. ಆದರೆ ಈಗಿನ ದಿವಸಗಳಲ್ಲಿ ಮಾತೃಭಾಷೆಗಿಂತ ದೇಶಭಾಷೆಗೆ ಒಂದು ಜಗೆಯ ಮಹತ್ವವಿದೆ. ಏಕೆಂದರೆ, ಭಾಷಾನ್ವಯ ಪ್ರಾಂತರಚನೆಯಾಗುವದರಿಂದ ಆಡಳಿತೆಯು ಸುಗಮವಾಗುವ ದೆಂಬುದೆ ಭಾಷಾನ್ವಯ ಪ್ರಾಂತರಚನೆಯ ತತ್ವ. ಆದ ಕಾರಣ ಮಾತೃ ಭಾಷೆಯು ಮರಾಠಿಯೇ ಇರಲಿ, ಮುಸಲ್ಮಾನಿಯೇ ಇರಲಿ ಅಥವಾ ಮತ್ತಾ ವದೇ ಇರಲಿ, ಎಲ್ಲರೂ ದೇಶಭಾಷೆಯನ್ನು ಕಲಿಯುವದು ಅತ್ಯವಶ್ಯವು.

**ವಾಚನಾಲಯಗಳ ಸಂಬಂಧವಾಗಿ ನನ್ನ ಚಳವಳಿ:—** ಕರ್ನಾಟಕದಲ್ಲೆಲ್ಲ ವಾಚನಾಲಯಗಳ ಜಾಳಿಗೆಯನ್ನು ಹಬ್ಬಿಸಬೇಕೆಂದು ನನ್ನ ಇಚ್ಛೆ ಇತ್ತು. "ಕರ್ನಾಟಕ ಸಭೆ"ಯ ವತಿಯಿಂದ ಆ ಕಾರ್ಯ ಪ್ರಾರಂಭ ಮಾಡಿದೆ. ಕೊಪ್ಪಳದ ಶ್ರೀ. ಜಯರಾಮಾಚಾರ್ಯರನ್ನು ಕರ್ನಾಟಕ ಚಳವಳಿಯ ಕೆಲಸಕ್ಕೆ ಮೊಟ್ಟಮೊದಲು ಹೂಡಿ, ವಾಚನಾಲಯಗಳನ್ನು ಸ್ಥಾಪಿಸುವದಕ್ಕೆ ಅವರನ್ನು ಊರೂರಿಗೆ ಕಳಿಸಿಕೊಟ್ಟೆ. ಅವರು ಅಖಂಡ ಕರ್ನಾಟಕ ನಿರ್ಮಾಣದ ಆವಶ್ಯಕತೆಯನ್ನು ಒತ್ತಿ ಒತ್ತಿ ಹೇಳಿ ಜನಜಾಗ್ರುತಿಯನ್ನು ಚೆನ್ನಾಗಿಯೇ ಮಾಡಿದರು. ವಾಚನಾಲಯಗಳು ಕರ್ನಾಟಕತ್ವದಲ್ಲಿ ರಾಜಕಾರಣ ಮತ್ತು ವಾಙ್ಮಯಗಳನ್ನು ಜೋಡಿಸುವ ಕೊಂಡಿಗಳು. ಅವು ಎಲ್ಲೆಡೆಗೂ ಸ್ಥಾಪಿತವಾದರೆ ಅಖಂಡ ಕರ್ನಾಟಕವು ನಿರ್ಮಾಣವಾಗುವದಕ್ಕೆ ಸಹಾಯವಾಗುತ್ತದೆಂದು ನನ್ನ ಮತ. ಕರ್ನಾಟಕ ಸಾಹಿತ್ಯ ಪರಿಷತ್ತು, ಆ ಕಾರ್ಯವನ್ನು ಕೈಕೊಳ್ಳಬೇಕೆಂದು ಬಹಳ ಹವಣಿಸಿದೆ. ಗಡಿನಾಡುಗಳಲ್ಲಿ ಕನ್ನಡ ಭಾಷೆಯ ಅಭಿಮಾನ ಹುಟ್ಟಿಸುವದಕ್ಕೆ ಅವು ವಿಶೇಷವಾಗಿ ಬೇಕಾಗಿದ್ದವು. ಪರಿಷತ್ತಿಗೆ ಅವುಗಳ ಮಹತ್ವ ಅರಿಕೆಯಾಗದ್ದರಿಂದ ಅಥವಾ ಅರಿಕೆಯಾಗಿದ್ದರೂ ಧೈರ್ಯವಿಲ್ಲದ್ದರಿಂದ ಪರಿಷತ್ತು ಆ ಕೆಲಸವನ್ನು ಕೈಕೊಳ್ಳಲಿಲ್ಲ. ಆದರ ಆ ದುರ್ಲಕ್ಷ್ಯದ ಪರಿಣಾಮವಾಗಿ ಇಂದು ನಾವು ಆದವಾನಿ, ಆಲೂರು, ರಾಯದುರ್ಗ, ಜತ್ತ, ಅಕ್ಕಲಕೋಟ, ನೀಲಗಿರಿ ಜಿಲ್ಲೆ, ಕಾಸರಗೋಡ, ಹೊಸೂರು ಮುಂತಾದ ಅನೇಕಾನೇಕ ಊರುಗಳನ್ನು ಕಳಕೊಂಡೆವು. ಆಗ ಕರ್ನಾಟಕವು ನನ್ನ ಉಪ

ದೇಶಕ್ಕೆ ಕಿವಿಗೊಟ್ಟಿದ್ದರೆ, ನಮಗೆ ಯಾವ ಕನ್ನಡ ದೇಶಗಳನ್ನೂ ಕಳೆದು ಕೊಳ್ಳುವ ಪ್ರಸಂಗವೇ ಬರುತ್ತಿರಲಿಲ್ಲ. ಏಕೆಂದರೆ, ಆಗತಿಕವಾದ ಒಳ-ಹೊರಗಿನ ಕನ್ನಡ ಗಡಿಪ್ರದೇಶಗಳಲ್ಲಿ ಕನ್ನಡದ ಅಭಿಮಾನವನ್ನು ತುಂಬಿ, ಅವನ್ನು ಉಳಿಸಿಕೊಳ್ಳಲಿಕ್ಕೆ ನಮಗೆ ೩೦-೪೦ ವರ್ಷಗಳ ಅವಕಾಶವಿತ್ತು. ಈಗ ಅವುಗಳನ್ನು ಕಳೆದುಕೊಳ್ಳುವ ಪ್ರಸಂಗ ಬಂದಿದೆ. ಈ ಪಾಪಕ್ಕೆ ಸಾಹಿತ್ಯ ಪರಿಷತ್ತು, ಕಾಂಗ್ರೆಸ್ ಕಮಿಟಿಗಳೇ ಗುರಿಗಳಲ್ಲವೆ? ಇರಲಿ, ಆ ಕಥೆ ಮುಂದೆ ಹೇಳುವೆ. ಮುಖಂಡರೆಲ್ಲರೂ ಕೂಡಿ, ಕನ್ನಡ ಪತ್ರಿಕೆ ಮತ್ತು ಗ್ರಂಥಗಳನ್ನು ಕೊಳ್ಳುವ ೧-೨-೩ ಹೀಗೆ ಮೂರು ವರ್ಗಗಳ ೧೦೦೦ ಲಾಯಬ್ರರಿಗಳ ಜಾಳಿಗೆಯನ್ನು ಹೆಣೆದರೆ ಪತ್ರಿಕಾಕರ್ತರ ಹಾಗೂ ಗ್ರಂಥಕರ್ತರ ಹಸಿವು ಹಿಂಗಲಿಕ್ಕಿಲ್ಲವೇ? ಧಾರವಾಡದಲ್ಲಿ ಅಖಂಡ ಕರ್ನಾಟಕದ ವಾಚನಾಲಯಗಳ ಪರಿಷತ್ತನ್ನು ಕರೆದು, ಅದರ ಮುಖಾಂತರ ಈ ಕಾರ್ಯವನ್ನು ಮುಂದುವರಿಸಲು ಪ್ರಯತ್ನ ಪಟ್ಟೆ. ಆ ಪರಿಷತ್ತಿಗೆ ಆಂಧ್ರದೇಶದ ಮುಖಂಡರೊಬ್ಬರನ್ನು ಕರೆತಂದಿದ್ದೆ. ಅವರು ಆಂಧ್ರದೇಶದಲ್ಲಿ ಆ ಪ್ರಕಾರದ ಜಾಳಿಗೆಯನ್ನು ಹೆಣೆದು ಪ್ರಯತ್ನ ಪಟ್ಟಿದ್ದರು. ಕನ್ನಡ ಪತ್ರಿಕೆ ಮತ್ತು ಪುಸ್ತಕಗಳೆಲ್ಲವನ್ನು ಕೊಂಡುಕೊಳ್ಳಲೇ ಬೇಕೆಂದು ಸಂಕಲ್ಪ ಮಾಡಿದ್ದೆ. ಆಗ ಅವು ಬಹಳ ಹೊರಡುತ್ತಲೂ ಇರಲಿಲ್ಲ. ಒಟ್ಟಿನ ಮೇಲೆ ಕನ್ನಡಕ್ಕಾಗಿ ವರ್ಷಕ್ಕೆ ೧೫೦, ೨೦೦ ರೂ.ಗಳನ್ನು ವೆಚ್ಚ ಮಾಡಿದ್ದರೆ ಸಾಕಾಗುತ್ತಿತ್ತು. ಕನ್ನಡದ ಅಭಿಮಾನಿಗಳಿಗೆ ವಾಙ್ಮಯ ಪ್ರಚಾರಕ್ಕಾಗಿ ಅಷ್ಟು ಹಣ ವೆಚ್ಚ ಮಾಡುವದು ಭಾರವೇ! ನಮ್ಮ ಕರ್ನಾಟಕದಲ್ಲಿ ಒಂದು ದೊಡ್ಡ ವೈಗುಣ್ಯ. ಅದೆಂದರೆ, ಖರ್ಚು ಮಾಡದೆ ಓದುವ ಚಟ. ನಾವು ಕರ್ನಾಟಕಸ್ಥರು ಮುಂದುವರಿದಿರುವೆವೆಂದು ಅಭಿಮಾನ ಪಡುವ ಈಗಿನ ಕಾಲದಲ್ಲಿ ಯಾವತ್ತೂ ಪತ್ರಿಕೆ-ಪುಸ್ತಕಗಳನ್ನು ಕೊಂಡುಕೊಳ್ಳುವೆವೆಂದು ಪ್ರತಿಜ್ಞೆ ಮಾಡಿದ ೪೦೦-೫೦೦ ಲಾಯಬ್ರರಿಗಳೂ ಜನರೂ ಹೊರಡಬಾರದೋ! ತದ್ವಿರುದ್ಧವಾಗಿ ಕರ್ನಾಟಕ ಸಂಘಗಳೂ ಸಂಸ್ಥೆಗಳೂ ಕೂಡ ಕನ್ನಡ ಪತ್ರಗಳನ್ನೂ ಪುಸ್ತಕಗಳನ್ನೂ ಭಿಕ್ಷೆ ಬೇಡುವದನ್ನು ನೋಡಿದರೆ, ಅವುಗಳ ಬಗ್ಗೆ ಅನುಕಂಪ ಹುಟ್ಟದೆ ಇರಲಾರದು! ಇಷ್ಟೇ ಅಲ್ಲ, ಕೊಂಡುಕೊಳ್ಳುತ್ತೇವೆಂದು ತಾಪಾಗಿ ಬಂದು, ಇಸಗೊಂಡು ಹೋದವರು ಸಹ ಹಣವನ್ನು ಮುಳುಗಿಸಿರುವದನ್ನು ನೋಡಿ ಸಾಕುಬೇಕಾಗಿಹೋಗಿದೆ.

**ವೃತ್ತಪತ್ರಗಳ ಮೂಲಕ ವಾಙ್ಮಯ ಮತ್ತು ಕರ್ನಾಟಕದ ಅಭಿಮಾನದ ಪ್ರಚಾರ:— ಪತ್ರಿಕೆಗಳು ಹೊಸ ಶಬ್ದಗಳನ್ನು ಹುಟ್ಟಿಸುವ ಟಂಕಸಾಲೆಗಳು.** ಅಲ್ಲಿ ಅವುಗಳನ್ನು ಹುಟ್ಟಿಸಿ ಪರೀಕ್ಷಿಸಿ ಆ ಬಳಿಕ ಅವುಗಳನ್ನು ಮಾಸಪತ್ರಿಕೆಗೆ ತೆಗೆದುಕೊಳ್ಳತಕ್ಕದ್ದು. ಅಲ್ಲಿಯೂ ಅವು ದೃಢವಾಗಿ ನಿಂತ ಬಳಿಕ ಗ್ರಂಥಗಳಿಗೆ ಅವನ್ನು ಒಯ್ಯುವದು. ನಾನೇನೂ ಸಾಹಿತಿಯಲ್ಲ. ಅಂದರೆ ಅದು ನನ್ನ ಆಯುಷ್ಯದ ಮುಖ್ಯ ಗುರಿಯಲ್ಲ. ನಾನು ರೂಢಿಯಲ್ಲಿ ತಂದ ಹೊಸ ಮಾದರಿಯು ನನ್ನ ವಿಶಿಷ್ಟವಾದ ಗದ್ಯ ಶೈಲಿಯು ನನಗೆ ಕೂಡ ತಿಳಿಯದಂತೆ ತಾನಾಗಿಯೇ ಬೆಳೆದು ಬಂದುದು, ನಾನು ಕೃತ್ರಿಮವಾಗಿ ಹುಟ್ಟಿಸಿದುದು ಅಲ್ಲ. ಹೊಟ್ಟೆಯಿಂದ ಹೊರಸೂಸಿದ ಸಾಹಿತ್ಯವೇ ಸಾಹಿತ್ಯವೆಂದು ನನ್ನ ಮತ. ಕರ್ನಾಟಕತ್ವದಲ್ಲಿ ಕನ್ನಡ ಸಾಹಿತ್ಯಕ್ಕೆ— ಅದೇ ಸರ್ವಸ್ವವಲ್ಲದಿದ್ದರೂ— ಒಂದು ಪ್ರಮುಖ ಸ್ಥಾನವಿದೆ. ಭಾಷಾನ್ವಯ ಪ್ರಾಂತರಚನೆಗಂತೂ ಅದು ಬೆನ್ನೆಲುವು. ಹೊಸಗನ್ನಡದಲ್ಲಿ ಎಲ್ಲ ತರಹದ ಗ್ರಂಥಗಳು ಹುಟ್ಟಬೇಕೆಂದು ನನ್ನ ಆಕಾಂಕ್ಷೆ. ಆದ ಕಾರಣ ನಾನು ಸ್ವತಃ ಪ್ರತಿಯೊಂದು ದಿಶೆಯಲ್ಲಿಯೂ ಕೆಲವನ್ನು ಬರೆಯಬೇಕೆಂದು ಸಂಕಲ್ಪ ಮಾಡಿದ್ದೆ. ಸಾಮಾನ್ಯ ಜನರಿಗಾಗಿ **ಲಘುಪುಸ್ತಕಮಾಲೆ**ಯನ್ನು ಹೊರಡಿಸಿದೆ. ಮಧ್ಯಮತರಗತಿಯ ಜನರಿಗಾಗಿ ಮಧ್ಯಮತರಗತಿಯ ಗ್ರಂಥಮಾಲೆಯನ್ನು ತೆಗೆದೆ. ಮತ್ತು ಕನ್ನಡ ನುಡಿಗೆ ಮೂಲನಿಧಿಗಳಂತಿರುವ ಉದ್ಗ್ರಂಥಗಳನ್ನು ಬರೆದೆ, ಬರೆಯಿಸಿದೆ. ಉದ್ಗ್ರಂಥಗಳಿಗಾಗಿ ಕರ್ನಾಟಕ ಗ್ರಂಥಪ್ರಸಾರಕ ಮಂಡಳವನ್ನು ೧೯೦೮ರಲ್ಲಿ ಸ್ಥಾಪಿಸಿದೆ. ಅದು ಸಹಕಾರ ಸಂಘವು. ೫ ರೂಪಾಯಿಗಳದೊಂದು ಪಾಲು (ಶೇಅರು). ಆದರಲ್ಲಿ ೨೫೦, ೩೫೦ ಪುಟಗಳ ಉದ್ಗ್ರಂಥಗಳನ್ನು ಹೊರಡಿಸತಕ್ಕದ್ದು. ಅದನ್ನು ಪೋಷಿಸುವ ಭಾರವು ಸಾಹಿತ್ಯಾಭಿಮಾನಿಗಳಾದ ಧನಿಕರ ಮೇಲೆ. ಅವರು ಓದಲಿ ಬಿಡಲಿ, ಕನ್ನಡದ ಅಭಿಮಾನಕ್ಕಾಗಿ ಅದನ್ನು ತಕ್ಕೊಳ್ಳತಕ್ಕದ್ದು. ಇರಲಿ, ಈಗ ನಾನು ನನ್ನ ಜೀವನ ಸ್ಮೃತಿಗಳನ್ನು ಹೇಳಹೊರಟಿಲ್ಲ. ಕರ್ನಾಟಕತ್ವದ ಪ್ರಚಾರದ ಬಗ್ಗೆ ನನ್ನ ಕಲ್ಪನೆ ಏಸಿತ್ತೆಂಬದನ್ನು ಹೇಳಹೊರಟಿದ್ದೇನೆ. ಹಿಂದಕ್ಕೆ ೧೯೪೦ರಲ್ಲಿ ನನ್ನ ೬೦ ವರ್ಷಗಳ ಹುಟ್ಟು ಹಬ್ಬವು ಕರ್ನಾಟಕದಲ್ಲಿ ಆಚರಿಸಲ್ಪಟ್ಟಾಗ, ನಾನು ನನ್ನ ಜೀವನ ಸ್ಮೃತಿಗಳಲ್ಲಿ ಅವನ್ನು ಬರೆದೇ ಇರುವೆ. (ಅವುಗಳ ಪ್ರತಿ ತೀರಿವೆ.)

**ಶಾಂತೇಶ ವಾಚನಾಲಯದ ಸ್ಮೃತಿ** :— ಧಾರವಾಡದಲ್ಲಿ ಕರ್ನಾಟಕತ್ವದ ಜಾಗ್ರುತಿ ನಡೆಸಿದ ಮುಖ್ಯ ಸಂಸ್ಥೆಯೆಂದರೆ ಶಾಂತಕವಿಗಳ ಸ್ಮಾರಕವೆಂದು ಹೊರಟಿರುವ ಶಾಂತೇಶ ವಾಚನಾಲಯವು. ಮೊದಲಿಗೆ ಶ್ರೀ. ಹೊಸೂರು ಮುಂತಾದವರು ಅದನ್ನು ತಮ್ಮ ದುಡಿತದಿಂದ ನಡಿಸಿದರು. ನಾನು ಅವರಿಗೆ ಹಣದ ಸಹಾಯ ಸ್ವಲ್ಪ ಮಾಡಿದೆ. ಜಯಕರ್ನಾಟಕ, ಸ್ವಧರ್ಮ ಮುಂತಾದ ಮಾಸಪತ್ರಿಕೆಗಳೂ ಕರ್ನಾಟಕತ್ವದ ವಿಚಾರಕ್ಕೆ ಮೀಸಲಾಗಿದ್ದವು. ಶಾಂತೇಶ ವಾಚನಾಲಯವು ಉತ್ಸವಗಳು ನಾಡಹಬ್ಬ ಮುಂತಾದವುಗಳ ಮೂಲಕ ಆ ಕಾರ್ಯ ಮಾಡುತ್ತಿತ್ತು. ಅದು ಒಂದು ಧರ್ಮಾರ್ಥ ವಾಚನಾಲಯವನ್ನೂ ನಡೆಸುತ್ತಿತ್ತು. ಅದಕ್ಕೆ ನಾನು ಅನೇಕ ವರ್ಷಗಳ ವರೆಗೆ ಅಧ್ಯಕ್ಷನಾಗಿದ್ದೆ. ಇತ್ತೀಚೆಗೆ ಕರ್ನಾಟಕತ್ವದ ಪ್ರಚಾರಕ್ಕಾಗಿಯೇ ಹೊರಟ ಆ ಸಂಸ್ಥೆಯು ಕರ್ನಾಟಕ ವಿದ್ಯಾವರ್ಧಕ ಸಂಘವೆಂಬ ಕೇವಲ ವಾಙ್ಮಯ ಸಂಸ್ಥೆಯಲ್ಲಿ ಅಡಕವಾಗಿ ಹೋಯಿತು! ಕರ್ನಾಟಕ ವಿದ್ಯಾವರ್ಧಕ ಸಂಘವು ಸರಕಾರದಿಂದ ಹಣದ ಆಶ್ರಯವನ್ನು ಪಡೆದ ಸಂಸ್ಥೆಯಾದ್ದರಿಂದ ಅದರ ಮುಖಾಂತರವಾಗಿ ಕರ್ನಾಟಕತ್ವದ ವಿವಿಧ ಚಳವಳಿಗಳನ್ನು (ಏಕೆಂದರೆ ಇವುಗಳಲ್ಲಿ ಸರಕಾರೀ ವಿರುದ್ಧ ಚಳವಳಿಗಳಿದ್ದವು.) ಮಾಡಲಿಕ್ಕೆ ಬರುವಂತಿದ್ದಿಲ್ಲ. ಮುಂದೆ ಕನ್ನಡಿಗರ ಸಂಘ ಎಂಬುದನ್ನು ತೆಗೆದೆವು. ಅದಕ್ಕೂ ನಾನೇ ಅಧ್ಯಕ್ಷನು. ವಿದ್ಯಾರಣ್ಯ ಉತ್ಸವ, ನಾಡಹಬ್ಬ, ವಿಜಯನಗರ ಉತ್ಸವ, ಬಸವೇಶ್ವರ, ನಿಜಗುಣ ಶಿವಯೋಗಿಗಳ ಉತ್ಸವ ಇವೇ ಮುಂತಾದವುಗಳು ಕರ್ನಾಟಕತ್ವವನ್ನು ಬಲಪಡಿಸುವದಕ್ಕೆ ಕೈಕೊಂಡ ಉತ್ಸವಗಳು. ಎಲ್ಲದರಲ್ಲಿ ನಾನು ಭಾಗ ತೆಗೆದುಕೊಂಡಿರುವೆ. ಹುಬ್ಬಳ್ಳಿ, ಗದಗ, ಹಾವೇರಿ, ಬೆಂಗಳೂರುಗಳ ಶ್ರೀ ಬಸವೇಶ್ವರ ಉತ್ಸವಗಳಿಗೆ ಆಮಂತ್ರಿತನಾಗಿ ಹೋದಾಗ ಕರ್ನಾಟಕತ್ವದ ವಿಚಾರ ಹರಡಿದೆ. ೧೯೩೬ರಲ್ಲಿ (೨೪-೨-೧೯೩೬) ಕಡೂರ ಹತ್ತರ ೭ ದಿವಸ ನಡೆದ, ನಿಜಗುಣ ಶಿವಯೋಗಿಗಳ ಸ್ಮಾರಕದ ಸಾಹಿತ್ಯ ಸುಗ್ಗಿಯ ಉದ್ಘಾಟನ ಸಮಾರಂಭವನ್ನು ನೆರವೇರಿಸಲಿಕ್ಕೆ ಹೋಗಿ, ಏಳೂ ದಿವಸ ಅಲ್ಲಿ ಇದ್ದು, ಕರ್ನಾಟಕತ್ವದ ಪ್ರಚಾರ ಮಾಡಿದೆ. ಹಾಸನದಲ್ಲಿ ಕುಮಾರವ್ಯಾಸರ ಸ್ಮಾರಕೋತ್ಸವ ಜರುಗಿಸಿದೆ. ಲಕ್ಷ್ಮೇಶ್ವರದಲ್ಲಿ ಪಂಪೋತ್ಸವವನ್ನು ಪ್ರಾರಂಭಿಸಿದೆ.

ಆ ಬಳಿಕ **ಕನ್ನಡಿಗರ** ಸಂಘವೆಂಬುದು ಹೊರಟಿತು. ಅದೂ ಕರ್ನಾಟಕತ್ವದ ಮುಖ್ಯ ಚಟುವಟಿಕೆಗಳನ್ನು ಕೈಕೊಂಡ ಸಂಸ್ಥೆ. ಅದಕ್ಕೆ ನಾನು ಅಧ್ಯಕ್ಷನು. ಅದು ಕರ್ನಾಟಕಕ್ಕೆ ಧಕ್ಕೆ ತಗಲುವ ಪ್ರಸಂಗಗಳಲ್ಲಿ ಸಂರಕ್ಷಿಸುವ ಕಾರ್ಯ ಮಾಡುತ್ತಿತ್ತು.

ಅಖಂಡ ಕರ್ನಾಟಕವೇ ನನ್ನ ಆಯುಷ್ಯದ ಮುಖ್ಯ ಧ್ಯೇಯ. ಯಾವ ಚಟುವಟಿಕೆಯನ್ನು ಕೈಕೊಂಡರೂ ಅದೊಂದನ್ನು ಸಾಧಿಸುವದಕ್ಕಾಗಿಯೇ. ಈ ವಿಷಯದಲ್ಲಿ ನನ್ನ ವಿಚಾರಗಳು ಏನಿರುವವೆಂಬದನ್ನು ಹೇಳುವದಕ್ಕೋಸ್ಕರ ನಾನು ಶ್ರೀ. ಬೇಂದ್ರೆಯವರಿಗೆ ತಾ. ೨೯—೩—೩೮ನೆಯ ಇಸವಿ ದಿವಸ ಕೊಟ್ಟ ಟಿಪ್ಪಣಿಯಲ್ಲಿಯ ಅವತರಣಿಕೆ ಇಲ್ಲಿ ಕೊಡುವೆ. “ಕರ್ನಾಟಕದ ಸಾಂಸ್ಕೃತಿಕ ಮತ್ತು ರಾಜಕೀಯ ಏಕೀಕರಣಗಳನ್ನು ಸಾಧಿಸುವದಕ್ಕೆ ಉಪಯೋಗಿಸುವ ಸಂಸ್ಥೆಗಳು ಎರಡು. ಇವೆರಡೂ ಸಂಸ್ಥೆಗಳನ್ನು ಹಾಗೆ ಉಪಯೋಗಿಸಿಕೊಳ್ಳಬೇಕೆಂದು ನನ್ನ ಇಚ್ಛೆ. ರಾಜಕೀಯ ಏಕೀಕರಣ ಚಳವಳಿಯು ಇತ್ತ ನಡೆಯಬೇಕು; ಅದಕ್ಕೆ ಪಕ್ವಕಾಲ ಬರುವಷ್ಟರಲ್ಲಿ ಸಾಂಸ್ಕೃತಿಕ ಏಕೀಕರಣವು ಪರಿಷತ್ತಿನ ಮುಖಾಂತರವಾಗಿ ಪಕ್ವವಾಗಬೇಕು, ಎಂಬುದು ನನ್ನ ಧೋರಣ. ಆ ದೃಷ್ಟಿಯಿಂದ ಕರ್ನಾಟಕ ವಿಶ್ವವಿದ್ಯಾಲಯವು ಸಾಂಸ್ಕೃತಿಕ ಧ್ಯೇಯ. ರಾಜಕೀಯ ಏಕೀಕರಣವು ರಾಜಕೀಯ ಧ್ಯೇಯ. ಎರಡೂ ಅರ್ಥಾತ್, ಧ್ಯೇಯಗಳೇ. ಇವೆರಡೂ ಧ್ಯೇಯಗಳನ್ನು ಒಟ್ಟುಗೂಡಿಸುವದಕ್ಕೆ ಉಪಯೋಗವಾಗುವ ಚಳವಳಿಯೆಂದರೆ, ಲಾಯಬ್ರರಿಗಳ ಸ್ಥಾಪನೆಯ ಚಳವಳಿಯು. ಅದು ಅವುಗಳನ್ನು ಜೋಡಿಸುವ ಕೊಂಡಿಯು. ಇದು ನನ್ನ ಮುಖ್ಯ ಧೋರಣ.”

ಕರ್ನಾಟಕ ಸಾಹಿತ್ಯಪರಿಷತ್ತಿನಲ್ಲಿಯೂ ನನ್ನ ಆಟ ಸಾಗಲಿಲ್ಲ. ಕಾಂಗ್ರೆಸ್ಸಿನಲ್ಲಿಯೂ ಸಾಗಲಿಲ್ಲ. ಆದ ಕಾರಣ ಅದು ಮೊನ್ನೆ ಮೊನ್ನಿನ ವರೆಗೆ ಕನಸಾಗಿಯೇ ಉಳಿದಿತ್ತು.

ಕರ್ನಾಟಕ ಸಾಹಿತ್ಯಪರಿಷತ್ತಿನ ಮುಖಾಂತರವಾಗಿ ನಡೆದ ಕೆಲಸ ಅಮೋಘವಾಗಿದೆ. ಅಥವಾ ಅದರ ಪ್ರಯತ್ನದಿಂದಲೇ ಕರ್ನಾಟಕದಲ್ಲಿ ಭಾಷಾಭಿಮಾನದ ಜಾಗ್ರತಿಯು ಬಲುಮಟ್ಟಿಗೆ ಹರಡಿತೆಂಬುದು ನಿರ್ವಿವಾದವಿದೆ. ಮೊದ

ಮೊದಲಿನ ಒಂದೆರಡು ಪೀಳಿಗೆಯವರಂತೂ ಅಖಂಡ ಕರ್ನಾಟಕದ ಆವಶ್ಯಕತೆಯನ್ನು ಸಂಪೂರ್ಣವಾಗಿ ಗ್ರಹಿಸಿದ್ದರು. ತರುಣ ಪದವೀಧರರೂ ಸಂಪೂರ್ಣ ಸಹಾನುಭೂತಿಯನ್ನು ನನಗೆ ತೋರಿಸುತ್ತಿದ್ದರು. ೧೯೨೦ರಲ್ಲಿ ನಾನು ಅಸಹಕಾರ ಚಳವಳಿಯಲ್ಲಿ ಧುಮುಕಿದಾಗ ಮೈಸೂರಿನಲ್ಲಿಯೂ ಜಾಗ್ರತಿಯಾಗಿತ್ತು. ಶ್ರೀ. ನಿಟ್ಟೂರ ಶ್ರೀನಿವಾಸರಾವ, ಶ್ರೀ. ಟಿ. ಟಿ. ಶರ್ಮಾ, ಶ್ರೀ. ಸಂಪದ್ಗಿರಿರಾವ ಇವರೇ ಮುಂತಾದವರೆಲ್ಲರೂ ಅಖಂಡ ಕರ್ನಾಟಕಕ್ಕಾಗಿ ಸಂಪೂರ್ಣ ಸಹಾನುಭೂತಿ ತೋರಿಸಿದವರು. ಪತ್ರಿಕಾಕರ್ತರಲ್ಲಿ ಅನೇಕರಲ್ಲಿ ಅನುಕೂಲರು. ಹೀಗೆ ಮೈಸೂರಿನಲ್ಲಿ ಜಾಗ್ರತಿಯಾಗಲಿಕ್ಕೆ ಅನುಕೂಲ ವಾತಾವರಣವು ನಿರ್ಮಿತವಾಗಿತ್ತು. ಆದ ಕಾರಣ ಸಾಹಿತ್ಯ ಪರಿಷತ್ತಿನ ಮುಖಾಂತರವಾಗಿ ಅಖಂಡ ಕರ್ನಾಟಕ ನಿರ್ಮಾಣದ ಕಾರ್ಯವನ್ನು ಬಲುಮಟ್ಟಿಗೆ ಹಗುರುಮಾಡಿಕೊಳ್ಳಬೇಕೆಂದು ಹವಣಿಸಿದೆ.

ಗಡಿನಾಡಿನಲ್ಲಿ ಅಂದರೆ, ಒಳಗಡಿನಾಡಿನಲ್ಲಿ ಮತ್ತು ಹೊರಗಡಿನಾಡಿನಲ್ಲಿ, ಎಲ್ಲ ದಿಕ್ಕಿನಲ್ಲಿ, ದುರ್ದೈವಿಯಾದ ಮತ್ತು ತುಂಡಾದ ಕರ್ನಾಟಕದ ಮೇಲೆ ಪರಭಾಷೆಯ ದಾಳಿಗಳು! ಕಾಂಗ್ರೆಸ್ಸಿನಲ್ಲಿ ಭಾಷಾನ್ವಯ ಪ್ರಾಂತಗಳ ರಚನೆಯ ತತ್ವವು ಸ್ವೀಕರಿಸಲ್ಪಟ್ಟ ಮೇಲಂತೂ ಈ ದಾಳಿಗಳು ಮತ್ತಿಷ್ಟು ಜೋರಿನಿಂದ ನಡೆದವು. ಅಖಂಡ ಕರ್ನಾಟಕವು ಸರಕಾರದಿಂದ ನಿರ್ಮಿತವಾಗುವದರೊಳಗೇನೇ ಆದಷ್ಟು ಗಡಿನಾಡುಗಳನ್ನು ಆಕ್ರಮಿಸಬೇಕೆಂದು ವಿರೋಧಿಗಳ ಧೋರಣ. ಅದನ್ನು ಆದಷ್ಟುಮಟ್ಟಿಗೆ ಆಗಗೊಡದಿರುವದು ನಮ್ಮ ಧೋರಣವಿರಬೇಕಾಗಿತ್ತು. ಆದ ಕಾರಣವೇ ನಾನು ಗಡಿನಾಡುಗಳಲ್ಲಿ ಭಾಷಾಭಿಮಾನವನ್ನು ಹುಟ್ಟಿಸುವ ಪ್ರಶ್ನೆಗೆ ಅತ್ಯಂತ ಮಹತ್ವ ಕೊಟ್ಟೆ. ಆ ಅಭಿಮಾನವನ್ನು ಹುಟ್ಟಿಸುವ ಕಾರ್ಯವು ಸಾಹಿತ್ಯಪರಿಷತ್ತಿನ ಮುಖಾಂತರವಾಗಿಯೇ ಸಾಧ್ಯವಾಗಬಹುದಾಗಿತ್ತು. ಅನ್ಯರ ಆಡಳಿತೆಯಲ್ಲಿರುವ ಪ್ರಾಮುಖ್ಯವಾಗಿ ಕನ್ನಡ ಪ್ರದೇಶಗಳಿದ್ದ ಕನ್ನಡಿಗರಿಗೆ ಕೈಕೊಡುವದು ಪರಿಷತ್ತಿನ ಮುಖ್ಯ ಕರ್ತವ್ಯವಾಗಿತ್ತು. ಅಲ್ಲಿಗೆ ಹೋಗಿ ಕನ್ನಡ ಭಾಷಾಭಿಮಾನವನ್ನು ಹುಟ್ಟಿಸುವದಕ್ಕೂ ವಾಚನಾಲಯುಗಳನ್ನು ಸ್ಥಾಪಿಸುವದಕ್ಕೂ ಕನ್ನಡ ಶಾಲೆಗಳನ್ನು ತೆರೆಯುವದಕ್ಕೂ ಪರಿಷತ್ತು ಪ್ರಯತ್ನಿಸಬೇಕೆಂದು ಬಹಳ ಆಗ್ರಹಪಟ್ಟೆ. ಮಂಗಳೂರ ಜಿಲ್ಲೆಯಲ್ಲಿ ಮತ್ತು ಮದ್ರಾಸಿನಲ್ಲಿ ಶ್ರೀ. ಕಡೇಕಾರ ರಾಜಗೋಪಾಲಕೃಷ್ಣರಾವ, ಶ್ರೀ. ಹುರಳಿ

ಭೀಮರಾಯರೂ ಶ್ರೀ. ಯು. ರಾಮರಾಯರೂ ಶ್ರೀ. ಬೆನಗಲ ರಾಮರಾಯರೂ ಮೊದಲಿನಿಂದಲೇ ಕನ್ನಡದ ಕಟ್ಟಾಭಿಮಾನಿಗಳಾಗಿ ಕೆಲಸ ಮಾಡುತ್ತಲೇ ಇದ್ದರು.

ಇನ್ನು ನಾನು ಸ್ವತಃ ಅಖಂಡ ಕರ್ನಾಟಕ ನಿರ್ಮಾಣಕ್ಕೆ ಅತಿ ಮುಖ್ಯ ವಾದ ಅವಶ್ಯವಿರುವ ಕಾರ್ಯವೆಂದರೆ, ಹರಿದು ಹಂಚಿಹೋದ ಕನ್ನಡದ ಭಾಗಗಳನ್ನು ಒಂದೆಡೆಗೆ ತರುವದಕ್ಕೆ ಯಾವ ಬಗೆಯ ಪ್ರಯತ್ನಗಳನ್ನು ಮಾಡಿದೆನೆಂಬದನ್ನಷ್ಟೇ ಹೇಳುವೆನು.

**ಅಖಿಲ ಕರ್ನಾಟಕ ಗ್ರಂಥಕರ್ತರ ಸಮ್ಮೇಲನ** (೧೯೦೭-೧೯೦೮):— ನಾನು ಸಾಹಿತ್ಯ ಕ್ಷೇತ್ರದಲ್ಲಿ ಕಾಲಿಟ್ಟ ಕೂಡಲೇ ನನಗೆ ಬಂದ ಮೊದಲನೆಯ ಅನುಭವವೆಂದರೆ— ಉತ್ತರ ಕರ್ನಾಟಕ, ಮೈಸೂರು, ಮಂಗ-ಳೂರು, ಹೈದರಾಬಾದ ಮುಂತಾದ ಭಾಗಗಳಲ್ಲಿರುವ ಕನ್ನಡದಲ್ಲಿ ಏಕರೂಪತೆ ಇಲ್ಲದಿರುವದು. ಆಗ ನನಗೆ ತೀರ ಹೊಸದೊಂದು ವಿಚಾರ ಜಗ್ಗನೆ ಹೊಳೆ ಯಿತು! ಅದೇನೆಂದರೆ, ಕರ್ನಾಟಕದ ಎಲ್ಲ ಭಾಗಗಳ ಭಾಷೆಯಲ್ಲಿ ಏಕ ರೂಪತೆ ಉಂಟಾಗದೆ ಸಾಹಿತ್ಯದ ಉದ್ಧಾರವಾಗದೆಂಬ ಮಾತು. ಮತ್ತು ಇವೆಲ್ಲ ಭಾಗಗಳ ಕನ್ನಡ ಜನತೆಯಲ್ಲಿ ಪರಸ್ಪರ ಪ್ರೀತಿ-ವಿಶ್ವಾಸಗಳು ಹುಟ್ಟ ದಿದ್ದರೆ ಅಖಂಡ ಕರ್ನಾಟಕದ ನಿರ್ಮಾಣವಾಗುವ ಬಗೆ ಹೇಗೆ? ಎಂಬ ಮಾತು! ಆದ ಕಾರಣ ಇವೆಲ್ಲ ಭಾಗಗಳನ್ನು ಒಂದುಗೂಡಿಸುವದಕ್ಕೆ ಪ್ರಥಮ ಹೆಜ್ಜೆಯೆಂದರೆ, ಅಖಿಲ ಕರ್ನಾಟಕ ಗ್ರಂಥಕರ್ತರ ಸಮ್ಮೇಲನ ಕರೆಯುವದು. ನಿಜವಾಗಿ ಹೇಳಬೇಕಾದರೆ, ಆಗ ಆಯಾ ಭಾಗಗಳ ಮುಖಂಡರಿಗೆ ಒಬ್ಬರಿ ಗೊಬ್ಬರ ಪರಿಚಯು ಏನೂ ಇದ್ದಿಲ್ಲ. ಪ್ರೀತಿ-ವಿಶ್ವಾಸಗಳಂತೂ ಒತ್ತಟ್ಟಿಗೆ ಉಳಿಯಿತು. ತಟ್ಟನೆ, ೧೯೦೭ರಲ್ಲಿ ಅಖಿಲ ಕರ್ನಾಟಕ ಗ್ರಂಥಕರ್ತರ ಸಮ್ಮೇ ಲನ ಹೂಡಿದೆ. ಕನಿಷ್ಠ, ಗ್ರಂಥಕರ್ತರು ಒತ್ತಟ್ಟಿಗೆ ಬಂದರೂ ಸಾಕೆಂದು ನನ್ನ ವಿಚಾರ. ಕರ್ನಾಟಕತ್ವದ ಈ ನನ್ನ ಕಲ್ಪನೆಯಲ್ಲಿ ನನ್ನ ಜೊತೆಗೆ ನಿಂತು ಕೆಲಸ ಮಾಡಿದವರೆಂದರೆ, ಶ್ರೀ. ನರಗುಂದಕರ ರಾಮರಾಯರು. ಶ್ರೀ. ಎಸ್. ಜಿ. ನರಸಿಂಹಾಚಾರ್ಯರು ಮೊದಲನೆಯ ಸಮ್ಮೇಲನಕ್ಕೆ ಅಧ್ಯ ಕ್ಷರು. ಮರುವರ್ಷ ೧೯೦೮ರಲ್ಲಿ ಪುನಃ ಇದೇ ಊರಲ್ಲಿ ಅಂದರೆ, ಧಾರವಾಡದಲ್ಲಿ ಅದನ್ನು ಕೂಡಿಸಿದೆವು. ಅಂಥ ಸಮ್ಮೇಲನಗಳು ವಿವಿಧ ಭಾಗಗಳಲ್ಲಿ ಆಗ

ಬೇಕೆಂದು ನನ್ನ ಬಲವತ್ತರ ಇಚ್ಛೆ. ಆದರೆ ಆಗ ಅದು ನೆರವೇರಲಿಲ್ಲ. ಮುಂದೆ ನೆರವೇರಿತು.

**ಕರ್ನಾಟಕ ಸಾಹಿತ್ಯಪರಿಷತ್ತಿನ ಸ್ಥಾಪನೆ**:—ಕರ್ನಾಟಕ ಸಾಹಿತ್ಯ ಪರಿಷತ್ತಿನ **ಮೂಲ ಸಂಸ್ಥಾಪಕನು ನಾನು— ನಾನೊಬ್ಬನೇ** ಎಂದು ಹೆಮ್ಮೆಯಿಂದ ಹೇಳಬಯಸುತ್ತೇನೆ. ಏಕೆಂದರೆ, ಅದನ್ನು ಸ್ಥಾಪಿಸುವದಕ್ಕೆ ೮–೧೦ ವರ್ಷ ನಾನೊಬ್ಬನೇ ಎಡೆಬಿಡದೆ ಸ್ವಂತ ಖರ್ಚಿನಿಂದ ಬೆಂಗಳೂರು ಮೈಸೂರುಗಳಿಗೆ ಎಡತಾಕಿ ದುಡಿದಿದ್ದೇನೆ. ನನ್ನ ಹೊರತು ಯಾರೊಬ್ಬರೂ ದುಡಿದಿಲ್ಲ. ಅಖಿಲ ಕರ್ನಾಟಕ ಗ್ರಂಥಕರ್ತರ ಸಮ್ಮೇಲನವನ್ನು ಧಾರವಾಡ ದಲ್ಲಿ ಎರಡು ಸಲ ಕೂಡಿಸಿ, ಮೂರನೆಯದನ್ನು ಬೆಂಗಳೂರಲ್ಲಿ ಕೂಡಿಸಲಿಕ್ಕೆ ಬಹಳ ಸಾಹಸಪಟ್ಟೆ. ನಿಜವಾಗಿ, ಶ್ರೀ. ಕೈಕಿಣಿ, ಶ್ರೀ. ದೇಶಪಾಂಡೆ ಮುಂತಾದವ ರಿಂದ ೧೮೯೦ರಲ್ಲಿ ಸ್ಥಾಪಿತವಾದ ಕರ್ನಾಟಕ ವಿದ್ಯಾವರ್ಧಕ ಸಂಘವೇ ಎಲ್ಲಕ್ಕೂ ಹಳೆಯದು. ಮೈಸೂರಿನ ಅರಸರು, ಕರ್ನಾಟಕದ ಅಭಿಮಾನದಿಂದ ಆ ಸಂಸ್ಥೆಗೆ ವಿಪುಲ ಹಣದ ಸಹಾಯ ಮಾಡಿದ ಸಂಸ್ಥೆ. ಆದರೂ ನಾನು ಬಲು ದೂರದ ವರೆಗೆ ವಿಚಾರ ಮಾಡಿ, ಬೆಂಗಳೂರಿನಲ್ಲಿಯೇ ಕರ್ನಾಟಕ ಕೇಂದ್ರ ಸಂಸ್ಥೆಯನ್ನು ಸ್ಥಾಪಿಸುವ ದೃಢನಿಶ್ಚಯ ಮಾಡಿದೆ. ಏಕೆಂದರೆ, ಅಖಂಡ ಕರ್ನಾ ಟಕದ ನಿರ್ಮಾಣಕ್ಕೆ ಆಗಿನ ಮೈಸೂರಸಂಸ್ಥಾನ ಬಿಟ್ಟರೆ ನಮಗೆ ಗತಿಯಿದ್ದಿಲ್ಲ. ನಿಜ ವಾಗಿ, ಇದೇನೊ ತಿಳಿಯುದಷ್ಟು ಕಠಿಣ ಇದ್ದಿಲ್ಲ. ಕರ್ನಾಟಕತ್ವದ ಭಾವನೆ ಕಿಂಚಿ ತ್ತಾದರೂ ಉದಯಿಸಿದವರಲ್ಲಿ ಇದರ ಆವಶ್ಯಕತೆ ಒಮ್ಮೆಲೆ ಹೊಳೆಯುವಂಥದು ಇತ್ತು. ಆಗ ಹೊಳೆಯಲಿಲ್ಲ! ಅದಕ್ಕೆ ಆ ಕಾಲಕ್ಕೆ ಕೆಲವು ಕಾರಣಗಳೂ ಇದ್ದವು. ಆದರೆ ಈಗಿನ ಕಾಲದಲ್ಲಿ ಕೂಡ ಮೈಸೂರಿನಲ್ಲಿಯ ಹಲಕೆಲವು ಮುಖಂಡರೆಂದೆನಿಸಿಕೊಳ್ಳುವವರಿಗೆ ತಿಳಿಯಲಿಲ್ಲ ಎಂಬುದನ್ನು ಕೇಳಿ, ನನಗೆ ಅತ್ಯಾ ಶ್ಚರ್ಯವಾಯಿತು. ಅವರು ಆ ಸಂಕುಚಿತ ಮೈಸೂರ ಭಾವನೆಯನ್ನು ಯಾವ ದೃಷ್ಟಿಯಿಂದಲೂ ಸಮರ್ಥಿಸಿಕೊಳ್ಳಲಾರರು. ಇರಲಿ, ಆ ಕಾಲಕ್ಕೆ ಇತ್ತ ಕಡೆ ಯವರಿಗೆ ಮೈಸೂರಿನೊಡನೆ ಬಂಧುಭಾವವನ್ನು ಬೆಳೆಯಿಸುವ ಆವಶ್ಯಕತೆ ಸ್ಪಷ್ಟವಾಗಿ ತೋರಿದ್ದರೂ ಅಲ್ಲಿಯ ಅನೇಕ ಅಹಂಮನ್ಯ ಮುಖಂಡರಿಗೆ ಅದು ಎಷ್ಟೋ ವರ್ಷಗಳ ವರೆಗೆ ಹೊಳೆಯಲಿಲ್ಲ. ನಾವು ಹೆಚ್ಚಿನವರೆಂಬ ಭಾವನೆ ಹೋಗಲಿಲ್ಲ; ಇನ್ನೂ ಹೋದಂತಿಲ್ಲ. ಆದರೆ ಎಚ್ಚರ! ಇನ್ನು ಅದನ್ನು

ಮಿಕ್ಕವರು ಸಹಿಸುವದು ಶಕ್ಯವೇ ಇಲ್ಲ. ಮೈಸೂರ ಪ್ರಾಂತವನ್ನು ಬಿಟ್ಟರೆ ನಮಗೆ ಗತಿಯಿದ್ದಿಲ್ಲ ಎಂಬುದು ಎಷ್ಟು ಸತ್ಯವೋ ಅಷ್ಟೇ ಮಿಕ್ಕ ಕನ್ನಡಿಗರನ್ನು ಬಿಟ್ಟರೆ ಮೈಸೂರಿನವರಿಗೆ ಗತಿಯಿದ್ದಿಲ್ಲ ಎಂಬುದು ಅವರಿಗೆ ತೀವ್ರ ತಿಳಿಯಬೇಕಾಗಿತ್ತು! ಕೇಂದ್ರ ಸರಕಾರಕ್ಕೆ ಅದು ತಿಳಿಯಿತು. ಇರಲಿ.

ಬೆಂಗಳೂರಿನಲ್ಲಿ ಮೂರನೆಯ ಸಮ್ಮೇಲನವನ್ನು ಕೂಡಿಸಲಿಕ್ಕೆ ಬಹಳ ಸಾಹಸಪಟ್ಟೆನೆಂದು ಹೇಳಿದೆನಷ್ಟೇ! ಆಗ ನನ್ನದೊಂದು ಭ್ರಮ! ಏನೆಂದರೆ, ಮಹಾರಾಷ್ಟ್ರಕ್ಕೆ ಹೇಗೆ ಪುಣೆ ಪಟ್ಟಣವು ಸರ್ವ ಸಾರ್ವಜನಿಕ ಸಂಸ್ಥೆಗಳ ಕೇಂದ್ರವೆಂದು ತಿಳಿದಿದ್ದೆನೋ ಹಾಗೆ ಬೆಂಗಳೂರ ಪಟ್ಟಣವು ಕರ್ನಾಟಕಕ್ಕೆ ಕೇಂದ್ರವೆಂದು ನನ್ನ ಭಾವನೆ ಇತ್ತು. ಆದರೆ ಅಲ್ಲಿ ಹೋಗಿ ನೋಡುತ್ತೇನೆ, ಅಲ್ಲಿ ಹೇಳತಕ್ಕಂಥ ಒಂದೂ ಸಾರ್ವಜನಿಕ ಸಂಸ್ಥೆಯೂ ಇರಲಿಲ್ಲ! ವಾಙ್ಮಯ ವಿಷಯಕ ಸಂಸ್ಥೆಯು ಕೂಡಾ ಇರಲಿಲ್ಲ. ಆಗ ನನಗೆ ಆಶ್ಚರ್ಯವಾಯಿತು. ಆದರೆ ಮಾಡುವದೇನು? ಬೆಂಗಳೂರು ಮೈಸೂರುಗಳಿಗೆ ಪ್ರತಿವರುಷ ಸ್ವಂತ ಖರ್ಚಿನಿಂದ ಹೋದೆ. ನಾನು ನನ್ನ ವಾಙ್ಮಯ ಚಟುವಟಿಕೆಗಳನ್ನು ನನ್ನ ಸ್ವಂತ ಹಣದಿಂದ ಆದರೆ ಕರ್ನಾಟಕ ವಿದ್ಯಾವರ್ಧಕ ಸಂಘಕ್ಕೆ ಮಹತ್ವವನ್ನು ಕೊಟ್ಟು ಅದರ ಹೆಸರಿನಿಂದ ನಡೆಸಿದ್ದೆನು. ಈ ಮಧ್ಯದಲ್ಲಿ ನನ್ನ ಸ್ನೇಹಿತರಾದ ಮತ್ತು ಚಟುವಟಿಕೆಗಳನ್ನು ಮೈಸೂರಿನಲ್ಲಿ ನಡೆಸುತ್ತಿದ್ದ ಒಬ್ಬರೇ ಒಬ್ಬರಾದ ಶ್ರೀ. ಡಿ. ವ್ಹಿ. ಗುಂಡಪ್ಪನವರನ್ನು ಭೆಟ್ಟಿಯಾದೆ. ಒಂದು ಸಾರ್ವಜನಿಕ ಸಂಸ್ಥೆಯನ್ನು ಕೂಡಿಸಬೇಕೆಂದು ಗೊತ್ತುಮಾಡಿದೆವು. ಅವರು ಸಭೆಯನ್ನು ಕರೆದರು. ಆದರೆ ಜನರೇ ಬರಲಿಲ್ಲ. ಆದರೆ ಪುನಃ ಬೆನ್ನು ಹತ್ತಿದಾಗ ಅವರು ೧೯೧೩ರಲ್ಲಿ ಕರ್ನಾಟಕವೆಂಬ ಇಂಗ್ಲಿಷ ಪತ್ರಿಕೆಯನ್ನು ಹೊರಡಿಸಿದರು. ಆ ಪತ್ರಿಕೆಯ ಮೊದಲನೆಯ ವರ್ಷದ ಮೊದಲನೆಯ (೧-೪-೧೯೧೩) ಸಂಚಿಕೆಯಲ್ಲಿ ನಾನು Unification of Kannadigas ಕನ್ನಡಿಗರ ಏಕೀಕರಣ ಎಂಬ ಲೇಖ ಬರೆದೆ. ನಾನು ಸತತ ೩-೪ವರ್ಷ ಪ್ರಯತ್ನ ಮಾಡಿ ಬೇಸತ್ತು ಕೊನೆಗೆ ಅಲ್ಲಿಯ ಸರಕಾರದ ಮುಖಾಂತರ ಪ್ರಯತ್ನಮಾಡುವದನ್ನು ನಿಶ್ಚಯಿಸಿದೆ. ಡಾಯರೆಕ್ಟರರನ್ನು ಭೆಟ್ಟಿಯಾದೆ. ಆಗ ಯುರೋಪಿಯನ್ನರೊಬ್ಬರು ಡಾಯರೆಕ್ಟರರಿದ್ದರು. ಅವರಿಗೆ ಮಾತ್ರ ಸಮ್ಮೇಲನದ ಮಹತ್ವವು ಗೊತ್ತಾಯಿತು. ಸರಕಾರದ ವತಿಯಿಂದ ಸಮ್ಮೇಲನವನ್ನು ಕೂಡಿಸುತ್ತೇನೆಂದು

ಅವರಿಂದ ವಚನ ತೆಗೆದುಕೊಂಡು ಬಂದೆ. ನನ್ನ ದುರ್ದೈವದಿಂದ ಮುಂದೆ ಅವರು ಸತ್ತುಹೋದರು. ಅವರು ಸತ್ತುಹೋದದ್ದು ಕೂಡ ನನಗೆ ತೀವ್ರ ತಿಳಿಯಲಿಲ್ಲ. ಅಲ್ಲಿಯ ಡಾಯರೆಕ್ಟರರಿಗೆ ಪತ್ರಗಳನ್ನು ಬರೆದೆ. ಕೊನೆಗೆ ಸಿ. ಆರ್. ರೆಡ್ಡಿ ಎಂಬ ಡಾಯರೆಕ್ಟರರಿಂದ ಉತ್ತರ ಬಂದಿತು. ಅದರಲ್ಲಿ ಅವರು, ನನಗೆ ಸಮ್ಮೇಲನದ ಆವಶ್ಯಕತೆ ತೋರುವದಿಲ್ಲ ಎಂದು ನಿಕ್ಷುಣ್ಣವಾಗಿ ತಿಳಿಸಿಬಿಟ್ಟರು! ಸ್ವಸ್ಥ ಕುಳಿತುಕೊಂಡೆ. (ಅವರು ತೆಲುಗಿನವರೆಂದು ಮುಂದೆ ತಿಳಿಯಿತು.) ೧೯೧೫ನೆಯ ಮಾರ್ಚ ತಿಂಗಳಲ್ಲಿ ಸಂಘವನ್ನು ಸಂದರ್ಶಿಸ ಲಿಕ್ಕೆ ರಾ. ಬ. ಶಾಮರಾಯರು ಬಂದಿದ್ದರು. ಆಗ ಅವರು ಡಾಯರೆಕ್ಟರರು. ಅವರಿಂದ ಬೆಂಗಳೂರಿನಲ್ಲಿ ಸಮ್ಮೇಲನ ಕೂಡಿಸುವ ಅಭಿವಚನ ತಕ್ಕೊಂಡು ಅವರಂತೆ ಬರೆಯಿಸಿ ಇಟ್ಟುಕೊಂಡೆ. ಅದೇ ವರ್ಷ ನಾನು ತಿರುಪತಿಗೆ ಹೋದಾಗ ಕರ್ಪೂರ ಶ್ರೀನಿವಾಸರಾಯರನ್ನು ಕಂಡೆ. ಅವರು ಸಂಪೂರ್ಣವಾಗಿ ಸಹಾಯ ಮಾಡಿದರು. ಮತ್ತೆ ಬೆಂಗಳೂರಿಗೆ ಹೋದೆ. ದೊಡ್ಡ ದೊಡ್ಡ ಅಧಿ ಕಾರಸ್ಥರನ್ನು ಕಂಡು ಸಹಾನುಭೂತಿಯನ್ನು ದೊರಕಿಸಿದೆ. ಮುಖ್ಯತಃ ಶ್ರೀ. ನಂಜುಂಡಯ್ಯನವರ ಸಹಾನುಭೂತಿಯಿಂದಲೂ ಸರ್ ವಿಶ್ವೇಶ್ವರಯ್ಯ ನವರ ಹೆಸರಿನ ಬಲದಿಂದಲೂ ೧೯೧೫ರಲ್ಲಿ ಅಖಿಲ ಕರ್ನಾಟಕ ಸಾಹಿತ್ಯ ಸಮ್ಮೇಲನವು ಬೆಂಗಳೂರಿನಲ್ಲಿ ಕೂಡಿ ಕರ್ನಾಟಕ ಸಾಹಿತ್ಯ ಪರಿಷತ್ತು ಸ್ಥಾಪಿತವಾಯಿತು. ಬಿ. ಕೃಷ್ಣಪ್ಪನವರು ಅದಕ್ಕೆ ಮೊದಲನೆಯ ಕಾರ್ಯ ದರ್ಶಿಗಳು. ಒಳ್ಳೆಯ ಕರ್ನಾಟಕದ ಅಭಿಮಾನಿಗಳು. ಅವರು ಸರಕಾರೀ ನವಕರರಿದ್ದು ಸ್ವಾಭಾವಿಕವಾಗಿಯೇ ಅವರಿಗೆ ಸಾರ್ವಜನಿಕ ಕೆಲಸದ ಅನು ಭವ ಇದ್ದಿಲ್ಲವಾದ್ದರಿಂದ ಕಾರ್ಯದರ್ಶಿಯ ಮುಖ್ಯ ಕಾರ್ಯವನ್ನೆಲ್ಲ ನನಗೆ ಒಪ್ಪಿಸಿದರು. ನಾನು ಈ ಊರಿನಿಂದಲೇ ಅವರ ಹೆಸರಿನಲ್ಲಿ ಅವರ ಯಾವತ್ತೂ ಕೆಲಸ ನಡೆಸಿದೆ.

**ಕರ್ನಾಟಕ ಸಾಹಿತ್ಯಪರಿಷತ್ತಿಗೆ ರಾಜೀನಾಮೆ :—** ಕರ್ನಾಟಕ ಸಾಹಿತ್ಯಪರಿಷತ್ತಿನ ಮೂಲ ಸಂಸ್ಥಾಪಕನು ನಾನಾಗಿದ್ದರೂ ನನಗೆ ೧೯೩೮ ನೆಯ ಇಸವಿಯಲ್ಲಿ ಕರ್ನಾಟಕತ್ವದ ತತ್ವಕ್ಕಾಗಿ ರಾಜೀನಾಮೆ ಕೊಡುವ ಪ್ರಸಂಗ ಬಂದಿತು; ಕೊಟ್ಟೆ. ಆ ತತ್ವವು ಯಾವುದು? ಏಕೆ ರಾಜೀ ನಾಮೆ ಕೊಡುವ ಪ್ರಸಂಗ ಬಂದಿತು? ಎಂಬುದರ ಬಗ್ಗೆ ಎಲ್ಲ ವಿವರಗಳನ್ನು

ಈಗ ಹೇಳುವದು ಅಪ್ರಸ್ತುತ. ಏಕೆಂದರೆ, ಆ ಮಾತು ಹಳೆಯದಾಗಿ ಹಳಿಸಿ ಹೋಗಿದೆ. ಆದ ಕಾರಣ ಸ್ವಲ್ಪದರಲ್ಲಿ ಹೇಳಿ ಮುಗಿಸುವೆ.

ಮತಭೇದದ ಮುಖ್ಯ ಮಾತುಗಳು ಎರಡು. ಅವು ಇದರಡಿಗೆ ಕೊಟ್ಟ ನನ್ನ ಪತ್ರಗಳಿಂದಲೇ ಸ್ಪಷ್ಟವಾಗುವದು. ಸ್ವಲ್ಪದರಲ್ಲಿ ಹೀಗೆ (೧) ಪರಿಷತ್ತು, ಹೊರಗಿನವರಿಗೆ ಕೆಲಸ ಮಾಡಲಿಕ್ಕೆ ಏನೂ ಆಸ್ಪದ ಕೊಡದಿರುವದು. (೨) ಗಡಿನಾಡುಗಳ ಪ್ರಶ್ನೆ.

"೧೯೩೧ರಲ್ಲಿ ಬರೆದ ಪತ್ರದಭಾಗ—You know that since the very beginning of the Sahitya Parishat I am trying to bring about a unity of feelings between Mysore and other parts of Karnatak. Many of my proposals in managing committee concentrate mainly on two points. (1) The question of extending the franchise to outside members. (2) The propaganda work that is to be carried on in border and backward parts of Karnatak. You know, for the last 15 years, the outside members of the managing committee are co-operating with the members of Bangalore, though they have no scope to take actual part in the discussions of the managing committee. It is too much to expect under the present eircumstances of the Karnatak that the outsiders should attend the meetings at Bangalore. I brought many proposals, but failed........All this shows that there is no desire to get real co-operation from the members outside. They want to conduct the association themselves but in the name of Karnatak........ If they mcmbers there, do really desire the real

co-operation of the outside members, let they themselves make any proposal to meet the above object."

೨೦-೩-೧೯೩೪ನೆಯ ದಿವಸ ಬರೆದ ಪತ್ರದ ಭಾಗ— I fully know the merit and defects of each part. Yet, I have concentrated all these years mainly upon the merits of each part and have shut my ears to the defects as far as possible........I do want to suggest that the time is now come, when you should all think very seriously about this matter........Now I think it better to sound this last note of warning to the Parishad.

ಕರ್ನಾಟಕದ ನೆರೆ ಗಡಿನಾಡುಗಳಲ್ಲಿಯೂ ಹೊರ ಗಡಿನಾಡುಗಳಲ್ಲಿಯೂ ಅಂದರೆ, ಕನ್ನಡ ಪ್ರದೇಶಗಳಿದ್ದು ಮರಾಠಿ, ತೆಲುಗು, ತಮಿಳು, ಮಲೆಯಾಳಿ, ಮುಸಲ್ಮಾನಿ ಮುಂತಾದ ಇವುಗಳಿಂದ ಕರ್ನಾಟಕವನ್ನು ಎಲ್ಲ ಕಡೆಯಿಂದಲೂ ಸುತ್ತುವರಿದ ಮತ್ತು ಅವುಗಳ ಮೋಹಕ್ಕೆ ಒಳಗಾದ ಕರ್ನಾಟಕದ ಪ್ರದೇಶಗಳಲ್ಲಿ ಕನ್ನಡಿಗರಿಗೆ ಕೈಕೊಟ್ಟು ಅವರಲ್ಲಿ ಕನ್ನಡ ನುಡಿಯ ಅಭಿಮಾನವನ್ನು ಹುಟ್ಟಿಸಿ. ಕೈಬಿಟ್ಟು ಹೋಗುತ್ತಿರುವ ಆ ಪ್ರದೇಶಗಳನ್ನು ಉಳಿಸಿಕೊಳ್ಳುವದೂ ಪರಿಷತ್ತಿನ ಮುಖ್ಯ ಕರ್ತವ್ಯವಾಗಿತ್ತು. ಇದೇ ಉದ್ದೇಶದಿಂದ ೧೯೧೫ರಲ್ಲಿ ಆ ಪರಿಷತ್ತಿಗೆ ಕೇವಲ 'ಕನ್ನಡ ಪರಿಷತ್ತು' ಎಂದು ಹೆಸರಿಡದೆ ಮುಂಬರುವ ಕರ್ನಾಟಕ ರಾಜ್ಯದಲ್ಲಿ ಸೇರತಕ್ಕದ್ದಾದ ಪ್ರದೇಶಗಳೆಲ್ಲವನ್ನೂ ಒಳಕೊಳ್ಳುವ 'ಕರ್ನಾಟಕ'ವೆಂಬ ಹೆಸರಿಡಲ್ಪಟ್ಟಿತ್ತು. ಆಯಾ ಭಾಗಗಳಲ್ಲಿ ಕನ್ನಡ ವಾಚನಾಲಯುಗಳ ಮೂಲಕವೂ ಶಾಲೆಗಳನ್ನು ತೆಗೆಯುವದರ ಮೂಲಕವೂ ಭಾಷಣ, ಗ್ರಂಥಪ್ರಸಾರ, ಪತ್ರಿಕೆ ಮುಂತಾದವುಗಳ ಮೂಲಕ ಅವರಲ್ಲಿ ಕನ್ನಡದ ಬಗ್ಗೆ ಅಭಿಮಾನ ಹುಟ್ಟಿಸಿ, ಅವುಗಳನ್ನು ಉಳಿಸುವದು ನಮ್ಮ ಕರ್ತವ್ಯವಾಗಿತ್ತು. ಶ್ರೀ. ಬಿ. ಎಮ್. ಶ್ರೀಕಂಠಯ್ಯನವರು ಅದಕ್ಕೆ ಅಡ್ಡಬಂದರು. ಅನೇಕ ವರ್ಷಗಳ ವರೆಗೆ ಸಾವಧಾನದಿಂದ ಅವರ ಮನಸ್ಸು ಒಲಿಸುವದಕ್ಕೆ ಪ್ರಯತ್ನಿಸಿದೆ; ವ್ಯರ್ಥವಾಯಿತು. ಆಗ ರಾಜೀನಾಮೆ

ಕೊಟ್ಟೆ. ನಾನು ರಾಜೀನಾಮೆ ಕೊಟ್ಟ ಮರುವರ್ಷವೇ 'ಕರ್ನಾಟಕ'ವೆಂಬ ಹೆಸರೂ ಹಾರಿಸಲ್ಪಟ್ಟಿತು!

ಇನ್ನು ಬಿ. ಎಮ್. ಶ್ರೀಕಂಠಯ್ಯನವರು ಹೀಗೇಕೆ ವಿರೋಧಿಸಿದರು? ಎಂಬುದನ್ನು ವಾಚಕರು ಕೇಳುವದು ಸಹಜವಿದೆ. ಅವರು ಉದ್ದಾಮ ಸಾಹಿತಿಗಳು. ಕನ್ನಡದ ಬಗ್ಗೆ ಅವರಿಗಿದ್ದ ಉತ್ಕಟತ್ವವೂ ಎಷ್ಟಿತ್ತೆಂದರೆ, ಅದರ ಮೂಲಕ ಅವರು ಸಂಸ್ಕೃತದ ಮೇಲೆ ಹರಿಹಾಯಲಿಕ್ಕೂ ಹಿಂಜರಿಯಲಿಲ್ಲ. ಅವರೂ ಶ್ರೀ. ಮಾಸ್ತಿ ವೆಂಕಟೇಶ ಅಯ್ಯಂಗಾರರೂ ಕನ್ನಡದ ಬಗ್ಗೆ ಮಾಡಿದ ಸೇವೆಯನ್ನೂ, ಅಭಿಮಾನವನ್ನೂ ಕರ್ನಾಟಕವು ಎಂದೂ ಮರೆಯುವಂತಿಲ್ಲ. ಕರ್ನಾಟಕದಲ್ಲಿ ಸಾಹಿತ್ಯ ಪ್ರಚಾರಕ್ಕಾಗಿ ದುಡಿದವರಲ್ಲಿ ಅವರೇ ಅಗ್ರಗಣ್ಯರೆಂಬ ವಿಷಯದಲ್ಲಿ ಯಾರದೂ ಭಿನ್ನಾಭಿಪ್ರಾಯವಿರುವ ಕಾರಣವಿಲ್ಲ. ಕರ್ನಾಟಕವು ಒಂದಾಗಲೇ ಬೇಕೆಂಬುದು ಅವರಿಗೂ ಹೊಳೆದಿತ್ತು. ಅವರು ತಮ್ಮ ವೈಯಕ್ತಿಕ ಸ್ವಭಾವಗುಣದ ಮತ್ತು ಕಾಲ್ಪನಿಕ ಅಂಜಿಕೆಗಳ ಮೂಲಕ ನನಗೆ ವಿರುದ್ಧವಾದರು; ಇಷ್ಟೇ ಹೇಳಬಲ್ಲೆ. ಇದಕ್ಕಿಂತಲೂ ಈಗ ಹೆಚ್ಚಿಗೆ ಹೇಳಲಿಚ್ಛಿಸುವದಿಲ್ಲ. ನನಗೆ ಸೊಲ್ಲಾಪುರ, ಅಕ್ಕಲಕೋಟ, ಜತ್ತ, ಆಲೂರ, ಆದವಾನಿ, ರಾಯದುರ್ಗ, ಕಾಸರಗೋಡ, ಹೊಸೂರ, ನೀಲಗಿರಿ ಮುಂತಾದ ನಮ್ಮ ಅನೇಕ ಕನ್ನಡ ಪ್ರದೇಶಗಳು ಕೈಬಿಟ್ಟು ಹೋಗುತ್ತವಲ್ಲಾ ಎಂದು ನನ್ನ ಹೊಟ್ಟೆಯೊಳಗಿನ ಸಂಕಟ! ಸಾಹಿತ್ಯ ಪರಿಷತ್ತು ಆಗಿನಿಂದಲೂ ಪ್ರಯತ್ನ ಮಾಡಿದ್ದರೆ, ಇವೆಲ್ಲ ಪ್ರದೇಶಗಳನ್ನು ನಾವು ಸಹಜವಾಗಿಯೂ, ಸುಲಭವಾಗಿಯೂ ಉಳಿಸಿಕೊಳ್ಳಬಹುದಾಗಿತ್ತು! ಅದಕ್ಕಾಗಿ ನಾನು ಒಳಗಿಂದೊಳಗೇ ಕುದಿದೆ; ಕುದಿಯುತ್ತಿರುವೆ. ಆದರೆ 'ಬೆಂಗಳೂರಿನವರ ಮನಸ್ಸಿಗೆ ಬಾರದಿದ್ದ ಯಾವ ಸೂಚನೆಯನ್ನೂ ಬಹುಮತದಿಂದ ಅವರ ಮೇಲೆ ಹೇರಲಿಚ್ಛಿಸುವದಿಲ್ಲವೆಂದೂ ಮತ್ತು ವೃತ್ತಪತ್ರಿಕೆಗಳಲ್ಲಿ ಚಳವಳಿಯನ್ನು ಎಬ್ಬಿಸುವದಿಲ್ಲವೆಂದೂ' ಅವರಿಗೆ ವಚನ ಕೊಟ್ಟಿದ್ದೆ. ಏಕೆಂದರೆ, ಅಂಥ ದಿವಸಗಳು ಆಗ ಇನ್ನೂ ಬಂದಿರಲಿಲ್ಲ. ಆ ನನ್ನ ವಚನಕ್ಕನುಸಾರವಾಗಿ ನಾನು ಪರಿಷತ್ತಿನ ಅನ್ಯಾಯಗಳನ್ನು ಮೌನದಿಂದ ಸಹಿಸುತ್ತ ಬಂದಿರುವೆ.

ಆದರೆ ಈ ಮತಭೇದದ ಮೂಲಕ ನಮ್ಮಿಬ್ಬರ ಪ್ರೇಮಾದರಗಳಲ್ಲಿ ಏನೂ

ವ್ಯತ್ಯಯ ಬರಲಿಲ್ಲ. ಅವರು ಪೆನಶನ್ ತಕ್ಕೊಂಡ ಬಳಿಕ ಧಾರವಾಡದಲ್ಲಿಯೇ ನೆಲಿಸಿ, ಇಲ್ಲಿಯೇ ಮೃತರಾದರು. ಅವರ ಸ್ಮಶಾನ ಯಾತ್ರೆಯಲ್ಲಿ ನಾನೇ ಮುಖ್ಯ ಭಾಷಣ ಮಾಡಿದೆ.

ಪರಿಷತ್ತಿನ ಮುಖಂಡರು ಮೇಲ್ಕಂಡ ವಿಷಯದಲ್ಲಿ ತಮ್ಮ ಕರ್ತವ್ಯವನ್ನು ಸಾಕಷ್ಟು ಮಾಡಲಿಲ್ಲವೆಂದು ನನಗೆ ಅನಿಸುತ್ತದೆ. ಇದಕ್ಕೆ ವಿರುದ್ಧವಾಗಿ ಮಹಾರಾಷ್ಟ್ರದ ಮುಖಂಡರ ಅಭಿಮಾನವನ್ನೂ, ಸಾಹಸವನ್ನೂ ನೋಡಿರಿ! ಅವರು ಕರ್ನಾಟಕದ ಒಳಗೆ ಹೊಕ್ಕು ನಟ್ಟನಡುವಿನ ಬೆಳಗಾವಿ ಕಾರವಾರಗಳಲ್ಲಿ ಮಹಾರಾಷ್ಟ್ರ ಸಾಹಿತ್ಯ ಸಮ್ಮೇಲನಗಳನ್ನು ನೆರೆಯಿಸಿದರು. ಇಷ್ಟೇ ಅಲ್ಲ, ಇಂದೂರ, ಗ್ವಾಲೇರ, ಬಡೋದಾ ಮುಂತಾದ ಪರಕೀಯ ಭಾಷೆಗಳುಳ್ಳ ಪ್ರದೇಶಗಳಲ್ಲಿ ಕೂಡ, ಅರಸರು ತಮ್ಮವರೆಂಬ ನೆವದಿಂದ, ಮರಾಠಿಯನ್ನು ಹೊಗಿಸಲಿಕ್ಕೆ ಪ್ರಯತ್ನಿಸಿದರು! ನಮ್ಮ ಪ್ರದೇಶಗಳನ್ನು ನುಂಗುವದಕ್ಕೆ ಅವರ ಹೊಂಚು! ನಮ್ಮವರಿಗೋ, ನಮ್ಮ ಪ್ರದೇಶಗಳಲ್ಲಿ ಕೂಡ ನೆರವೇರಿಸಲು ಧೈರ್ಯ ಬರಲಿಲ್ಲ! ಒಟ್ಟಿನ ಮೇಲೆ ಅವರದು ಅಧಿಕ ಅಭಿಮಾನ, ನಮ್ಮವರದು ಒಣಾ ಅಭಿಮಾನ!

**ಅಖಿಲ ಕರ್ನಾಟಕ ವಿದ್ಯಾಲಯದ ಸ್ಮೃತಿ:**— ಅಖಂಡ ಕರ್ನಾಟಕವನ್ನು ನಿರ್ಮಾಣ ಮಾಡುವದಕ್ಕೆ ಹುಟ್ಟಿದ ಮತ್ತೊಂದು ಸಂಸ್ಥೆಯೆಂದರೆ. ಅಖಿಲ ಕರ್ನಾಟಕಕ್ಕೆ ಒಂದೇ ವಿಶ್ವವಿದ್ಯಾಲಯವನ್ನು ಮಾಡಲಿಕ್ಕೆ ಪ್ರಯತ್ನ ಪಡುವ ಸಂಸ್ಥೆ. ಮೈಸೂರ ಪ್ರಾಂತವು ಮುಂಚೆ ತಮ್ಮದೊಂದು ಬೇರೆ ವಿಶ್ವವಿದ್ಯಾಲಯವನ್ನು ಸ್ಥಾಪಿಸಿಕೊಂಡಿತು. ಇದರಿಂದ ಕನ್ನಡ ಸಾಹಿತ್ಯಕ್ಕೆ ಮತ್ತಿಷ್ಟು ಹಾನಿಯಾಯಿತು. ಏಕೆಂದರೆ, ಅದರ ಮೂಲಕ ಕರ್ನಾಟಕವು ಹೆಚ್ಚು ಒಡೆಯಲ್ಪಟ್ಟಿತು. ಬಳ್ಳಾರಿ, ಮಂಗಳೂರು, ಕೊಡಗು, ನೀಲಗಿರಿ ಮುಂತಾದ ಕನ್ನಡ ಪ್ರದೇಶಗಳು ಮದ್ರಾಸ ವಿಶ್ವವಿದ್ಯಾಲಯಕ್ಕೆ ಜೋಡಿಸಲ್ಪಟ್ಟವು. ಮುಂದೆ ಆಂಧ್ರ ವಿಶ್ವವಿದ್ಯಾಲಯವು ಹೊರಟಾಗ ಬಳ್ಳಾರಿ ಜಿಲ್ಹೆಯನ್ನು ಆಂಧ್ರ ವಿಶ್ವವಿದ್ಯಾಲಯಕ್ಕೆ ಕೂಡಿಸಿಕೊಳ್ಳಬೇಕೆಂದು ಹೊಂಚು ಹಾಕಿದರು. ಆಗ ಮೈಸೂರ ತರುಣರಲ್ಲಿಯೂ ಜಾಗ್ರತಿ ಉಂಟಾಯಿತು. ಶ್ರೀ. ನಿಟ್ಟೂರ ಶ್ರೀನಿವಾಸರಾಯರು, ಶ್ರೀ. ಸಂಪದ್ಗಿರಿರಾಯರು, ಶ್ರೀ. ತಿರುಮಲೆ ತಾತಾಚಾರ್ಯರೇ ಮುಂತಾದವರು ಅಖಿಲ ಕರ್ನಾಟಕ ವಿಶ್ವವಿದ್ಯಾಲಯದ ಬಗ್ಗೆ

ಮುಂಚೆ ಚಳವಳಿ ನಡಿಸಿದರು. ಆ ಕಾಲಕ್ಕೆ, ಬಳ್ಳಾರಿಯಲ್ಲಿಯೂ ವಿಲಕ್ಷಣ ಜಾಗ್ರತಿಯಾಯಿತು. ಮತ್ತು ಕರ್ನಾಟಕಕ್ಕೆ ಸಂಬಂಧಿಸಿದ ಸಮ್ಮೇನಗಳೆಲ್ಲವೂ ಬಳ್ಳಾರಿಯಲ್ಲಿ ಕೂಡಿಸಲ್ಪಟ್ಟವು. ಅಖಿಲ ಕರ್ನಾಟಕ ವಿಶ್ವವಿದ್ಯಾಲಯದ ಬಗ್ಗೆ ಪ್ರಯತ್ನ ಮಾಡುವುದೇ ಅವುಗಳ ಮುಖ್ಯ ಉದ್ದೇಶ.

ಬಳ್ಳಾರಿಯಲ್ಲಿ ಅಖಿಲ ಕರ್ನಾಟಕ ವಿಶ್ವವಿದ್ಯಾಲಯ ಸಂಸ್ಥೆ ಹೊರಟಿತು. ಆದಕ್ಕೆ ನಾನೂ ಲಿಂಗಾಯತ ಹಾಯಸ್ಕೂಲಿನ ಹೆಡ್ ಮಾಸ್ತರರಾದ ಶ್ರೀ. ಬಸವನಾಳರೂ ಕಾರ್ಯದರ್ಶಿಗಳು. ಮೈಸೂರ ವಿಶ್ವವಿದ್ಯಾಲಯವನ್ನೇ ಅಖಿಲ ಕರ್ನಾಟಕದ ವಿಶ್ವವಿದ್ಯಾಲಯವನ್ನಾಗಿ ಮಾಡಲಿಕ್ಕೆ ಪ್ರಯತ್ನಿಸಬಹುದೆಂದು ನಾವಿಬ್ಬರೂ ನಿರ್ಣಯಿಸಿದೆವು. ಆ ಮಾರ್ಗದಲ್ಲಿ ಲೇಖ, ಪ್ರಕಟನೆ ಮುಂತಾದವುಗಳ ಮೂಲಕ ನಾನು ಪ್ರಯತ್ನ ಪಟ್ಟೆನು. ಶ್ರೀ. ಕಡಪಾ ರಾಘವೇಂದ್ರರಾಯರು ಮದ್ರಾಸಿಗೆ ಹೋಗಿ, ಅಲ್ಲಿಯ ಕಾಯದೆ ಕೌನ್ಸಿಲಿನ ಸಭಾಸದರ ಮುಂದೆ ಕರ್ನಾಟಕಕ್ಕಾಗುವ ಅನ್ಯಾಯವನ್ನು ಇಟ್ಟರು. ಇತ್ತ ನಾನೂ ಕೌಜಲಗಿ ಶ್ರೀನಿವಾಸರಾಯರೂ ಮುದವೇಡೆ ಕೃಷ್ಣರಾಯರೂ ಮೈಸೂರಿಗೆ ಹೋಗಿ, ಮೈಸೂರಿನವರ ಮನವೊಲಿಸಲು ಪ್ರಯತ್ನಿಸಿದೆವು. ಮಿರ್ಝಾ ಇಸ್ಮಾಯಿಲ ( ೧೯೨೪ರಲ್ಲಿ ಅವರು ಮಹಾರಾಜರ ಪ್ರಾಯ್ವೇಟ ಸೆಕ್ರೆಟರಿಗಳಾಗಿದ್ದರು ). ಇವರನ್ನು ೨-೧೦-೧೯೨೪ನೆಯ ಇಸ್ವಿ ದಿವಸ ಭೆಟ್ಟಿಯಾಗಿ ಅವರ ಸಹಾನುಭೂತಿಯನ್ನು ಸಂಪಾದಿಸಿದೆವು. ಇವೆಲ್ಲ ನಮ್ಮ ಚಳವಳಿಗಳ ಪರಿಣಾಮುಪಾಗಿ ಬಳ್ಳಾರಿ ಜಿಲ್ಲೆಯು ಆಂಧ್ರ ವಿಶ್ವವಿದ್ಯಾಲಯಕ್ಕೆ ಜೋಡಿಸಲ್ಪಡದೆ ಉಳಿಯಿತು. ಆದರೆ ಮೈಸೂರಿನ ನಿಶ್ವವಿದ್ಯಾಲಯವನ್ನು ಅಖಿಲ ಕರ್ನಾಟಕದ್ದಾಗಿ ಮಾಡುವ ಚಳವಳಿಯು ಮುಂದುವರಿಯಲಿಲ್ಲ. ಸಂಸ .ನ ಕ್ಕೆ ಕೂಡುವದಕ್ಕೆ ಇಲ್ಲಿಯವರ ವಿರೋಧ. ಸಂಸ್ಥಾನದವರಿಗೆ ಅಖಿಲ ಕರ್ನಾಟಕದ ದೃಷ್ಟಿ ಸಾಕಷ್ಟು ಇದ್ದಿಲ್ಲ. ಹೀಗಾಗಿ ಅದು ನೆನೆಗುದಿಗೆ ಬಿತ್ತು. ಮಂಗಳೂರು ಮತ್ತು ಮೈಸೂರು ಸಾಹಿತ್ಯ ಸಮ್ಮೇಲನಗಳಲ್ಲಿ ಆ ಬಗ್ಗೆ ಕಮಿಟಿಗಳೇನೋ ಆದವು ಕೆಲಸವಾಗಲಿಲ್ಲ. ಮೈಸೂರಿನ ಕಮಿಟಿಗೆ ಶ್ರೀ. ಬಿ. ಎಮ್. ಶ್ರೀಕಂಠಯ್ಯನವರು ಅಧ್ಯಕ್ಷರು. ನಾನು ನನ್ನ ಕಡೆಗೆ ಇದ್ದಬಿದ್ದ ಆ ಸಂಬಂಧದ ಹೊತ್ತಿಗೆಗಳನ್ನೆಲ್ಲ ಅವರ ಕಡೆಗೆ ಗೂಡ್ಸ ಮಾಡಿ ಕಳಿಸಿಕೊಟ್ಟೆ. ಮುಂದೆ ವರ್ಷದ

ಮೇಲೆ ಗೂಡ್ಸದಿಂದ ಹಾಗೇ ತಿರುಗಿ ಬಂದವು! ಶ್ರೀ. ಸಾಸನೂರ ಎಂಬ ತರುಣ ವಿದ್ವಾಂಸರು ಆ ಕಾರ್ಯ ನಡಿಸುತ್ತೇವೆಂದು ಹೇಳಿದ್ದರು. ಅವರ ಕಡೆಗೆ ಆ ಕಾಗದಪತ್ರ ಕೊಟ್ಟೆ. ಅವರು ಆಕಸ್ಮಿಕವಾಗಿ ತೀರಿಕೊಂಡದ್ದರಿಂದ ಅವು ಗಳಲ್ಲಿ ಕೆಲವು ಮಾತ್ರ ನನ್ನ ಕೈಗೆ ಹತ್ತಿವೆ. ಈ ವಿದ್ಯಾಲಯ ವಿಚಾರವನ್ನು ಅಂತಃಕರಣಪೂರ್ವಕವಾಗಿ ಎತ್ತಿ ಹಿಡಿದ ವ್ಯಕ್ತಿಯೆಂದರೆ ಆಗಿನ ವಿಶ್ವವಿದ್ಯಾ ಲಯದ ವ್ಹಾಯಿಸ್ ಚಾನ್ಸಲರಾಗಿದ್ದ ನನ್ನ ಮಿತ್ರ ಎನ್. ಎಸ್. ಸುಬ್ಬ ರಾಯರು. ಅವರೂ ನಾವೂ ಕೂಡಿ, Federal University ಅಂದರೆ ಸಮಾನಸ್ಕಂಧವಾಗಿ ಅಖಿಲ ಕರ್ನಾಟಕ ವಿಶ್ವವಿದ್ಯಾಲಯಕ್ಕೆ (ಮೈಸೂರ ವಿಶ್ವವಿದ್ಯಾಲಯಕ್ಕಲ್ಲ) ಜೋಡಿಸುವ ಮತ್ತು ಕಚೇರಿಗಳನ್ನು ಮಾತ್ರವೇ ಮೈಸೂರಿನಲ್ಲಿಡುವ ಯೋಜನೆಯನ್ನು ಸಿದ್ಧಪಡಿಸಿ, ಎಲ್ಲರನ್ನೂ ಸಮಾಧಾನ ಪಡಿಸಬೇಕೆಂದೆವು. ಯುನಿವ್ಹರ್ಸಿಟಿ ಬಿಲ್ಲನ್ನೇ ನಾನು ತಯಾರು ಮಾಡಿ ಟಾಯಿಪ್ ಮಾಡಿಸಿ, ಕಮಿಟಿ ಮೆಂಬರರಿಗೆ ಹಂಚಿದೆ. ಅದನ್ನು ಕೇಂದ್ರ ಸರಕಾರಕ್ಕೆ ಕಳಿಸಿ, ಅವರಿಂದ ಮಂಜೂರಿಯನ್ನು ಪಡಕೊಳ್ಳಬೇಕೆಂದು ನಾನು ಮಾಡಿದ್ದೆ. ಆದರೆ ಆದಕ್ಕೆ ಅಕಲ್ಪಿತವಾದ ವಿಘ್ನ ಉಂಟಾಯಿತು. ಮೈಸೂರ ವಿಶ್ವವಿದ್ಯಾಲಯದವರೂ ನಾವೂ ಕೂಡೇ ಅರ್ಜೀ ಮಾಡಿಕೊಳ್ಳಬೇಕೆಂಬುದು ತಪ್ಪೆಂಬುದನ್ನು ಸುಬ್ಬರಾಯರು ನನ್ನ ಲಕ್ಷಕ್ಕೆ ತಂದುಕೊಟ್ಟರು. ಮೈಸೂರ ಸರಕಾರಕ್ಕೆ ಸ್ವತಂತ್ರ ವಿದ್ಯಾಲಯವನ್ನು ಸ್ಥಾಪನೆ ಮಾಡುವ ಅಧಿಕಾರ ವಿರಲು, ವ್ಹಾಯಿಸರಾಯರ ಕಡೆಗೆ ಅರ್ಜೀ ಮಾಡುವದು ಯುಕ್ತವಲ್ಲವೆಂಬು ದನ್ನು ಅವರು ತಿಳಿಸಿದರು. ಅದು ನಿಜವಿತ್ತು. ಮಿಕ್ಕವರು ಅರ್ಜೀ ಮಾಡ ಬೇಕು; ಮೈಸೂರ ಸರಕಾರದ ಕಡೆಗೆ ಅಭಿಪ್ರಾಯಕ್ಕೆ ಬಂದಾಗ್ಗೆ ಅದಕ್ಕೆ ಸರ ಕಾರವು ಒಪ್ಪಬೇಕು, ಎಂದು ಗೊತ್ತಾಯಿತು. ಆದರೆ ಇಷ್ಟರಲ್ಲಿ ಇಲ್ಲಿಯ ಪ್ರತಿಷ್ಠಿತರಿಗೂ ತಮ್ಮದೇ ಆದ ಒಂದು ವಿಶ್ವವಿದ್ಯಾಲಯವನ್ನು ಸ್ಥಾಪಿಸ ಬೇಕೆಂಬ ಬುದ್ಧಿ ಹುಟ್ಟಿತು. ಮೈಸೂರಿನವರಂತೂ ಪ್ರತ್ಯೇಕತೆಯ ಭಾವನೆ ಯನ್ನೇ ತಾಳಿದ್ದರು. ಆದರೆ ಯಾರು ಎಷ್ಟೇ ವಿಘ್ನ ತಂದರೂ ನಾವು ಕರ್ನಾಟಕದವರೆಲ್ಲರೂ ಎಲ್ಲೆಲ್ಲಿ ಶಕ್ಯವಿದೆಯೋ ಅಲ್ಲಲ್ಲಿ ಒಟ್ಟುಗೂಡ ಬೇಕೆಂಬುದೇ ನನ್ನ ಕರ್ನಾಟಕತ್ವದ ಮುಖ್ಯ ಧೋರಣ. ಮೊದಲು ಕೂಡೋಣ, ಪರಸ್ಪರ ವಿಶ್ವಾಸ ಮತ್ತು ಸಹಾನುಭೂತಿಯನ್ನು ಬೆಳಸೋಣ.

ಆಬಳಿಕ ಒಂದು ಬಿಟ್ಟು ನಾಲ್ಕು ವಿಶ್ವವಿದ್ಯಾಲಯಗಳನ್ನಾದರೂ ಮಾಡಬಹುದು. ಅಲ್ಲಿಯ ವರೆಗೆ ಬೇಡ. ಎಂದು ಹೇಳಿದೆ. ಆದರೆ ಇಲ್ಲಿಯೂ ನನ್ನ ಆಟ ನಡೆಯಲಿಲ್ಲ. ಈಗ ಕರ್ನಾಟಕವು ಈ ವಿಷಯದಲ್ಲಿ ಮತ್ತಿಷ್ಟು ಒಡೆದು ಹೋಗಿ ನಾಲ್ಕೈದು ವಿಶ್ವವಿದ್ಯಾಲಯಗಳ ಆಡಳಿತಕ್ಕೆ ಒಳಪಟ್ಟಿದೆ. ಈ ದುರ ವಸ್ಥೆಯು ಹೋಗಿ, ಎಲ್ಲ ಕಡೆಗೂ ಒಂದೇ ವಿಧದ ಕ್ರಮಿಕ ಪುಸ್ತಕ ಗಳೂ ಅಭ್ಯಾಸಕ್ರಮವೂ ಉಂಟಾಗಿ ಎಲ್ಲ ರೀತಿಯಿಂದಲೂ ಕರ್ನಾಟಕದ ಯಾವತ್ತೂ ಶಿಕ್ಷಣ ಕ್ರಮವು ಒಂದೇ ವಿಧವಾಗಿ ಏರ್ಪಟ್ಟು ಕರ್ನಾಟಕ ಏಕೀಕರಣವನ್ನು ದೃಢಪಡಿಸುವ ಸುದಿನಗಳು ತೀವ್ರ ಬರಲೆಂದೂ ಬರಬಹು ದೆಂದೂ ನಾನು ಹಾರೈಸುತ್ತೇನೆ.

---



ದಿ. ಶಾಂತಕವಿಗಳು

## ೧೫ನೆಯ ಪ್ರಕರಣ

### ಜಯಕರ್ನಾಟಕ ಯುಗ

**ಜಯಕರ್ನಾಟಕ** (೧೯೨೨—೧೯೩೮) **ಕರ್ನಾಟಕದ ಸೂತ್ರಗಳು** (೧೯೫೦):— ೧೯೨೦ನೆಯ ಇಸವಿಯಲ್ಲಿ ಕೂಡಿದ ಅಖಿಲ ಕರ್ನಾಟಕ ರಾಷ್ಟ್ರೀಯ ಪರಿಷತ್ತೇ ಕರ್ನಾಟಕತ್ವದ ಕಲ್ಪನೆಯ ಪೂರ್ಣ ವಿಕಾಸದ ಫಲ. ಅಲ್ಲಿಂದ ಮುಂದೆ ಅಸಹಕಾರ ಚಳವಳಿ ಹಬ್ಬಿದ್ದರಿಂದ ನಾನು ಪುನಃ ವಕೀಲಿಯನ್ನು ಬಿಟ್ಟು, ಆ ಚಳವಳಿಯಲ್ಲಿಯೂ ಧುಮುಕಿದೆನೆಂದು ಹಿಂದೆ ಹೇಳಿಯೇ ಇರುವೆ. ಅದೇ ವರ್ಷ ಕಡಪಾ ರಾಘವೇಂದ್ರರಾಯರ ಮುಖಂಡತ್ವದಲ್ಲಿ ಕರ್ನಾಟಕಕ್ಕೆ ಪ್ರತ್ಯೇಕ ಕಾಂಗ್ರೆಸ್ಸೂ ದೊರಕಿತು. ಆಗ ನಮಗೆ ಅವೆರಡೂ ಚಳವಳಿಗಳನ್ನು ಏಕಸಮಯಾವಚ್ಛೇದದಿಂದ ನಡೆಯಿಸಿಕೊಂಡು ಹೋಗಬೇಕಾಯಿತು; ಹೋದೆವು. ಅಷ್ಟರಲ್ಲಿ ಕರ್ನಾಟಕದಲ್ಲಿ ಮೊಟ್ಟಮೊದಲಿನ ರಾಷ್ಟ್ರೀಯ ಕಾಂಗ್ರೆಸ್ಸನ್ನು ಕೂಡಿಸುವ ಕಲ್ಪನೆಯು ಹೊರಟಿತು. ಸ್ವಾಭಾವಿಕವಾಗಿಯೇ ಕರ್ನಾಟಕದ ಅನೇಕ ಕಾರ್ಯಕರ್ತರಿಗೆ ಅದೇ ಪ್ರಮುಖ, ಮತ್ತು ಒಂದೇ ಒಂದು ವಿಷಯವಾಗಿ ತೋರಿ, ಅನೇಕರು ಅತ್ತ ಧಾವಿಸಿದರು. ಅವೆರಡನ್ನೂ ಕೂಡಿಯೇ ನಡೆಯಿಸಿಕೊಂಡು ಹೋಗುವ ನಮ್ಮಂಥವರು ಬಹಳ ಜನರು ಇರಲಿಲ್ಲ. ಅಂತೆಯೇ ಕಾಂಗ್ರೆಸ್ಸಿಗೆ ಕರ್ನಾಟಕತ್ವದ ರೂಪವನ್ನು ಕೊಡುವದಕ್ಕಾಗಿ ಅದನ್ನು ಧಾರವಾಡದಲ್ಲಿಯೇ ಕೂಡಿಸಬೇಕೆಂಬ ಬಗ್ಗೆ ನಾನು ಹುಬ್ಬಳ್ಳಿಯಲ್ಲಿ ಕೂಡಿದ ಸಭೆಯಲ್ಲಿ ತಂದ ನನ್ನ ಗೊತ್ತುವಳಿಗೆ ಬೆಂಬಲವೇ ಸಿಗಲಿಲ್ಲವೆಂಬುದನ್ನು ಹೇಳಿಯೇ ಇರುವೆ. ಬೆಳಗಾವಿಯಂಥ ಮರಾಠಿ ಭಾಷೆಯ ಮೋಹಕ್ಕೆ ಒಳಗಾದ ಪಟ್ಟಣದಲ್ಲಿಯೂ ಕರ್ನಾಟಕತ್ವದ ಸ್ವರೂಪವನ್ನು ನಾನು ಕಾಯ್ದುಕೊಂಡೇ ಹೋಗುವೆ

ನೆಂದು ನಮಗೆ ನಮ್ಮ ಮುಖಂಡರಾದ ದೇ. ಭ. ಗಂಗಾಧರರಾಯರು ಆಶ್ವಾಸನ ಕೊಟ್ಟದ್ದರಿಂದ ನಾವೂ ಒಪ್ಪಿದೆವು. ಮತ್ತು ಆ ಪ್ರಕಾರ ಅವರು ಬೆಳಗಾವಿಯಲ್ಲಿ ಕೂಡಿದ ಕಾಂಗ್ರೆಸ್ಸಿಗೆ ಕರ್ನಾಟಕತ್ವದ ಸ್ವರೂಪವನ್ನು ಕೊಟ್ಟೂ ತೋರಿಸಿದರು. ಆ ಕಾಲದಲ್ಲಿ ಬೆಳಗಾವಿಯ ಡಾ. ಹಣಮಂತರಾವ ಸವಣೂರ ಮತ್ತು ಪೋತದಾರ ಶ್ರೀನಿವಾಸರಾಯರೇ ಮುಂತಾದ ಕನ್ನಡದ ಕಟ್ಟಭಿಮಾನಿಗಳು ನಮಗೆ ಪೂರ್ಣ ಸಹಾಯ ಮಾಡಿದರು. ಇವೆಲ್ಲ ಚಳವಳಿಗಳು ಕರ್ನಾಟಕದಲ್ಲಿ ನಡೆದ ಅವಧಿಯಲ್ಲಿ, ಇಡೀ ಕರ್ನಾಟಕದಲ್ಲಿ ಕರ್ನಾಟಕತ್ವದ ಸರ್ವತೋಮುಖವಾದ ಅಭ್ಯುನ್ನತಿಗೆ ಬೇರೊಂದು ಸಂಸ್ಥೆ ಮತ್ತು ಪತ್ರಿಕೆ ಬೇಕೆಂದು ನನಗೆ ೧೯೨೨ರಲ್ಲಿ ಅನಿಸಿತು. ಈ ಕಲ್ಪನೆಗೆ ತರುಣ ಸಾಹಿತಿಗಳಾದ ಶ್ರೀ. ಬೇಂದ್ರೆಯವರೇ ಮುಂತಾದ ಕೆಲವು ತರುಣ ಗೆಳೆಯರ ಸಹಾನುಭೂತಿಯು ದೊರಕಿತು. ಆಗ ನಾನು ಕರ್ನಾಟಕತ್ವದ ಚಳವಳಿಯನ್ನೇ ಹಬ್ಬಿಸುವ ಸಂಕಲ್ಪಮಾಡಿ, "ಜಯ ಕರ್ನಾಟಕ"ವೆಂಬ ಅತಿ ದೊಡ್ಡ ಮಾಸಪತ್ರಿಕೆಯನ್ನು ೧೯೨೨ರಲ್ಲಿ ತೆಗೆದೆ. ಈ ಕಾರ್ಯದಲ್ಲಿ ಶ್ರೀ. ಬಳವಂತರಾವ ಜಠಾರ ಎಂಬ ನನ್ನ ಮರಾಠೀ ಬಾಲಮಿತ್ರರ ಸಹಾನುಭೂತಿ ಮಾತ್ರವೇ ಅಲ್ಲದೆ ಸಹಕಾರವೂ ದೊರಕಿತು. ಅವರು ಸ್ವತಃ ಮರಾಠಿ ಅಭಿಮಾನಿಗಳು. ಆದರೆ ಕರ್ನಾಟಕತ್ವಕ್ಕೆ ಪೂರಾ ವಿರುದ್ಧವಿದ್ದಿಲ್ಲ. ಅಲ್ಲದೆ ಸಾಹಿತ್ಯಪ್ರೇಮಿಗಳು. ಮತ್ತು "ಪ್ರಭಾತ" ಎಂಬ ಕೇವಲ ಕವಿತಾರೂಪದ ಕನ್ನಡ ಮಾಸಪತ್ರಿಕೆ ತೆಗೆದವರು. ಅವರು ಇಡೀ ಕರ್ನಾಟಕದಲ್ಲೇ ಅತಿ ದೊಡ್ಡದಾದ "ಕರ್ನಾಟಕ ಪ್ರಿಂಟಿಂಗ್ ಪ್ರೆಸ್" ಎಂಬ ಮುದ್ರಣಾಲಯದ ಒಡೆಯರು. ಅವರು ತಮ್ಮ ಪ್ರೆಸ್ಸಿನ ಪೂರ್ಣ ಸಹಾಯವನ್ನು ಮುದ್ರಕರಾಗಿ ಕೊಟ್ಟು, ನನ್ನೊಡನೆ ಪಾಲುಗಾರರಾಗಲು ಒಪ್ಪಿದರು. ಮತ್ತು ಜಯಕರ್ನಾಟಕವನ್ನು ತೆಗೆದೆನು.

ಜಯಕರ್ನಾಟಕವು ಕೇವಲ ಮಾಸಪತ್ರಿಕೆಯಲ್ಲ, ಒಂದು ರೀತಿಯಿಂದ ಅದೇ ಒಂದು ಸಂಸ್ಥೆ. ನನ್ನ ಉದ್ದೇಶವು ಅದರ ಮುಖಾಂತರ ಕರ್ನಾಟದ ಸಮಸ್ತ ಭಾಗಗಳಿಗೂ ಕರ್ನಾಟಕತ್ವದ ಸಂದೇಶವನ್ನು ಒಯ್ದು ಮುಟ್ಟಿಸುವದೇ ಆಗಿತ್ತು. ಆದ ಕಾರಣ ಅದನ್ನು ಮಾದರಿಯ ಮಾಸಪತ್ರಿಕೆಯನ್ನಾಗಿ ನಡೆಯಿಸುವದಲ್ಲದೆ ಕರ್ನಾಟಕತ್ವದ ಪ್ರಚಾರಕ್ಕೆ ಅದೊಂದು ಬಲವಾದ ಸಾಧನ

ವೆಂದು ೭ ವರ್ಷ ನಡೆಯಿಸಿದೆನೆಂಬುದನ್ನು ಅದರ ವಾಚಕರು ಮರೆತಿರಲಿಕ್ಕಿಲ್ಲ. ಅಂತೇ ಹೈದರಾಬಾದ ಪ್ರಾಂತದಿಂದ ಬಂದ ಲೇಖಗಳಿಗೆ ಹಚ್ಚುವ ಒರೆಗಲ್ಲು ಬೇರೆ, ಬೇರೆ ಬೇರೆ ಭಾಗಗಳಿಗೆ ಬೇರೆ ಬೇರೆ ಒರೆಗಲ್ಲುಗಳು. ಹಾಗೆಯೇ ತರುಣರ ಲೇಖಗಳಿಗೆ ಒರೆ ಬೇರೆ. ರಾಜಕಾರಣಿಗಳಿಗೆ ಹಚ್ಚುವ ಒರೆ ಬೇರೆ. ಸಾಹಿತಿಗಳಿಗೆ ಹಚ್ಚುವ ಒರೆ ಬೇರೆ. ಮುಂತಾಗಿ. ಆದ ಕಾರಣ ಕೇವಲ ಮಾಸಪತ್ರಿಕೆ ಎಂಬುದೊಂದೇ ದೃಷ್ಟಿಯಿಂದ ಅದರಲ್ಲಿ ನ್ಯೂನತೆಗಳಿದ್ದರೂ ಕರ್ನಾಟಕತ್ವದ ಸರ್ವಾಂಗೀಣ ದೃಷ್ಟಿಯಿಂದ ಅದನ್ನು ನಡೆಯಿಸಿಕೊಂಡು ಹೋದೆನು. ಮುಂದೆ ಅದರ ಮೂಲಕ ಸರ್ವತೋಮುಖವಾಗಿ ಕರ್ನಾಟಕತ್ವದ ಚಳವಳಿಯು ನಡೆಯಿತೆಂಬುದು ಸರ್ವರಿಗೂ ತಿಳಿದ ಮಾತೇ ಆಗಿರುವದರಿಂದ ಈ ಜಯಕರ್ನಾಟಕ ಯುಗದ ಮುಂದಿನ ನನ್ನ ಚಳವಳಿಗಳನ್ನು ನಾನು ಈ ಗ್ರಂಥವಲ್ಲಿ ಕೊಡಲು ಹೋಗುವದಿಲ್ಲ. ಅಲ್ಲದೆ ಹಾಗೆ ಮಾಡುವರಿಂದ ಈ ಗ್ರಂಥವು ಕಲ್ಪನೆಗೆ ಮೀರಿ ಬೆಳೆಯುವದು. ಇಷ್ಟು ಮಾತ್ರ ಹೇಳಿದರೆ ಸಾಕು. ಅದೆಂದರೆ, ಕರ್ನಾಟಕದಲ್ಲಿ ಹುಟ್ಟಿದ ನೂರಾರು ಲೇಖಕರಿಗೆ, ಸಾಹಿತಿಗಳಿಗೆ, ಕವಿಗಳಿಗೆ, ರಾಜಕಾರಣಿಗಳಿಗೆ, ಧಾರ್ಮಿಕ ಪುರುಷರೇ ಮುಂತಾದವರಿಗೆ ಜಯಕರ್ನಾಟಕವು ಅವಕಾಶ ಕಲ್ಪಿಸಿ ಕೊಟ್ಟಿತು. ಪ್ರದೇಶ ವಿಸ್ತಾರದಲ್ಲಿ ಹೇಗೆ ಅದು ಇಡೀ ಕರ್ನಾಟಕವನ್ನು ವ್ಯಾಪಿಸಿತ್ತೋ ಹಾಗೆ ವಿಷಯ ವಿಸ್ತಾರದಲ್ಲೂ ವ್ಯಾಪಿಸಿತ್ತು. ನಾನು ಅದನ್ನು ೧೯೩೦ರ ವರೆಗೆ ನಡೆಯಿಸಿ, ತರುಣ ಮಿತ್ರರಾದ ಶ್ರೀ. ಬೇಂದ್ರೆ, ಶ್ರೀ. ಶಂ. ಬಾ. ಜೋಶಿ ಮುಂತಾದ ಸಾಹಿತಿಗಳ ವಶಕ್ಕೆ ಅದನ್ನು ಕೊಟ್ಟುಬಿಟ್ಟು, ನಾನು ನನ್ನ ಆಯುಷ್ಯದ ಮತ್ತೊಂದು ಮುಖ್ಯ ಧ್ಯೇಯವಾದ ಆಧ್ಯಾತ್ಮ ಸಾಧನೆಯಲ್ಲಿ ಪೂರಾ ಮಗ್ನನಾಗಿರುವೆ. ಶ್ರೀ. ಬೇಂದ್ರೆಯವರೇ ಮುಂತಾದ ಗೆಳೆಯರ ಗುಂಪಿನವರು ಸುಮಾರು ಎರಡು ಮೂರು ವರ್ಷ ನಡೆಯಿಸಿದ ನಂತರ ಮುಂದೆ ಅದು ಬೆಳಗಾವಿ ರಾಮಚಂದ್ರರಾಯರ ( ಈಗಿನ ವಿನೀತ ರಾಮಚಂದ್ರರಾಯರ ) ಕಡೆಗೆ ಹೋಯಿತು. ಅವರೂ ಕೆಲ ವರ್ಷ ನಡೆಯಿಸಿದರು. ಅವರೂ ಕರ್ನಾಟಕತ್ವದ ಪೂರ್ಣ ಅಭಿಮಾನಿಗಳು. ಅವರೆಲ್ಲರೂ ಕರ್ನಾಟಕತ್ವದ ಸರ್ವಾಂಗೀಣ ಪ್ರಚಾರವನ್ನೇ ತಮ್ಮ ಮುಖ್ಯ ಧ್ಯೇಯವನ್ನಾಗಿಯೇ ಇಟ್ಟುಕೊಂಡು ನಡೆಯಿಸಿದರು. ಇರಲಿ.

ನಾನು ಮೊದಲಿಗೆ ಹೇಳಿದಂತೆ ನನ್ನ ಸ್ವಂತ ಸಾರ್ವಜನಿಕ ಜೀವನದಲ್ಲಿ ಕರ್ನಾಟಕತ್ವದ ಕಲ್ಪನೆಯು ನನ್ನಲ್ಲಿ ಹೇಗೆ ಒಡಮೂಡಿತು? ಅದು ಮುಂಚೆ ನನ್ನಲ್ಲಿ ಹೇಗೆ ವಿಸ್ತಾರ ಹೊಂದಿತು? ಮತ್ತು ಮುಂದೆ ಅದಕ್ಕೆ ಇಡೀ ಕರ್ನಾಟಕದ ಚಳವಳಿಯ ರೂಪವು ಪ್ರಾಪ್ತವಾಗಿ ಅದು ಹೇಗೆ ವಿಸ್ತಾರ ಹೊಂದಿತೆಂಬುದನ್ನಷ್ಟೇ ಹೇಳುವದು ಈ ಗ್ರಂಥದ ಉದ್ದೇಶ.



# ೧೬ನೆಯ ಪ್ರಕರಣ

## ಜಯಕರ್ನಾಟಕ ಮಂತ್ರದ ಅರ್ಥವು

"ಜಯಕರ್ನಾಟಕವೇ ನಮ್ಮ ಮಂತ್ರ"; ಆ ಮಂತ್ರಬಲದಿಂದ ನೂರಾರು ಎಡರುಗಳನ್ನು ಇರಿದು ಚಲ್ಲಬಹುದೆಂಬ ಧೈರ್ಯವು ನನಗೆ ಉಂಟಾಗಿದೆ; ಸಾವಿರಾರು ತೊಂದರೆಗಳನ್ನು ತರಿದೊಗೆಯಬಹುದೆಂಬ ವಿಶ್ವಾಸವು ನನ್ನಲ್ಲಿ ಉದ್ಭವಿಸಿದೆ. "ಕರ್ನಾಟಕದೇವಿ"ಯ ಕೃಪಾಪ್ರಸಾದವೇ ನನ್ನ ಕರವಾಲವು. ಅವಳ ಅನುಗ್ರಹವೇ ನನಗೆ ಆಧಾರವು.

"ಜಯಕರ್ನಾಟಕ"ವೆಂಬುದು ಮಂತ್ರ; ಕೇವಲ ಶಬ್ದಸಮೂಹವಲ್ಲ. ಆಧ್ಯಾತ್ಮಿಕ ಶಕ್ತಿಯಿಂದ ತುಂಬಿದ ಶಬ್ದಸಮೂಹವೇ ಮಂತ್ರ. ಮಂತ್ರದ ಅರ್ಥವು ಕೇವಲ ಶಬ್ದಗಳಲ್ಲಿರುವದಿಲ್ಲ, ಅಕ್ಷರಗಳಲ್ಲಿರುವದಿಲ್ಲ. ಅದರಲ್ಲಿ ಅದೃಶ್ಯ ರೂಪದಿಂದಡಕವಾಗಿರುವ ಆಧ್ಯಾತ್ಮ ಶಕ್ತಿಯಲ್ಲಿರುತ್ತದೆ. ಆ ಶಬ್ದಸಮೂಹದಲ್ಲಿ ಆಧ್ಯಾತ್ಮಿಕ ಅರ್ಥವು ಹಾವಿನಂತೆ ಹೆಡೆಯನ್ನು ಸುತ್ತಿಕೊಂಡು ಕುಳಿತಿರುತ್ತದೆ. ಅದನ್ನು ಹಿರಿದು ತೆಗೆದು ತಿಳಿದುಕೊಳ್ಳದಿದ್ದರೆ ಆದರ ಅರ್ಥದ ಮರ್ಮವು ಚೆನ್ನಾಗಿ ಹೊಳೆಯಲಾರದು. ವೈದಿಕ ಮಂತ್ರಗಳ ಮರ್ಮವನ್ನರಿತುಕೊಳ್ಳುವದೆಂದರೆ, ಶಬ್ದಕೋಶವನ್ನು ತೆಗೆದುಕೊಂಡು, ಮಂತ್ರದೊಳಗಿನ ಶಬ್ದಗಳ ಅರ್ಥವನ್ನು ಹುಡುಕಿ ಅದರಿಂದ ಆ ಮಂತ್ರಕ್ಕೆ ಅರ್ಥವನ್ನು ಹಚ್ಚುವದಲ್ಲ; ಮಂತ್ರದೃಷ್ಟಾರರಾದ ಋಷಿಗಳ ಮನಸ್ಸಿನಲ್ಲಿರುವ ಆಧ್ಯಾತ್ಮಿಕ ಅರ್ಥವನ್ನು ಕಂಡುಹಿಡಿಯುವದು. ಹಾಗೆಯೇ "ಓಂ ನಮೋ ನಾರಾಯಣಾಯ" "ಓಂ ನಮಃ ಶಿವಾಯ" ಎಂಬಿವೇ ಮಂತ್ರಗಳ ಗೂಢಾರ್ಥವನ್ನರಿಯದಿದ್ದರೆ, ಕೇವಲ ಅವುಗಳ ಉಚ್ಚಾರಣೆಯಿಂದ ಇಷ್ಟವಾದ ಫಲವು ಎಂದಿಗೂ ಲಭಿಸದು. ಒಂದು ಬಗೆಯ ಭಾವನೆಯಿಂದ ಯುಕ್ತರಾಗಿ ಅವುಗಳನ್ನು ಸತತವಾಗಿ ಜಪಿಸಿದರೆ ಮಾತ್ರವೇ ಸಿದ್ಧಿಯು ಕೈಗೂಡುವದು. ಪರಮ ಪುರುಷಾರ್ಥವಾದ ಮೋಕ್ಷವೇ ಧ್ಯೇಯವುಳ್ಳ ವೈದಿಕ ಮಂತ್ರಗಳ ಪಾವಿತ್ರ್ಯವೂ ಗಾಂಭೀರ್ಯವೂ

"ಜಯಭಾರತ", "ಜಯಕರ್ನಾಟಕ", "ಜಯಮಹಾರಾಷ್ಟ್ರ" ಎಂಬಿವೇ ಮುಂತಾದ ಲೌಕಿಕ ಶಬ್ದಸಮೂಹಗಳಿಗೆ ಎಂದಿಗೂ ಬರಲಾರದಾದುದರಿಂದ ಇವುಗಳಿಗೆ "ಮಂತ್ರ"ಗಳೆಂಬ ಉಚ್ಚವಾದ ಹೆಸರನ್ನು ಕೊಡುವದು ಗೌಣ ಪಕ್ಷವಾದರೂ, ಅರ್ಥಸಾದೃಶ್ಯದಿಂದ ಹಾಗೆ ಕರೆಯಲು ಪ್ರತ್ಯವಾಯವೇನೂ ಇಲ್ಲ. ಹಾಗೆ ಮಾಡುವದರಿಂದ ಈ ಶಬ್ದಗಳಲ್ಲಿಯೂ ಆಧ್ಯಾತ್ಮಿಕ ಅರ್ಥವು ಇದ್ದೇ ಇರುತ್ತದೆಂಬುದು ಸತತವಾಗಿ ಸ್ಮರಣೆಗೆ ಬರುವದರಿಂದ ಆ ಬಗೆಯ ಪ್ರಯೋಗವು ಅನ್ವರ್ಥಕವಾಗುತ್ತದೆ. ರೂಢಿಯಲ್ಲಿ ಕೂಡ "ನನ್ನ ಆಟದ ಮೂಲಮಂತ್ರವು ಇದು" ಎಂಬಿವೇ ಮುಂತಾದ ವಾಕ್ಯಗಳಲ್ಲಿ 'ಮಂತ್ರ' ಶಬ್ದವನ್ನುಪಯೋಗಿಸುವದಕ್ಕೂ ಇದೇ ಕಾರಣ. ಸಾರಾಂಶ, ಮನನ ಮಾಡಿ ತಿಳಿದುಕೊಳ್ಳುವ ಅರ್ಥವುಳ್ಳದ್ದೇ ಮಂತ್ರ.

ಈ ಆಧ್ಯಾತ್ಮಿಕ ದೃಷ್ಟಿಯಿಂದ ವಿಚಾರಮಾಡಿ ನೋಡಿದರೆ, "ಜಯ ಕರ್ನಾಟಕ" ಪದಕ್ಕೆ ಅತ್ಯಂತ ವ್ಯಾಪಕಾರ್ಥವಿರುತ್ತದೆಂಬುದು ಗೊತ್ತಾಗುವುದು. 'ಕರ್ನಾಟಕ'ವೆಂದರೆ ಕೇವಲ ನಾಡಲ್ಲ, ಕೇವಲ ಕನ್ನಡ ಭಾಷೆಯಲ್ಲ, ಕೇವಲ ಅದರ ಇತಿಹಾಸವಲ್ಲ, ಕೇವಲ ಅದರ ಶಿಲ್ಪಕಲೆಯಲ್ಲ, ಇವೆಲ್ಲವುಗಳ ಉನ್ನತಿಯನ್ನು ಮಾಡಿದ ಮಾತ್ರಕ್ಕೆ ಕರ್ನಾಟಕದ ಜಯವನ್ನು ಪೂರ್ಣವಾಗಿ ಮಾಡಿದಂತಾಗಲಿಲ್ಲ ವ್ಯಕ್ತಿಗೆ ಹೇಗೋ ಹಾಗೆ ದೇಶಕ್ಕೂ ಸ್ಥೂಲ, ಸೂಕ್ಷ್ಮ, ಕಾರಣ ಹೀಗೆ ಮೂರು ಶರೀರಗಳಿರುತ್ತವೆ. ಅವೆಲ್ಲವುಗಳ ವಿಕಾಸವಾಗಿ ಅವುಗಳ ದ್ವಾರದಿಂದ ವ್ಯಕ್ತಿಯು ಮೋಕ್ಷವನ್ನೈದುವಂತೆಯೇ ರಾಷ್ಟ್ರವೂ ತನ್ನ ಸ್ಥೂಲ, ಸೂಕ್ಷ್ಮ, ಕಾರಣಶರೀರಗಳ ವಿಕಾಸವನ್ನು ಮಾಡಿಕೊಂಡು, ಮೋಕ್ಷವನ್ನು ಪಡೆಯಬೇಕಾಗುತ್ತದೆ.

ಆಯಾ ದೇಶದ ರಾಜಕೀಯ ಸಾಮಾಜಿಕ ವಿದ್ಯಾವಿಷಯಕ ಮುಂತಾದ ಸಂಸ್ಥೆಗಳೇ ಅವುಗಳ ಸ್ಥೂಲ ಶರೀರವು. ಭಾಷೆ, ಇತಿಹಾಸ, ಶಿಲ್ಪಕಲೆ, ಗಾಯನಕಲೆ ಇವೇ ಮುಂತಾದ ಆ ನಾಡಜನರ ಮನಸ್ಸನ್ನು ಸುಸಂಸ್ಕೃತವನ್ನಾಗಿ ಮಾಡುವ ವಿಷಯಗಳು, ಅಂದರೆ ಅದರ ಸಂಸ್ಕೃತಿಯು ಸೂಕ್ಷ್ಮ ಶರೀರವು. ಧರ್ಮವೇ ಕಾರಣಶರೀರವು. ಆದುದರಿಂದ, ಇವೆಲ್ಲ ವಿಷಯಗಳಲ್ಲಿ ನಾವು ಕರ್ನಾಟಕದ ಜಯವನ್ನು ಬಯಸುವದೇ ಜಯಕರ್ನಾಟಕದ ನಿಜವಾದ ಅರ್ಥವು.

ಕರ್ನಾಟಕತ್ವದ ನನ್ನ ಕಲ್ಪನೆಯು ಸರ್ವವ್ಯಾಪಿಯಾಗಿದೆ, ಹಲವರು ತಿಳಿಯುವಂತೆ ಸಂಕುಚಿತವಾಗಿಲ್ಲ. ನಮ್ಮ ಕರ್ನಾಟಕವು ಭರತಖಂಡಕ್ಕಿಂತಲೂ ದೊಡ್ಡದಾಗಿದೆ; ಏಶಿಯಾ ಖಂಡವನ್ನು ಮಿಕ್ಕಿದೆ, ವಿಶ್ವವನ್ನು ವ್ಯಾಪಿಸಿದೆ! ಇದನ್ನು ಕೇಳಿ ಅನೇಕರು ಆಶ್ಚರ್ಯಗೊಳ್ಳಬಹುದು. ಭರತಖಂಡದ ಭಾಗೈಕಮಾತ್ರವಾದ ಕರ್ನಾಟಕವು ಭರತಖಂಡಕ್ಕಿಂತಲೂ ದೊಡ್ಡದಿರುವದು ಎಂದಿಗಾದರೂ ಸಂಭವನೀಯವೇ ಎಂದು ಅವರು ಶಂಕಿಸಬಹುದು. ಅಹುದು, ಅದು ನಿಜವಾಗಿಯೇ ಅದು ದೊಡ್ಡದಾಗಿದೆ. ಏಕೆಂದರೆ, ಕರ್ನಾಟಕದ ಸ್ಥೂಲ ಶರೀರವು ಸಂಕುಚಿತವಾಗಿದ್ದರೂ ಸೂಕ್ಷ್ಮ ಶರೀರವು ಅತಿ ವಿಸ್ತಾರವಾಗಿದೆ. ಕರ್ನಾಟಕದಿಂದ ಪ್ರಸೃತವಾದ ವಿಚಾರಗಳು ಇಂದಿಗೆ ಇಡೀ ಪ್ರಪಂಚದಲ್ಲಿ ಹರಡಿಕೊಂಡಿವೆ. ಕರ್ನಾಟಕ ಸಂಸ್ಕೃತಿಯು ಇಡೀ ಪ್ರಪಂಚವನ್ನು ಕೈವಶ ಮಾಡಿಕೊಂಡಿದೆ. ಈ ಕರ್ನಾಟಕ ಸಂಸ್ಕೃತಿಯನ್ನು ಕಾಪಾಡುವದೆಂದರೇನೇ ಅದರ ಸೂಕ್ಷ್ಮ ಶರೀರವನ್ನು ರಕ್ಷಿಸುವದು. ಕರ್ನಾಟಕವು ಭರತಖಂಡದ ಸಂಸ್ಕೃತಿಯನ್ನೆಲ್ಲ ಪಚನ ಮಾಡಿಕೊಂಡಿರುವದಲ್ಲದೆ, ತನ್ನ ವಿಶಿಷ್ಟ ಸಂಸ್ಕೃತಿಯನ್ನು ಆದರಲ್ಲಿ ಬೆರಿಸಿ, ಅದನ್ನು ಮತ್ತಿಷ್ಟು ಪುಷ್ಟವನ್ನಾಗಿಯೂ, ವ್ಯಾಪಕವನ್ನಾಗಿಯೂ ಮಾಡಿರುವದು. ಅದು ಭರತಖಂಡದ ಧಾರ್ಮಿಕ ಕಲ್ಪನೆಗಳೆಲ್ಲವನ್ನೂ ತನ್ನಲ್ಲಿ ಸೇರಿಸಿಕೊಂಡಿರುವದಲ್ಲದೆ, ತನ್ನ ವಿಶಿಷ್ಟವಾದ ಧಾರ್ಮಿಕ ಕಲ್ಪನೆಗಳಿಂದ ಭರತಖಂಡದ ಧರ್ಮಕ್ಕೆ ಹೆಚ್ಚು ಉಜ್ವಲವಾದ ಸ್ವರೂಪವನ್ನು ಕೊಟ್ಟಿರುವದು. ಆದ ಕಾರಣವೇ ನಾವು ನಮ್ಮ ಕರ್ನಾಟಕವು ಭರತಖಂಡಕ್ಕಿಂತ, ವಿಶ್ವಕ್ಕಿಂತ ವ್ಯಾಪಕವಾಗಿರುತ್ತದೆಂದೆನ್ನುತ್ತೇವೆ. "ಜಯ ಕರ್ನಾಟಕ" ಶಬ್ದದ ಉಚ್ಚಾರವಾದೊಡನೆಯೇ ಅದರ ಸಂಸ್ಕೃತಿಯ ವಿರಾಟ್ ಸ್ವರೂಪವು ನಮ್ಮ ಕಣ್ಣಮುಂದೆ ಕಟ್ಟುತ್ತದೆ. ಸಾರಾಂಶ, ಕರ್ನಾಟಕದ ಸ್ಥೂಲ ಶರೀರವು ಚಿಕ್ಕದಾದರೂ ಸೂಕ್ಷ್ಮ, ಕಾರಣ ಶರೀರಗಳು ಅತ್ಯಂತ ವ್ಯಾಪಕವಾಗಿವೆ. ಅವುಗಳ ಮರ್ಮವನ್ನು ಮನನ ಮಾಡಿದರೆ, ನಿದಿಧ್ಯಾಸಮಾಡಿದರೆ 'ಜಯಕರ್ನಾಟಕ'ವೆಂದೆನ್ನುವದರಿಂದ, ಸಕೃದ್ದರ್ಶನಕ್ಕೆ ತೋರುವ ಸಂಕುಚಿತ ದೃಷ್ಟಿಯ ದೋಷವು ತಾನಾಗಿಯೇ ದೂರವಾಗುವದು.

ಈ ಅಧ್ಯಾತ್ಮ ದೃಷ್ಟಿಯಿಂದ ನೋಡುವ ಪದ್ಧತಿಯು ಭಾರತೀಯರಿಗೆ ಹೊಸದಲ್ಲ. ಇಷ್ಟೇ ಅಲ್ಲ, ಹೀಗೆ ನೋಡುವದೇ ಅವರ ಪರಂಪರಾಗತವಾದ

ಸಾಂಪ್ರದಾಯವು. ನಾನು ವೈಷ್ಣವನು, ನಾನು ವೀರಶೈವನು ಎಂದೊಡನೆಯೇ ನಾನು ಬ್ರಾಹ್ಮಣನು, ನಾನು ಆರ್ಯಧರ್ಮದವನು ಎಂಬುದನ್ನು ಹೇಗೆ ಬೇರೆ ಹೇಳಲಿಕ್ಕೆ ಬೇಡವೋ ಹಾಗೆ, ನಾನು ಕರ್ನಾಟಕನು, ನಾನು ಮಹಾರಾಷ್ಟ್ರೀಯನು ಎಂದ ಕೂಡಲೆ ನಾನು ಭಾರತೀಯನು ಎಂಬುದನ್ನು ಬೇರೆ ಹೇಳುವ ಕಾರಣವೇ ಉಳಿಯಲಿಲ್ಲ. ನಾನು ವೈಷ್ಣವನು, ನಾನು ಸ್ಮಾರ್ತನು ಎಂದು ಕರೆದುಕೊಂಡ ಮಾತ್ರಕ್ಕೆ ಬ್ರಾಹ್ಮಣ ಧರ್ಮಕ್ಕೆ ಸಾಮಾನ್ಯವಾದ ಧರ್ಮಗಳು ನಮ್ಮ ಕಣ್ಮರೆಯಾಗುವದಿಲ್ಲವಲ್ಲವೇ ? ಅದಕ್ಕೆ ಬದಲಾಗಿ ಅವು ಸ್ಫುಟವಾಗಿ ನಮ್ಮ ಅಂತಃಚಕ್ಷುವಿನೆದುರಿಗೆ ನಿಲ್ಲುವವು; ಅಲ್ಲದೆ, ಅವಕ್ಕಿಂತ ಹೆಚ್ಚಿನ ಹಲವು ಧರ್ಮಗಳ ಕಲ್ಪನೆಯೂ ನಮಗೆ ಆಗುವದು. ಹಾಗೆಯೇ ನಾನು ಕರ್ನಾಟಕನು, ನಾನು ಮಹಾರಾಷ್ಟ್ರೀಯನು ಎಂದು ಹೇಳಿಕೊಂಡ ಮಾತ್ರಕ್ಕೆ, ನಾನು ಭಾರತೀಯನು ಎಂಬ ಕಲ್ಪನೆಯು ನಮ್ಮ ಕಣ್ಮರೆಯಾಗಲು ಕಾರಣವೇನೂ ಇಲ್ಲ. ಹಾಗೆ ಆಗುವದು ನಮ್ಮ ದೃಷ್ಟಿದೋಷವು; ಅಜ್ಞಾನದ ಪರಿಣಾಮವು; ಪಾಶ್ಚಾತ್ಯರ ಅನುಕರಣ–ಸಂಸ್ಕಾರಗಳ ಫಲವು. ಧರ್ಮದ ವಿಷಯದಲ್ಲಿ ಇಂಥ ಪ್ರಯೋಗಗಳ ಯಥಾರ್ಥ ಕಲ್ಪನೆಯು ನಮ್ಮಲ್ಲಿ ಸಾಮಾನ್ಯರಿಗೂ ಕೂಡ ಇರುತ್ತದೆ. ಆದರೆ ಧರ್ಮದ ವಿಷಯದಲ್ಲಿಯ ಈ ಶಬ್ದಪ್ರಯೋಗವನ್ನು ರಾಷ್ಟ್ರದ ವಿಷಯದಲ್ಲಿ ಉಪಯೋಗಿಸಿದೊಡನೆಯೇ ಅನೇಕರು ಬೆಚ್ಚಿಬೀಳುತ್ತಾರೆ; ಹಾಗು ನಮ್ಮ ಮೇಲೆ ಸಂಕುಚಿತತ್ವದ ದೋಷವನ್ನಾರೋಪಿಸುತ್ತಾರೆ. ವಾಸ್ತವವಾಗಿ ನೋಡಿದರೆ, ಹಾಗೆ ಮಾಡಲು ಏನೂ ಕಾರಣವಿರುವದಿಲ್ಲ. ಪಾಶ್ಚಿಮಾತ್ಯರಲ್ಲಿ ದೇಶಾಭಿಮಾನದ ಸ್ವರೂಪವು ಸಂಕುಚಿತವಾಗಿರುತ್ತದೆ. ಅದನ್ನನುಸರಿಸುವದು ನಮಗೆ ಯೋಗ್ಯವಲ್ಲ. ಆದುದರಿಂದ, ನಾವು ನಮ್ಮ ಸನಾತನ ಸಂಸ್ಕೃತಿಯ ಪದ್ಧತಿಯನ್ನನುಸರಿಸಿ, ನಾನು ಕರ್ನಾಟಕನು, ನಾನು ಭಾರತೀಯನು ಎಂಬಿವೇ ವಿಚಾರಗಳಿಗೆ ವ್ಯಾಪಕಾರ್ಥವನ್ನು ಕಲ್ಪಿಸಬೇಕು. ನಮ್ಮ ಲಕ್ಷವು ಅವುಗಳ ಸ್ಥೂಲ ಶರೀರಗಳ ಕಡೆಗೆಳೆಯುವಂತೆಯೇ ಸೂಕ್ಷ್ಮ ಕಾರಣ ಶರೀರಗಳ ಕಡೆಗೂ ಎಳೆಯಲ್ಪಡಬೇಕು. ಈ ಬಗೆಯಾಗಿ ನಮ್ಮ ದೃಷ್ಟಿಯು ವಿಸ್ತಾರವಾಗಿರದಿದ್ದರೆ ಮಾತ್ರ ನಾವು ನಿಜವಾಗಿಯೇ ಸಂಕುಚಿತತ್ವದ ದೋಷಕ್ಕೆ ಗುರಿಯಾಗಬೇಕಾದೀತು! ಆದುದರಿಂದ ನಾವು ‘ ಜಯಕರ್ನಾಟಕ ’, ‘ ಜಯಮಹಾರಾಷ್ಟ್ರ ’, ‘ ಜಯಭಾರತ ’

ವೆಂಬೀ ಶಬ್ದಗಳ ಅರ್ಥವನ್ನು ಮನನ ಮಾಡಿ, ಬಲು ಎಚ್ಚರದಿಂದ ಅದನ್ನು ಉಪಯೋಗಿಸಬೇಕು. ಉಚ್ಚ ಭಾವನೆಯಿಂದ ಯುಕ್ತರಾಗಿದ್ದರೇನೇ ಆ ಮಂತ್ರಗಳನ್ನುಚ್ಚರಿಸುವ ಅಧಿಕಾರವು ನಮಗೆ ಪ್ರಾಪ್ತವಾಗುವದು. ಶ್ರದ್ಧೆಯಿಂದ ಅವುಗಳ ಜಪವನ್ನು ಸತತ ಮಾಡಿದರೆ ಆ ಬಗೆಯ ಉಚ್ಚ ಭಾವನೆಯು ನಮ್ಮ ಮನಸ್ಸಿನಲ್ಲಿ ನೆಲೆಗೊಳ್ಳುವದು. ಅನಧಿಕಾರಿಯಾದವನು ವೈದಿಕ ಮಂತ್ರಗಳನ್ನುಚ್ಚರಿಸುವದು ಪಾಪವಂತೆ. ಅದೇ ಮೇರೆಗೆ ಜಯಕರ್ನಾಟಕದ ಅರ್ಥದ ಮರ್ಮವನ್ನರಿಯದೆ ಅಪವಿತ್ರವಾದ ಭಾವನೆಯಿಂದ ಅದನ್ನುಚ್ಚರಿಸಿದರೆ ಅನೇಕ ಅನರ್ಥಗಳುಂಟಾಗುವ ಸಂಭವವುಂಟು. ಕರ್ನಾಟಕ ಶಬ್ದವನ್ನುಚ್ಚರಿಸಿದೊಡನೆಯೇ ಕೀಸರಗೊಳ್ಳುವವರಲ್ಲಿ ಅಶ್ರದ್ಧೆಯೂ ಅಜ್ಞಾನವೂ ತುಂಬಿರುವದರಿಂದ ಅವರಿಗೆ ಇಂಥ ಅನರ್ಥಭೂತಗಳು ಬೆನ್ನಟ್ಟುತ್ತವೆ. 'ಜಯಕರ್ನಾಟಕ'ದ ಯಥಾರ್ಥ ಜ್ಞಾನವನ್ನು ಮಾಡಿಕೊಳ್ಳುವದೇ ಇದಕ್ಕೆ ಔಷಧ. 'ಜಯಕರ್ನಾಟಕ'ವೆಂಬುದೇ ಅದಕ್ಕೆ ಉಚ್ಚಾಟನ ಮಂತ್ರ.

ಇಷ್ಟೊಂದು ಗಹನ ವಿಚಾರದಲ್ಲಿ ಬೀಳುವದಕ್ಕಿಂತಲೂ ಸುಸೂತ್ರವಾಗಿ 'ಜಯಭಾರತ', 'ಜಯಭೂದೇವಿ' ಎಂಬಿವೇ ಮುಂತಾದ ಸಹಜವಾಗಿ ಗೋಚರವಾಗುವ ವ್ಯಾಪಕವಾದ ಕಲ್ಪನೆಗಳನ್ನೇಕೆ ಇಟ್ಟುಕೊಳ್ಳಕೂಡದು, ಎಂದು ಕೆಲವರು ಕೇಳಬಹುದು. ಅದಕ್ಕೆ ನಮ್ಮ ಉತ್ತರವೇನೆಂದರೆ, ಹಾಗೆ ಇಟ್ಟುಕೊಳ್ಳುವದು ಆಧ್ಯಾತ್ಮ ದೃಷ್ಟಿಯಿಂದ ಸಂಕುಚಿತವಾದುದು, ಸನಾತನ ಸಂಸ್ಕೃತಿಯ ಸಂಪ್ರದಾಯಕ್ಕೆ ವಿರುದ್ಧವಾದುದು. ನಾನು ಸ್ಮಾರ್ತನು, ನಾನು ವೀರಶೈವನು ಎಂದೆನಿಸಿಕೊಳ್ಳದೆ, ನಾವೆಲ್ಲರೂ ಆರ್ಯರೆಂದಿಷ್ಟೇ ಏಕೆ ಕರೆದುಕೊಳ್ಳಬಾರದೆಂಬ ಪ್ರಶ್ನೆಗೆ ಯಾವ ಉತ್ತರವೋ ಇದಕ್ಕೂ ಅದೇ ಉತ್ತರ.

ವ್ಯಕ್ತಿಗೊಂದು ವಿಶೇಷ ಧರ್ಮವಿರುತ್ತದೆ. ವ್ಯಕ್ತಿಯು ಆ ತನ್ನ ಧರ್ಮಕ್ಕನುಸಾರವಾಗಿ ಕಾರ್ಯ ಮಾಡಿದರೇನೇ ಅದು ಫಲಿಸುತ್ತದೆ. ಅದೇ ಆತನ ವೈಶಿಷ್ಟ್ಯ. ಹಾಗೆಯೇ ಕರ್ನಾಟಕಕ್ಕೂ ಒಂದು ವೈಶಿಷ್ಟ್ಯವಿರುತ್ತದೆ. ಆ ವೈಶಿಷ್ಟ್ಯವನ್ನು ಕಂಡುಹಿಡಿದು ಕೆಲಸ ಮಾಡುವದೇ ಕನ್ನಡಿಗರ ಸಹಜ ಧರ್ಮ. ಹಾಗೆ ಮಾಡದಿರುವದರಿಂದಲೇ ನಮ್ಮ ಉತ್ಸಾಹವು ಅಡ್ಡ ದಾರಿಯನ್ನು ಹಿಡಿದಿರುತ್ತದೆ. ಆದರೆ ಆ ವಿಶಿಷ್ಟ ಧರ್ಮದ ಯಥಾರ್ಥ ಜ್ಞಾನವಾಗುವದು

ಮಾತ್ರ ಸುಲಭವಲ್ಲ. ಆತ್ಮಜ್ಞಾನವಾದೊಡನೆಯೇ ಮುಕ್ತಿಯಂತೆ! ಹಾಗೆ ಕರ್ನಾಟಕಕ್ಕೆ ಆತ್ಮಜ್ಞಾನವಾದೊಡನೆಯೇ ಅದಕ್ಕೂ ಮುಕ್ತಿಯು ದೊರೆಯಲೇ ಬೇಕು! ಇದಕ್ಕೆ ವೇದಾಂತದಲ್ಲಿ ಸ್ವಸ್ವರೂಪಜ್ಞಾನ ಅಥವಾ ಬಿಂಬಾಪರೋಕ್ಷ ಜ್ಞಾನವೆನ್ನುತ್ತಾರೆ. ಆ ಬಿಂಬಾಪರೋಕ್ಷಜ್ಞಾನವಾಗುವದಂತೂ ದೂರೇ ಉಳಿಯಿತು! ಕರ್ನಾಟಕದ ಸೂಕ್ಷ್ಮ ಶರೀರ ಅಂದರೆ, ಕರ್ನಾಟಕದ ವಿಶಿಷ್ಟ ಸಂಸ್ಕೃತಿಯ ಜ್ಞಾನವಾದರೂ ನಮಗೆ ಎಲ್ಲಿ ಆಗಿರುವದು? ಯಾವದೊಂದು ದೇಶದಲ್ಲಿ ಬಾಹ್ಯತಃ ಕಾಣಬರುವ ಕೃತಿಗಳಿಂದ ಅದರ ಸೂಕ್ಷ್ಮ ಶರೀರವನ್ನು ಅಥವಾ ಅದರ ಸಂಸ್ಕೃತಿಯ ವಿಶಿಷ್ಟ ಧರ್ಮವನ್ನು ನಿಶ್ಚಯಿಸುವದು ಸರಿಯಷ್ಟೆ. ಗಡಿಯಾಳದಲ್ಲಿ ಒಳಯಂತ್ರಗಳೇ ಮುಖ್ಯವಾದವುಗಳು. ಅವುಗಳ ಮೇಲೆಯೇ ನಿಜವಾದ ಕಾಲವು ಅವಲಂಬಿಸಿರುತ್ತದೆ. ಒಳಯಂತ್ರಗಳ ಚಾಲನದಂತೆ ಹೊರಗಿನ ಮುಳ್ಳುಗಳು ತಿರುಗುತ್ತವೆ. ಹಾಗೆಯೇ ದೇಶದ ಮನಃಸ್ಥಿತಿಯು ಈ ಗಡಿಯಾಳದ ಒಳಯಂತ್ರವು. ಅದರ ಕಡೆಗೆ ಲಕ್ಷ ಕೊಡುವದೇ ನಮ್ಮ ಮುಖ್ಯ ಕೆಲಸ. ಸಾರಾಂಶ, ದೇಶದ ಮನಸ್ಥಿತಿಯನ್ನು ಸಿದ್ಧಗೊಳಿಸುವ ಭಾಷೆ, ಇತಿಹಾಸ, ಶಿಲ್ಪಕಲೆ ಇವೆ ಮುಂತಾದವುಗಳು ಆ ಗಡಿಯಾಳದ ಚಕ್ರಗಳು; ಧರ್ಮವೇ ಸ್ಪ್ರಿಂಗು; ವ್ಯಕ್ತಿಯ ವಿಶಿಷ್ಟ ಧರ್ಮಕ್ಕೆ ಆ ವ್ಯಕ್ತಿಯು ಹುಟ್ಟಿದ ಕುಲ, ಆತನ ಪೂರ್ವಪರಂಪರೆ, ಆತನಿಗುಂಟಾದ ಸಂಸ್ಕಾರಗಳು, ಆತನ ಪರಿಸ್ಥಿತಿ ಇವೆಲ್ಲವೂ ಸಹಾಯವಾಗುವಂತೆಯೇ ಕರ್ನಾಟಕದ ವ್ಯಕ್ತಿ ಧರ್ಮವನ್ನು ನಿಶ್ಚಯಿಸುವದಕ್ಕೆ ಅದರ ಭಾಷೆ, ಇತಿಹಾಸ ಇವೇ ಮುಂತಾದವುಗಳು ಕಾರಣವಾಗುತ್ತವೆ. ಆದುದರಿಂದ, ನಾವು ಕರ್ನಾಟಕದ ಸ್ವಧರ್ಮವನ್ನರಿಯಬೇಕಾದರೆ ಇವೆಲ್ಲವುಗಳ ಮರ್ಮವನ್ನರಿಯಬೇಕು. ಕನ್ನಡ ಭಾಷೆಯ ವೈಶಿಷ್ಟ್ಯವೇನು? ಕರ್ನಾಟಕ ಇತಿಹಾಸದ ಮರ್ಮವೇನು? ಕರ್ನಾಟಕ ಲಲಿತಕಲೆಯ ಇಂಗಿತವೇನು? ಕನ್ನಡ ಗಾಯನಕಲೆಯ ಪದ್ಧತಿಯೇನು? ಕರ್ನಾಟಕದೊಳಗಿನ ಧರ್ಮಗಳ ರಹಸ್ಯವೇನು? ಇವೆಲ್ಲವುಗಳನ್ನು ತಿಳಿದುಕೊಂಡು ಕಾರ್ಯಕ್ಕೆ ಪ್ರವೃತ್ತರಾದರೆ ಮಾತ್ರವೇ ಕರ್ನಾಟಕದ ನಿಜವಾದ ಉದ್ಧಾರವಾಗುವದು.

ಆದರೆ, ಈ ಗೂಡಾರ್ಥವು, ಈ ರಹಸ್ಯವು ಸಾಮಾನ್ಯ ಜನರಿಗೆ ತಿಳಿಯುವ ಬಗೆ ಹೇಗೆ? ಅದರ ನಿಜವಾದ ಅರ್ಥವು ಅವರಿಗೆ ತಿಳಿಯದ್ದರಿಂದ ಅರ್ಥಕ್ಕೆ ಅಪಾರ್ಥವನ್ನು ಕಲ್ಪಿಸಿ, ಅವರು ಅನೇಕ ಅನರ್ಥಗಳನ್ನು ಮಾಡ

ಬಹುದಲ್ಲವೆ? ಇದಕ್ಕೇನು ಗತಿ ಎಂದು ಕೆಲವರು ಆಕ್ಷೇಪಿಸಬಹುದು. ಅದಕ್ಕೆ ನಮ್ಮ ಉತ್ತರವೇನೆಂದರೆ, ಇದಕ್ಕೆ ಒಂದೇ ಮದ್ದು. ಅದೇನೆಂದರೆ, ಅದರ ಯಥಾರ್ಥ ಜ್ಞಾನವನ್ನು ಅವರಿಗೆ ಮೇಲಿಂದ ಮೇಲೆ ಮಾಡಿಕೊಟ್ಟು ಅದರ ಸತತ ಮನನ ನಿಧಿಧ್ಯಾಸನಗಳನ್ನು ಅವರಿಗೆ ಮಾಡಹಚ್ಚುವದು. ಸಾಮಾನ್ಯ ಜನರು ಗಹನವಾದ ವಿಚಾರಗಳನ್ನು ಗ್ರಹಣ ಮಾಡಲಾರರೆಂಬ ಭಯದಿಂದ, ಅವರೆದುರಿಗೆ ತಪ್ಪು ಕಲ್ಪನೆಗಳನ್ನಿಡುವದು ಎಂದಿಗಾದರೂ ಸರಿಯಾದೀತೇ? ಈ ತರೆಹದ ಅಂಜಿಕೆಯು ಯಾವ ವಿಷಯದಲ್ಲಿ ಇಲ್ಲ? ಪ್ರತಿಯೊಂದು ವಿಷಯದಲ್ಲಿಯೂ ಇದ್ದೇ ಇರುತ್ತದೆ. ಉತ್ಕಟವಾದ ಕರ್ನಾಟಕದ ಅಭಿಮಾನವು ತಾಮಸ ಜನರಲ್ಲಿ ಪರಪ್ರಾಂತಗಳ ವಿಷಯಕವಾದ ದ್ವೇಷಬುದ್ಧಿಯನ್ನು ತಾಳುವ ಸಂಭವವುಂಟು. ಉತ್ಕಟವಾದ ಜಾತ್ಯಭಿಮಾನವು ಅನೇಕಸಲ ಅನ್ಯಜಾತಿಗಳ ದೂಷಣೆಯಲ್ಲಿ ಪರಿಣಮಿಸುತ್ತಿರುವದನ್ನು ನಾವು ಈಗ ಕಾಣುವದಿಲ್ಲವೆ? ಉತ್ಕಟ ಪ್ರೇಮವು ಅನ್ಯರ ದ್ವೇಷರೂಪವನ್ನು ಹೊಂದುವದು. ಉತ್ಕಟ ದೇಶಾಭಿಮಾನವು ಪರದೇಶಗಳನ್ನು ತಿರಸ್ಕರಿಸುವದರಲ್ಲಿ ಪರಿಣಮಿಸಬಹುದು. ಉತ್ಕಟವಾದ ಸ್ವಮತ ಭಕ್ತಿಯು ಅನ್ಯಮತಗಳ ಬಗ್ಗೆ ಹೇಯಬುದ್ಧಿಯನ್ನು ಹುಟ್ಟಿಸಬಹುದು. ಅವುಗಳ ವಿಷಯಕವಾದ ಅಸಹಕಾರವು ಅಸಹ್ಯವಾದ ರೂಪವನ್ನಾಂತು ಅಸಹಿಷ್ಣುತೆಯ ರೂಪವನ್ನು ಹೊಂದುವ ಸಂಭವವುಂಟು. ಸಾತ್ವಿಕ ಬಹಿಷ್ಕಾರವು ತಾಮಸ ಬಹಿಷ್ಕಾರವಾಗುವದು. ಸಾರಾಂಶ, ಉತ್ಕಟವಾದ ಸದ್ಗುಣವು ತಾಮಸ ಜನರಲ್ಲಿ ದುರ್ಗುಣದ ರೂಪವನ್ನು ಧರಿಸುತ್ತದೆ. ಸಾತ್ವಿಕ ತಾಮಸ ಭಾವನೆಗಳ ನಡುವಿನ ಗೆರೆಯು ಯಾವಾಗಲೂ ಅತ್ಯಂತ ಸೂಕ್ಷ್ಮವಾದದ್ದಿರುತ್ತದೆ. ಪ್ರೇಮ ಮತ್ತು ದ್ವೇಷ, ಭಕ್ತಿ ಮತ್ತು ನಿಂದೆ, ಸದಭಿಮಾನ ಮತ್ತು ದುರಭಿಮಾನ, ಸದ್ಗುಣ ಮತ್ತು ದುರ್ಗುಣ ಇವುಗಳ ಮೇರೆಯನ್ನು ಗೊತ್ತುಪಡಿಸುವದು ಯಾವಾಗಲೂ ಅತ್ಯಂತ ಕಠಿಣವಾದ ಕೆಲಸವೇ ಆಗಿರುತ್ತದೆ. ಸಾರಾಂಶ, ಈ ತರಹದ ಅಂಜಿಕೆಯು ಅನಿವಾರ್ಯವಾದುದು. ಅದಕ್ಕೆ ಆ ಉತ್ಕಟವಾದ ಭಾವನೆಯನ್ನು ಸಮೂಲವಾಗಿ ನಾಶಪಡಿಸುವದು ಅಲ್ಲ; ನಿಜಜ್ಞಾನ ಕೊಡುವುದು ಔಷಧವು. ಅದೇ ಮೇರೆಗೆ 'ಜಯಕರ್ನಾಟಕ'ದ ಬಗ್ಗೆ ಜನರಲ್ಲಿ ತಪ್ಪು ತಿಳವಳಿಕೆಯುಂಟಾದರೆ ಮೇಲಿಂದ ಮೇಲೆ ಅದರ ಯಥಾರ್ಥ ಜ್ಞಾನವನ್ನು ಮಾಡಿ ಕೊಡುವದೇ ನಮ್ಮ ಧರ್ಮವು.

ಈ ಪ್ರಕಾರವಾಗಿ 'ಜಯಕರ್ನಾಟಕ' ಶಬ್ದದಲ್ಲಿ ಅತ್ಯಂತ ವ್ಯಾಪಕವಾದ ಅರ್ಥವು ಅಡಕವಾಗಿರುವದು.

## ಕನ್ನಡ ಕನ್ನಡಿ

ಇದು ಮುಮ್ಮೈ ಕನ್ನಡಿ ಕೇಳ್ ಗೆಳೆಯಾ ।
ಇದು ಮದ್ರಾಸದ ಕನ್ನಡಿಯು ॥
ಇದು ಮೈಸೂರವರಿಡಿಗನ್ನಡಿ ನೋಣ್ ।
ಇದು ಕೊಡಗದ ಕನ್ನಡಿ ಕಾಣ್ಬೆ ॥ ೧ ॥
ಇದು ಭಾಗ್ಯದ ನಗರದ ಕನ್ನಡಿ ಕೂ-
ಡಿದರಿವು ನಿನ್ನಿಡಿ ಕನ್ನಡಿಯು ॥ ೨ ॥

## ರಕ್ಷಿಸು ಕರ್ನಾಟಕದೇವಿ

ರಕ್ಷಿಸು ಕರ್ಣಾಟಕ ದೇವಿಯೆ ಸಂ- ।
ರಕ್ಷಿಸು ಕರ್ಣಾಟಕ ದೇವಿ ॥ ಪಲ್ಲ ॥
ಕದಂಬಾದಿ ಸಂಪೂಜಿತ ಚರಣೆ ।
ಗಂಗಾರಾಧಿತ ಪದನಖ ಸರಣೆ ॥
ರಾಷ್ಟ್ರಕೂಟ ಮಣಿ ಕಂಠಾಭರಣೆ ।
ಚಾಲುಕ್ಯಾಂಶುಕ ಶೋಭಾವರಣೆ ॥ ೧ ॥
ಯಾದವ ಮಣಿ ಕಂಕಣಾಂಶು ಸುಂದರಿ ।
ಬಲ್ಲಾಳರ ಭುಜ ಭೂಷಣ ಬಂಧುರೆ ॥
ವಿಜಯನಗರ ಮಂಗಳಮಣಿ ಕಂಧರೆ ।
ಮೈಸೂರೊಡೆಯರ ಸುಕೀರ್ತಿ ಮಂದಿರೆ ॥
ಮಾಂಡಲಿಕಾವನ ಭಾರಧುರಂಧರೆ ॥ ೨ ॥
ಮತಸ್ಥಾಪಕ ಸ್ಥಾಪಿತ ಪ್ರಾಣೆ ।
ಶಿಲ್ಪಕಲಾ ಮಂಟಪ ಸುಸ್ಥಾನೆ ।
ಕವಿಜನ ಕೀರ್ತಿತ ಸುಯಶಸ್ ತ್ರಾಣೆ ।
ಸಾಧು ಸತ್ಕಥಾ ಭೇರಿಧ್ವಾನೆ ।
ಸ್ವೇತಿಹಾಸ ನೀರಾಜನ ರಾಣೆ ॥ ೩ ॥

— ಶಾಂತಕವಿ

# ೧೭ನೆಯ ಪ್ರಕರಣ

## ಧರ್ಮದಲ್ಲಿ ಕರ್ನಾಟಕತ್ವ

೫ ಗೀತಾ ಗ್ರಂಥಗಳು ೧೯೩೩-೧೯೩೮. ೭ ವೇದಾಂತ ಗ್ರಂಥಗಳು ೧೯೪೧-೧೯೫೬

ನಾನು ನನ್ನ ಜೀವಮಾನದಲ್ಲಿ ನಡೆಯಿಸಿರುವ ಐದು ಕ್ಷೇತ್ರಗಳಲ್ಲಿಯೂ ಕರ್ನಾಟಕತ್ವ ಎಂಬುದೊಂದನ್ನೇ ನನ್ನ ಧ್ಯೇಯವನ್ನಾಗಿ ಇಟ್ಟುಕೊಂಡಿರುವೆನೆಂಬುದನ್ನೂ ಆ ಕಲ್ಪನೆಯ ವಿಕಾಸವನ್ನು ಪೂರ್ಣಗೊಳಿಸುವದಕ್ಕೆ ನನ್ನಂಥ ಒಬ್ಬ ಸಾಧಾರಣ ವ್ಯಕ್ತಿಗೆ ಸಾಧ್ಯವಾದ ಮಟ್ಟಿಗೆ ಹೇಗೆ ಪ್ರವರ್ತಿಸಿದೆನೆಂಬುದನ್ನೂ ಹಿಂದಿನ ಪ್ರಕರಣಗಳಲ್ಲಿ ಹೇಳಿಯೇ ಇರುವೆನು. ಇವುಗಳಲ್ಲಿ ಧರ್ಮದಲ್ಲಿ ಕರ್ನಾಟಕತ್ವ ಎಂಬ ವಿಷಯವನ್ನು ಬೇಕೆಂತಲೇ ವಿಸ್ತಾರ ಮಾಡಹೋಗಲಿಲ್ಲ. ಅದಕ್ಕೆ ಇಲ್ಲಿ ಕಾರಣಗಳನ್ನು ಕೊಟ್ಟು ಆ ಬಗ್ಗೆ ನನ್ನ ವಿಚಾರಗಳೇನಿರುವವೆಂಬದನ್ನು ಕೂಡ ಸಂಕ್ಷೇಪವಾಗಿ ವಿವರಿಸುವೆ.

ನಿಜವಾಗಿ ಧರ್ಮದಲ್ಲಿ ಕರ್ನಾಟಕತ್ವವೆಂಬ ವಿಷಯವು ಮಿಕ್ಕೆಲ್ಲ ವಿಷಯಗಳಿಗಿಂತಲೂ ನನಗೆ ಮಹತ್ವದ್ದಾಗಿತ್ತು. ಏಕೆಂದರೆ, ನಾನು ಮೂಲತಃ, ಮುಖ್ಯತಃ ಆಧ್ಯಾತ್ಮಿಕ ಪ್ರವೃತ್ತಿಯುಳ್ಳವನು. ಮತ್ತು ಅದೇ ಕಾರಣಕ್ಕೋಸ್ಕರವೇ ಅದು ಮಿಕ್ಕೆಲ್ಲ ವಿಷಯಗಳಿಗಿಂತಲೂ ಕಠಿಣವಾಗಿತ್ತು. ಅಂತೇ ಧರ್ಮದ ಬಗ್ಗೆ ಮೊದಲಿಸಿಂದಲೂ ವಿಚಾರ ಮಾಡುತ್ತಿದ್ದರೂ, ಸ್ವತಃ ಶಕ್ಯವಾದ ಮಟ್ಟಿಗೆ ಆಧ್ಯಾತ್ಮಿಕ ಜೀವನವನ್ನು ನಡೆಯಿಸಿಕೊಂಡು ಬಂದಿದ್ದರೂ ಅದನ್ನೊಂದನ್ನೇ ಸರ್ವಸ್ವವಾಗಿ ನನ್ನ ಧ್ಯೇಯವನ್ನಾಗಿ ಇಟ್ಟುಕೊಳ್ಳುವದನ್ನು ಕಟ್ಟಕಡೆಗೆ ಇರಿಸಿದ್ದೆನು. ನಾನು, ನಿಜವಾಗಿಯೇ ೧೯೩೨ರಲ್ಲಿ ವಾನಪ್ರಸ್ಥಾಶ್ರಮವನ್ನು ಕೈಕೊಳ್ಳುವ ವರೆಗೆ ಅದನ್ನು ಮುಂದೂಡಿದೆ. ರಾಜಕಾರಣದಲ್ಲಿ ನನ್ನನ್ನು ೧೯೩೨ರಲ್ಲಿ ಸೆರೆಹಿಡಿದು ಕಲಘಟಗಿಯಲ್ಲಿ ದಿಗ್ಬಂಧನದಲ್ಲಿಟ್ಟಾಗ ದೇವರು ನನ್ನ ಮೂಲ ಇಚ್ಛೆಯಂತೆ ಆ ಸಂಧಿಯನ್ನು ತಂದು ಕೊಟ್ಟ ಇರಲಿ. ೪೨ ವರ್ಷ

ಗಳ ಹಿಂದೆಯೇ ಲೋ. ಟಿಳಕರು ನನ್ನ ಆಳವಾದ ಗೀತಾಭ್ಯಾಸದ ಬಗ್ಗೆ ಕರ್ಣೋಪಕರ್ಣವಾಗಿ ಕೇಳಿದ್ದರು. ಅವರು ಅತಿಶಯವಾದ ದೊಡ್ಡ ವ್ಯಕ್ತಿ. ನಾನು ಆ ಮಾನದಿಂದ ಬಹಳ ಚಿಕ್ಕವ. ಆಗ ನನ್ನ ಮತ್ತು ಅವರ ಪ್ರತ್ಯಕ್ಷ ಪರಿಚಯವಿದ್ದಿಲ್ಲ. ಆದರೂ ೧೯-೭-೧೯೧೫ನೆಯ ಇಸವಿ ದಿವಸ ತಮ್ಮ ಗೀತಾರಹಸ್ಯದ ಭಾಷಾಂತರವನ್ನು ನಾನೇ ಮಾಡಬೇಕೆಂದೂ ಅದನ್ನು ೬ ತಿಂಗಳಲ್ಲಿ ಪೂರ್ಣಗೊಳಿಸಬೇಕೆಂದೂ ತಿಳಿಸಿದ್ದರು ಆ ಪ್ರಕಾರ ಅದನ್ನು ಪೂರ್ಣಮಾಡಿ ಕೊಟ್ಟೆ. ಟಿಳಕರಿಗೆ ಆನಂದವಾಯಿತು. ಕೊನೆಗಿರುವ ಸಂಸ್ಕೃತ ಶ್ಲೋಕಗಳ ಭಾಷಾಂತರವನ್ನು ಮಾತ್ರ ವೈ. ಕೆರೂರ ವಾಸುದೇವಾಚಾರ್ಯರು ಮಾಡಿರುವರು. ಮುಂದೆ ಟಿಳಕರ ಹೇಳಿಕೆಯ ಮೇರೆಗೆ ತೆಲುಗಿನಲ್ಲಿ, ನನ್ನ ತೆಲುಗು ಮಿತ್ರರ ಮುಖಾಂತರವಾಗಿ ಭಾಷಾಂತರದ ವ್ಯವಸ್ಥೆ ಮಾಡಿ ಕೊಟ್ಟೆ. ನನ್ನ ಕನ್ನಡ ಭಾಷಾಂತರದ ಪ್ರೂಫುಗಳನ್ನು ತೆಲುಗು ಮಿತ್ರನ ಕಡೆಗೆ ಎಷ್ಟೋ ದಿವಸ ಕಳಿಸಿ ಕೊಡುತ್ತಿದ್ದೆ. ಏಕೆಂದರೆ, ತೆಲುಗು ಭಾಷಾಂತರಕಾರರಿಗೆ ಮರಾಠಿಯು ಚೆನ್ನಾಗಿ ಬರುತ್ತಿದ್ದಿಲ್ಲ. ತೆಲುಗು ಗೀತಾರಹಸ್ಯದ ಪ್ರಸ್ತಾವನೆಯಲ್ಲಿ ನನ್ನ ಬಗ್ಗೆ ಉಲ್ಲೇಖವು ಇದೆ. ಕನ್ನಡ ಗೀತಾರಹಸ್ಯವು ಹೊರಡಲಿಕ್ಕೆ ಮುದ್ರಕರ ಅಲಕ್ಷದಿಂದ ಬಹಳ ವಿಲಂಬವಾಯಿತು. ಕೊನೆಗೆ, ಟಿಳಕರು ಬೇಸತ್ತು, ಪ್ರೂಫುಗಳನ್ನು ಮುದ್ರಕರೇ ನೋಡಿ, ತೀವ್ರ ಮುದ್ರಿಸಿ ಕೊಡಬೇಕೆಂದು ಅವರಿಗೆ ಹೇಳಿದರು. ಅವರು ಅವಸರದಿಂದ ಮುದ್ರಣ ಮಾಡಿ ಕೊಟ್ಟದ್ದರಿಂದ ಮುಂದೆ ಅವುಗಳನ್ನು ತಿದ್ದುವದು ಅವಶ್ಯ. ಇರಲಿ.

ನಾಲ್ಕೈದು ವರ್ಷಗಳ ನಂತರ ಟಿಳಕರು ತೀರಿಕೊಂಡರು. ತೀರಿಕೊಂಡು ಒಂದು ವರ್ಷವಾದ ಬಳಿಕ ಒಂದು ದಿವಸ ಟಿಳಕರ ಮಗನಾದ ಶ್ರೀಧರ ಎಂಬವನ ಕಡೆಯಿಂದ ೨೦೦೦ ರೂ.ಗಳ ಚೆಕ್ಕು ಕಳಿಸುತ್ತೇನೆಂದು ಪತ್ರ ಬಂದಿತು.

ಕೆರೂರ ವಾಸುದೇವಾಚಾರ್ಯರು ತೀರಿಕೊಂಡಿದ್ದರು. ನಾನು ಅವರ ಮನೆಯವರಿಗೆ ೫೦೦ ರೂ.ಗಳನ್ನು ಕಳಿಸಬೇಕೆಂದೂ ನನಗೆ ೧೫೦೦ ರೂ. ಮಾತ್ರ ಕಳಿಸಬೇಕೆಂದೂ ತಿಳಿಸಿದೆ. ಆ ಮೇರೆಗೆ ನನಗೆ ೧೫೦೦ ರೂ.ಗಳ ಚೆಕ್ಕು ಬಂದಿತು. ಹೀಗೆ ಅವರ ಮರಣದ ಒಂದು ವರ್ಷದ ನಂತರ ಏಕೆ ಹಣ ಬಂದಿತೋ ಎಂಬುದು ಇನ್ನೂ ನನಗೆ ಗೂಢವೇ ಇದೆ. ಆ

ಮಗನೂ ಆತ್ಮಹತ್ಯ ಮಾಡಿ ತೀರಿಕೊಂಡಿರುವದರಿಂದ ಅದು ತಿಳಿಯು ವಂತೆಯೂ ಇಲ್ಲ.

ನನ್ನ ರಾಜಕೀಯ ಜೀವನದ ಪ್ರಾರಂಭಕ್ಕೆ ಅಂದರೆ, ೧೯೦೫ನೆಯ ಇಸವಿಯ ಸುಮಾರಕ್ಕೆ ನನ್ನ ಮನಸ್ಸಿನ ಮೇಲೆ ಮೂಡಿದ ಮೊದಲನೆಯ ವಾಕ್ಯವೆಂದರೆ ಸ್ಪೆನ್ಸರ ಸಾಹೇಬರ ಶಿಕ್ಷಣ ಮೀಮಾಂಸೆಯಲ್ಲಿಯ ಒಂದು ವಾಕ್ಯ. **ಜನರು ಜಗತ್ತಿನಲ್ಲಿ ಹೇಗೆ "ಇರಬೇಕೆ"ಂಬ ವಿಚಾರವನ್ನು ಮಾಡದೆ ಅನ್ಯರಿಗೆ ಹೇಗೆ "ಕಾಣಬೇಕೆ"ಂಬ ವಿಚಾರವನ್ನೇ ಹಗ ಲಿರುಳು ಮಾಡುತ್ತಿರುತ್ತಾರೆಂಬುದೇ** ಆ ವಾಕ್ಯದ ಮಥಿತಾರ್ಥ. ಆ ಪ್ರವೃತ್ತಿಯನ್ನು ಅವರು ಬಲವಾಗಿ ಟೀಕಿಸಿರುವರು. ಅವರ ಉಪದೇಶವು ನನ್ನ ಜೀವನದಲ್ಲಿ ಬಹಳ ದೊಡ್ಡ ಮಾರ್ಪಾಟು ಮಾಡಿತು. ಆಗಿನಿಂದ ನಾನು ಅವರ ಉಪದೇಶದಂತೆ ಹೇಗೆ ಇರಬೇಕೆಂಬುದನ್ನಷ್ಟೇ ಯೋಚಿಸಬೇಕ ಲ್ಲದೆ ಹೇಗೆ ಕಾಣಬೇಕೆಂಬುದನ್ನು ಮನಸ್ಸಿನಲ್ಲಿ ಕೂಡ ತರಬಾರದು ಎಂದು ನಿಶ್ಚಯಿಸಿದೆ. ಆದರೆ ಅದರಂತೆ ಸಂಪೂರ್ಣವಾಗಿ ನಡೆದಿರುವೆನೆಂದು ಹೇಳು ವದು ಸಾಹಸದ ಮಾತಾದೀತು; ನಡೆಯಲಿಕ್ಕೆ ಮನಃಪೂರ್ವಕವಾಗಿ ಪ್ರಯತ್ನಿ ಸುತ್ತಿರುವೆನು ಎಂದು ಮಾತ್ರ ಧೈರ್ಯದಿಂದ ಹೇಳಬಲ್ಲೆ. ನಿಜವಾಗಿ ವಿಚಾರ ಮಾಡಿದರೆ ಕಣ್ಣಿಗೆ ಕಾಣುವ ಜಗತ್ತೇ ಬೇರೆ, ಇರುವ ಜಗತ್ತೇ ಬೇರೆ. ಕೃತ್ರಿಮ ಜೀವನ ಜಗತ್ತಿನ ಸಾಮಾನ್ಯ ಜೀವನ. ಅದರ ವಿರುದ್ಧ ದಿಶೆಯಲ್ಲಿ ಇರಬೇಕೆ ನ್ನುವವರು ಪ್ರವಾಹದ ವಿರುದ್ಧ ಈಸಬೇಕಾಗುವದು. ಕಣ್ಣಿಗೆ ಗುಡ್ಡದಂತೆ ದೊಡ್ಡದಾಗಿ ಕಾಣುವ ಜೀವನಗಳಲ್ಲಿ ಡೊಗರುಗಳು ಇರುತ್ತವೆ.

ನನ್ನ ಜೀವನವನ್ನು ಸಂಪೂರ್ಣವಾಗಿ ಮಾರ್ಪಾಟುಮಾಡಿದ ಮತ್ತೊಂದು ವಾಕ್ಯವೆಂದರೆ, ಮಧ್ವಾಚಾರ್ಯರ ಮತದಲ್ಲಿ ಮೇಲಿಂದ ಮೇಲೆ ಉಚ್ಚರಿತ ವಾಗುವ **ನಾಹಂ ಕರ್ತಾ ಹರಿಃ ಕರ್ತಾ, ತತ್ಪೂಜಾಕರ್ಮ ಚಾಖಿಲಂ** ಎಂಬ ವಾಕ್ಯ. ಇದರ ರಹಸ್ಯ ನನಗೆ ಒಮ್ಮೆಲೆ ಹೊಳೆಯಲಿಲ್ಲ. ರಾಜ ಕೀಯ ಜೀವನದ ಗುಂಗಿನಲ್ಲಿದ್ದಾಗ ನಾನು ಒಂದು ಬಗೆಯ ಸೊಕ್ಕಿನಲ್ಲಿದ್ದೆ. ಅದನ್ನು ಮಾಡಬೇಕು ಇದನ್ನು ಮಾಡಬೇಕು; ಅದನ್ನು ಮಾಡೇನು ಇದನ್ನು ಮಾಡೇನು ಎನ್ನುತ್ತಿದ್ದೆ. ಆದರೆ ಸಾರ್ವಜನಿಕ ಜೀವನದಲ್ಲಿ ಬಂದ ನನ್ನ

ಅನುಭವವು ನನ್ನ ಕಣ್ಣನ್ನು ತೆರೆಯಿಸಿತು. ಅಂದಿನಿಂದ ಕೂತಲ್ಲಿ ನಿಂತಲ್ಲಿ ಆ ಮಂತ್ರದ ಜಪ ನಡಿಸಿರುವೆ. ನನ್ನಲ್ಲಿ ಶಕ್ತಿಯೇನಾದರೂ ಇದ್ದರೆ ಅದು ಆ ಮಂತ್ರದ ಪ್ರಭಾವ. ತಾನು ಏನೂ ಮಾಡಿಲ್ಲೆಂಬ ಭಾವನೆ ಮನದಲ್ಲಿರಬೇಕು. ಇದು ಅನೇಕರು ತಿಳಿಯುವಂತೆ ನೈರಾಶ್ಯವಾದವಲ್ಲ. ತಾನು ಎಷ್ಟು ಸೇವೆ ಮಾಡಿದರೂ ತೃಪ್ತಿ ಇರಬಾರದು. ಮಂದಿ ಸ್ವಲ್ಪ ಸೇವೆ ಮಾಡಿದ ಕೂಡಲೇ ಉಬ್ಬಿ ಹೋಗುತ್ತಾರೆ. ಅನ್ಯರು ತಮ್ಮನ್ನು ಅತಿಶಯವಾಗಿ ಹೊಗಳಬೇಕೆಂದು ಬಯಸುತ್ತಾರೆ. ಅಂಥ ಅಹಂಕಾರಕ್ಕೆ ಇದು ಮದ್ದು. ಇರಲಿ.

ಕಲಘಟಗಿಯಲ್ಲಿ ಬಂಧನದಲ್ಲಿ ಇಡಲ್ಪಟ್ಟಾಗ ಗೀತೆಯನ್ನು ಆಳವಾಗಿ ಅಭ್ಯಾಸ ಮಾಡಲಿಕ್ಕೆ ಸಂಧಿ ದೊರೆಯಿತು. ಹಾಗೆ ಮಾಡಿದೆ. ಅಲ್ಲಿಂದ ಬಂದ ಬಳಿಕ ಗೀತೆಯ ಬಗ್ಗೆ ೫ ಸ್ವತಂತ್ರ ಗ್ರಂಥಗಳನ್ನು ಪ್ರಕಟಿಸಿದೆ. ಆಗ ನನಗೆ ಮತ್ತೂ ಒಂದು ಮಾತು ಹೊಳೆಯಿತು. ಅದೆಂದರೆ, ಭಾರತದಲ್ಲಿ ಧಾರ್ಮಿಕ ಪುನರುಜ್ಜೀವನವಾಗಬೇಕಾದರೆ ಮುಂಚೆ, ಕರ್ನಾಟಕಸ್ಥರಾದ ನಾವು ಧರ್ಮದಲ್ಲಿ ಕರ್ನಾಟಕವು ವಹಿಸಿದ ವಿಶಿಷ್ಟ ಪಾತ್ರವೇನೆಂಬುದನ್ನು ಅರಿತಿರಬೇಕಷ್ಟೇ ? ನಾನು ಮಾಧ್ವ ವೈಷ್ಣವನು. ಶ್ರೀ ಮಧ್ವಾಚಾರ್ಯರಲ್ಲಿ ಪೂರ್ಣ ಶ್ರದ್ಧೆಯುಳ್ಳವನು. ಆದರೆ ಅವರ ಗ್ರಂಥಗಳನ್ನು ( ಗೀತೆಯ ಮೇಲಿನ ಅವರ ಗ್ರಂಥಗಳ ಹೊರತು ) ಓದಿದ್ದಿಲ್ಲ. ಆದರೆ ದೇವರು ನನಗೆ ಆ ಸಂಧಿಯನ್ನು ಅನಾಯಾಸವಾಗಿ ೧೯೩೯ರ ಸುಮಾರಕ್ಕೆ ಒದಗಿಸಿಕೊಟ್ಟನು. ನಾನು ರಜಿಸ್ಟರ್ಡ ಪಬ್ಲಿಶರ ಆಗದಿದ್ದ ಕಾರಣ ಯುದ್ಧಕಾಲದಲ್ಲಿ ಕಾಗದಗಳ ಅಭಾವದ ಮೂಲಕ ಪುಸ್ತಕಗಳನ್ನು ಪ್ರಕಟಿಸಲಿಕ್ಕೆ ನನಗೆ ಪರವಾನಿಗೆ ಇದ್ದಿಲ್ಲ. ಹೀಗೆ ಅನಾಯಾಸವಾಗಿ ನನ್ನ ಕೈ ಕಟ್ಟಿದಾಗ ಮಧ್ವಾಚಾರ್ಯರ ಗ್ರಂಥಗಳ ಕಡೆಗೆ ಹೊರಳಬೇಕಾಯಿತು. ಹೊರಳಿದೆ. ಅವರ ೩೭ ಗ್ರಂಥಗಳನ್ನು ಅವಲೋಕಿಸಿದೆ. ಅದಕ್ಕೂ ಮುಂಚೆಯೇ ಶಾಂತಿಪಾಠ ಹಾಕಿ ೩-೪ ಗುರುಗಳ ಹತ್ತಿರ ಸೂತ್ರಭಾಷೆ ಓದಿದ್ದೆ.

ಇನ್ನು ಕರ್ನಾಟಕದ ಬಗ್ಗೆ ಹೇಳುವದಾದಲ್ಲಿ ಮಿಕ್ಕೆಲ್ಲ ಕ್ಷೇತ್ರಗಳಿಗಿಂತ ಧಾರ್ಮಿಕ ಕ್ಷೇತ್ರದಲ್ಲಿ ಕರ್ನಾಟಕವು ಮಾಡಿದ ಕ್ರಾಂತಿಯು ಹೆಚ್ಚಿಗೆ ಮಹತ್ವದ್ದಾಗಿ ಹೊಳೆಯಿತು. ಇಡೀ ಭರತಖಂಡದಲ್ಲಿಯೇ ಧರ್ಮಕ್ಕಾಗಿ ಕರ್ನಾಟಕವು

ಮಾಡಿದ ಸೇವೆಗೆ ಹೆಚ್ಚಿನ ಮಹತ್ವವಿದೆ. ಅದರೆಷ್ಟು ದೊಡ್ಡ ಕ್ರಾಂತಿಯನ್ನು ಮತ್ತಾವ ಪ್ರಾಂತವೂ ಮಾಡಿಲ್ಲ. ಈಗ ಭರತಖಂಡದಲ್ಲಿ ಪ್ರಚಲಿತವಿರುವ ಧರ್ಮ-ಪಂಥಗಳಿಗೆಲ್ಲ ಮೂಲಸ್ಥಾನವು ಕರ್ನಾಟಕವೇ ಆಗಿದೆ. ಬೌದ್ಧ ಧರ್ಮವು ಇಲ್ಲಿ ಹಿಂದಕ್ಕೆ ಬೇರೂರಿತ್ತು. ಆದರ ಬೇರುಗಳು, ಮಿಕ್ಕ ಕಡೆಗಳಲ್ಲಿ ಯಂತೆ ಕರ್ನಾಟಕದಿಂದಲೂ ಕಿತ್ತು ಎಸೆಯಲ್ಪಟ್ಟವು. ಇನ್ನು ಮಿಕ್ಕುಳಿದ ಮುಖ್ಯ ಪಂಥಗಳೆಂದರೆ ಶಂಕರ, ರಾಮಾನುಜ, ಮಧ್ವ, ಮಹಾವೀರ ಮತ್ತು ವೀರಶೈವ ಇವೆಲ್ಲ ಪಂಥಗಳಿಗೆ ಕರ್ನಾಟಕವು ಮುಖ್ಯ ಭೂಮಿ. ಆದರೆ ಈ ವಿಷಯವು ಕರ್ನಾಟಕ ಗತವೈಭವಕ್ಕೆ ಸಂಬಂಧಿಸಿರುವವರಿಂದ ಈ ಗ್ರಂಥ ದಲ್ಲಿ ಹೆಚ್ಚಿಗೆ ಹೇಳುವದು ಬೇಡ.

ಆದರೆ ಈಗಿನ ಕರ್ನಾಟಕತ್ವವು ಆ ಧರ್ಮಗಳಿಗೆ ಯಾವ ಹೊಸ ಸ್ವರೂಪ ವನ್ನು ಕೊಡಬಹುದೆಂಬ ಪ್ರಶ್ನೆಯನ್ನು ವಿಚಾರ ಮಾಡುವದೇ ಧರ್ಮದಲ್ಲಿಯ ಕರ್ನಾಟಕತ್ವ. ಅದನ್ನು ಕರ್ನಾಟಕತ್ವಕ್ಕೆ ಕಾರಣನಾದ ನಾನು ಮಾಡಲೇ ಬೇಕಾಯಿತು; ಮಾಡಿದೆ; ಮಾಡುತ್ತಿರುವೆ. ಆದರೆ ಆದು ನನ್ನ ಅಳವಿನ ಹೊರ ಗಿನ ವಿಷಯವಾಗಿರುವದರಿಂದಲೇ ನಾನು ಆ ವಿಷಯವನ್ನು ಈ ಗ್ರಂಥ ದಲ್ಲಿ ಹೇಳಹೋಗಿಲ್ಲ. ಇಲ್ಲಿ ಕೇವಲ ನನ್ನ ವೈಯಕ್ತಿಕ ವಿಚಾರಗಳನ್ನಷ್ಟೇ ಸೂಚಿಸುವೆ.

ಧಾರ್ಮಿಕ ಕ್ಷೇತ್ರದಲ್ಲಿ ನನಗೆ ಹೊಳೆದ ಮೊದಲನೆಯ ಸಂಗತಿಯೆಂದರೆ, ಆಚಾರ್ಯರೇ ಮುಂತಾದವರು ತತ್ವಜ್ಞಾನದಲ್ಲಿ ಕ್ರಾಂತಿಗಳನ್ನೇನೋ ಮಾಡಿ ಮಾಡಿದರು ! ಆದರೆ ಅದನ್ನು ಜನತೆಯಲ್ಲಿ ಪೂರಾ ಬೇರೂರಲಿಕ್ಕೆ ಅವರಿಗೆ ಸಾಧ್ಯವಾಗಲಿಲ್ಲ. ಅದಕ್ಕೆ ಅನೇಕ ಕಾರಣಗಳಿವೆ. ಅವನ್ನೆಲ್ಲ ಇಲ್ಲಿ ಚರ್ಚಿಸುವ ಕಾರಣವಿಲ್ಲ. ಆಗ, ಇಡೀ ಭರತಖಂಡವು ಒಂದೇ ರಾಷ್ಟ್ರ ವೆಂಬ ರಾಜಕೀಯ ಕಲ್ಪನೆ ಇನ್ನೂ ಪ್ರಯೋಗಾವಸ್ಥೆಯಲ್ಲಿತ್ತು. ಭಿನ್ನ ಭಿನ್ನ ಪ್ರದೇಶಗಳಲ್ಲಿ ಭಿನ್ನ ಭಿನ್ನ ರಾಜ್ಯಗಳಿದ್ದವು. ಆದರ ಮೂಲಕ ಮೇಲ್ಕಾಣಿ ಸಿದ ಕರ್ನಾಟಕದ ಧರ್ಮಪಂಥಗಳಿಗೆಲ್ಲ ಪ್ರಾದೇಶಿಕ ಮಹತ್ವವಷ್ಟೇ ಪ್ರಾಪ್ತ ವಾಯಿತು! ಅವನ್ನು ಬೇರೆ ಪ್ರದೇಶಗಳಲ್ಲೆಲ್ಲ ಹಬ್ಬಿಸುವದಕ್ಕೆ ಅವರಿಗೆ ಅವ ಕಾಶವೇ ದೊರೆಯಲಿಲ್ಲ. ಧರ್ಮಕ್ಕೆ ರಾಜಕೀಯ ಆಶ್ರಯವು ಬೇಕೆಂದು ಹೇಳು

ವದರ ಕಾರಣವು ಇದೇ. ರಾಜಕಾರಣದಿಂದ ಧರ್ಮವು ದೂರ ಹೋಗಲಾರದು, ಹೋಗಬಾರದು. ಆದರೆ ಇಲ್ಲಿಯೂ ಒಂದು ಸೂಕ್ಷ್ಮ ಪ್ರಶ್ನೆಯು ಹೊರಡುತ್ತದೆ. ಅದೆಂದರೆ, ರಾಜಕಾರಣವು ಧರ್ಮಕ್ಕೆ ಬಗ್ಗಬೇಕೋ ಧರ್ಮವು ರಾಜಕಾರಣಕ್ಕೆ ಬಗ್ಗಬೇಕೋ ಎಂಬುದು. ಇಲ್ಲಿಯೂ ನಮ್ಮ ಋಷಿಗಳ ಆದೇಶವು ಸ್ಪಷ್ಟವಿದೆ. ಬ್ರಹ್ಮ ಹೃದಯಂ ಕ್ಷತ್ರ ಅಂಗಂ—ಭಾಗವತ. ಎಂದರೆ, ಧರ್ಮವು ತತ್ವ ತಿಳಿಸಬೇಕು. ಧ್ಯೇಯವನ್ನೂ, ಧೋರಣವನ್ನೂ ನಿಶ್ಚಯಿಸಬೇಕು. ಆ ತತ್ವಗಳಿಗನುಸಾರವಾಗಿ ಅವನ್ನು ಅಮಲಿನಲ್ಲಿ ತರುವದೊಂದೇ ರಾಜಕಾರಣಿಗಳ ಕೆಲಸ. ಆಚಾರ್ಯರು ಕೇವಲ ತತ್ವಜ್ಞಾನಿಗಳು, ಅಪರೋಕ್ಷ ಜ್ಞಾನಿಗಳು. ಆದರೆ, ಅವರು ಸ್ಮೃತಿಕಾರರಲ್ಲ. ಅಂತೇ ಇಡೀ ಭಾರತಕ್ಕಾಗಿ ಸ್ಮೃತಿಗಳನ್ನು ರಚಿಸಹೋಗಲಿಲ್ಲ. ಅಲ್ಲದೆ ಭಿನ್ನ ಭಿನ್ನ ರಾಜ್ಯಗಳು ಇದ್ದುದರಿಂದ ಅವರಿಗೆ ಶಕ್ಯವೂ ಇರಲಿಲ್ಲ. ಏಕೆಂದರೆ, ಅದಕ್ಕೆ ರಾಜಾಶ್ರಯವೇ ಬೇಕು. ಮುಂದೆ, ಹಾಗೆ, ಕರ್ನಾಟಕದ ಚಾಲುಕ್ಯ ವಿಕ್ರಮರಾಜನ ಕಾಲದಲ್ಲಿ ಬಹುಶಃ ಭರತಖಂಡದ ದೊಡ್ಡ ಭಾಗವು ಆತನ ಅಂಕಿತದಲ್ಲಿ ಬಂದಾಗ, ಕರ್ನಾಟಕಕ್ಕೆ ಆ ತರಹದ ಅವಕಾಶ ದೊರೆಯಿತು. ಆಗ 'ಮಿತಾಕ್ಷರ' ಎಂಬ ಕಾಯದೆ ಗ್ರಂಥವು ವಿಜ್ಞಾನೇಶ್ವರ ಎಂಬ ಪಂಡಿತರಿಂದ ರಚಿತವಾಯಿತು. ಮತ್ತು ಅದೇ ಇಂದಿಗೂ ಇಡೀ ಭಾರತಕ್ಕೇನೇ ಪ್ರಮುಖ ಪ್ರಮಾಣ ಗ್ರಂಥವಾಗಿದೆ. ಇದೇ, ಧರ್ಮದಲ್ಲಿ ಕರ್ನಾಟಕವು ಮೂಡಿಸಿದ ಕರ್ನಾಟಕತ್ವ. ಆಚಾರ್ಯರೆಲ್ಲರೂ ದೇವವಾಣಿಯಾದ ಸಂಸ್ಕೃತ ಪಂಡಿತರಾದ್ದರಿಂದ ಭರತಖಂಡದಲ್ಲೆಲ್ಲ ಸಂಚರಿಸಿ, ವಿದ್ವಜ್ಜನರೊಡನೆ ಸಂಪರ್ಕ ಬೆಳಿಸಿ, ಧರ್ಮಪ್ರಚಾರ ಮಾಡಿದರು. ಆದರೆ ಅಲ್ಲಿಯ ಜನತೆಯೊಡನೆ ಸಂಪರ್ಕ ಬೆಳಿಸಲಿಕ್ಕೆ ಅವರಿಗೆ ಅವಕಾಶ ದೊರೆಯಲಿಲ್ಲ. ಮುಂದೆ ಬಿಜ್ಜಳನ ಕಾಲದಲ್ಲಿ ಮತ್ತೊಮ್ಮೆ ಆ ತರಹದ ಸುಸಂಧಿಯು ದೊರೆಯಿತು. ಬಸವೇಶ್ವರರು ದೊಡ್ಡ ಧಾರ್ಮಿಕ ಕ್ರಾಂತಿಯನ್ನು ಮಾಡಲೆತ್ನಿಸಿದರು. ಕೆಲಮಟ್ಟಿಗೆ ಮಾಡಿಯೂ ಮಾಡಿದರು. ಆದರೆ ಬಹುಶಃ ಅದೂ ಪ್ರಾದೇಶಿಕವಾಗಿಯೇ ಉಳಿಯಬೇಕಾಯಿತು. ದೇಶಭಾಷೆಯನ್ನವಲಂಬಿಸಿದ್ದರಿಂದ ಇಲ್ಲಿಯ ಜನತೆಯಲ್ಲಿ ಹೆಚ್ಚಿಗೆ ಹಬ್ಬಿತು. ಮಿಕ್ಕ ಕಡೆಗೆ ಬಹಳ ವಿಸ್ತಾರವಾಗಲಿಲ್ಲ. ಒಂದು ಲಾಭ, ಒಂದು ಲುಕ್ಸಾನ. ಅಲ್ಲದೆ, ಬಸವೇಶ್ವರರು ಹೂಡಿದ ಧಾರ್ಮಿಕ ಕ್ರಾಂತಿಯು ರಾಜಕೀಯ ಕ್ರಾಂತಿಗೆ ತುತ್ತಾಯಿತು !

ವೈಷ್ಣವ ದಾಸರೂ, ವಚನ ಸಾಹಿತಿಗಳೂ ಬುದ್ಧಿಗಲಿತು ರಾಜಕಾರಣದಲ್ಲಿ ಬೀಳದೆ ಜನತೆಯನ್ನೇ ಮೂಲವಾಗಿಟ್ಟುಕೊಂಡು ಧಾರ್ಮಿಕ ಪ್ರಚಾರ ಮಾಡಿದರು. ಅದರಿಂದ ಕನ್ನಡ ಜನತೆಯಲ್ಲಿ ಧಾರ್ಮಿಕ ಜಾಗ್ರತಿ ತಕ್ಕಮಟ್ಟಿಗೆ ಆಯಿತು.

ಇರಲಿ. ಇದೆಲ್ಲ ಗತವೈಭವವಾಯಿತು! ಭರತಖಂಡದಲ್ಲಿ ಮತ್ತೊಮ್ಮೆ ಧಾರ್ಮಿಕ ಕ್ರಾಂತಿಯಾಗಬೇಕಾಗಿದೆ. ಆದರೆ ಆ ಧರ್ಮಸ್ಥಾಪನೆಗೆ ಸಾಕ್ಷಾತ್ ಪರಮಾತ್ಮನೇ ಅವತಾರ ತಾಳಿ ಬರಬೇಕಲ್ಲದೆ, ಮಾನವನ ತುತ್ತಲ್ಲ. ಧಾರ್ಮಿಕ ಪುನರ್ಘಟನೆಯು ರಾಜ್ಯಗಳ ಪುನರ್ಘಟನೆಗಳಿಗಿಂತ ನೂರು ಪಟ್ಟು ಕಠಿಣವಾದುದು. ಅದಕ್ಕೆ ಅಂತಃಪ್ರಕಾಶವುಳ್ಳ ಮತ್ತು ಪೂರ್ಣದೃಷ್ಟಿಯುಳ್ಳ ಋಷಿಗಳೇ ಬೇಕು. ಅಲ್ಲಿಯ ವರೆಗೆ ಅನೇಕರು ಚಿಕ್ಕಪುಟ್ಟ ದೇವತೆಗಳು ಹುಟ್ಟಿ ತಮ್ಮ ಮಟ್ಟಿಗೆ ಧರ್ಮದಲ್ಲಿ ಕಲಕುಮುಲಕು ಮಾತ್ರ ಮಾಡಬಹುದು. ಅಂತಹ ಕ್ರಾಂತಿಕಾರರಲ್ಲಿ ಮ. ಗಾಂಧಿಯವರೊಬ್ಬರು. ಅವರು ಬುದ್ಧ-ಬಸವೇಶ್ವರರಂತೆ ಸಾಮಾನ್ಯ ಜನತೆಯಲ್ಲಿ ಜಾಗ್ರತಿಯನ್ನುಂಟುಮಾಡಲು ಯತ್ನಿಸಿದರು. ಯತ್ನಿಸಿದರು ಎಂಬುದಕ್ಕೆ ಕಾರಣವೇನೆಂದರೆ, ಮಹಾತ್ಮರ ಧಾರ್ಮಿಕ ವಿಚಾರಗಳು ಪೂರ್ಣ ಪರಿಪಕ್ವವಾದ ವಿಚಾರಗಳೆಂದು ನನಗೆ ತೋರಲಿಲ್ಲ. ಅಸಹಕಾರ ಚಳವಳಿಯು ಪ್ರಾರಂಭವಾದ ತುಸು ದಿನಗಳಲ್ಲಿಯೇ ಈ ಮಾತು ನನ್ನ ಲಕ್ಷ್ಯಕ್ಕೆ ಬಂದಿತು. ನನ್ನ ಮಟ್ಟಿಗೆ ಆ ಬಗ್ಗೆ ಸಾಕಷ್ಟು ವಿಚಾರ ಮಾಡಿದೆ. ಮುಂದೆ, ಶ್ರೀ. ತಮಣಾಚಾರ್ಯ ಪುರೋಹಿತ, ಎಲ್ಎಲ್, ಬಿ. ಎಂಬವರೂ ಆಗ ವಕೀಲಿ ಬಿಟ್ಟು, ನನ್ನಂತೆಯೇ ರಾಜಕೀಯ ಚಳವಳಿಯಲ್ಲಿ ಸೇರಿದ್ದರು. ಅವರೂ ಧಾರ್ಮಿಕ ಪ್ರವೃತ್ತಿಯವರು. ನಾನೂ ಅವರೂ ಮಹಾತ್ಮರ ಧಾರ್ಮಿಕ ವಿಚಾರಗಳ ಬಗ್ಗೆ ಚರ್ಚಿಸಿದೆವು. ಮತ್ತು ನಾನು ಮಹಾತ್ಮರಿಗೆ ಒಂದು ರಜಿಸ್ಟರ್ಡ ಪತ್ರ ಬರೆದು, ನಮ್ಮ ವಿಚಾರಗಳನ್ನು ತಿಳಿಸಿ, ಧರ್ಮದಲ್ಲಿ ಪ್ರಳಯ ಮಾಡುವುದಕ್ಕಿಂತ ಪುನಃಸೃಷ್ಟಿ ಮಾಡುವುದು ಅತ್ಯಂತ ಕಠಿಣ; ಆ ಬಗ್ಗೆ ಏನಾದರೂ ವಿಚಾರ ಮಾಡಿರುವಿರಾ? ಎಂದು ಕೇಳಿದ್ದೆ. ಇರಲಿ, ಅವರ ಮೇಲೆ ಟೀಕೆ ಮಾಡುವುದು ನನ್ನಂಥ ಬಡಪಾಯಿಯ ತುತ್ತಲ್ಲ! ಅವರ ಮುಖ್ಯ ಕ್ಷೇತ್ರವು ರಾಜಕಾರಣವು, ಧರ್ಮವಲ್ಲ! ಅವರು ನಿರ್ಮಲಾಂತಃಕರಣಿಗಳು, ಪರಿಶುದ್ಧ ಜೀವಿಗಳು. ಅವರ ಅವತಾರವಾದದ್ದು ಭಾರತಕ್ಕೆ ಸ್ವಾತಂತ್ರ್ಯ ಸಂಪಾದಿಸಿ

ಕೊಡುವದಕ್ಕಾಗಿ, ಸಂಪಾದಿಸಿಕೊಟ್ಟರು! ಅವರ ಅವತಾರ ಕಾರ್ಯ ಮುಗಿಯಿತು. ಆಗ, ರಾಷ್ಟ್ರಕ್ಕೆ ಮುಖ್ಯವಾಗಿ ಬೇಕಾದದ್ದು ಸ್ವಾತಂತ್ರ್ಯ! ಧರ್ಮವಲ್ಲ. ಜನವಶೀಕರಣ ವಿದ್ಯೆಯಲ್ಲಿ ನಿಷ್ಣಾತರಾದ ಮನುಷ್ಯರು. ರಾಜಕಾರಣದಲ್ಲಿ ಅಹಿಂಸೆಯ ತತ್ವವನ್ನು ಹೊಗಿಸುವ ಅತ್ಯಂತ ಕಠಿಣವಾದ ಕಾರ್ಯ ಅವರು ಮಾಡಿದರು. ಜಗತ್ತು ಅವರಿಂದ ಬುದ್ಧಿಗಲಿತರೆ, ದಂಡನೀತಿಯಲ್ಲಿ ಮಹಾತ್ಮರು ಇಡೀ ಜಗತ್ತಿಗೇನೇ ಸಾಮ-ಭೇದ-ದಾನ-ದಂಡಗಳಲ್ಲದೆ ತೀರ ಹೊಸದೊಂದು ಅಸ್ತ್ರವನ್ನು ಒದಗಿಸಿಕೊಟ್ಟಂತಾಗುವದು! ಧರ್ಮದಲ್ಲಿ ಅವತಾರ ಪುರುಷನು ಇನ್ನೂ ಹುಟ್ಟಿ ಬರಬೇಕಾಗಿದೆ. ಕರ್ನಾಟಕವು ಅಂಥ ಕಾರ್ಯ ಹಿಂದೆ ಮಾಡಿದೆ. ಮುಂದೆ ಹುಟ್ಟಿಸುವುದೇ ಧರ್ಮದಲ್ಲಿಯ ಕರ್ನಾಟಕತ್ವ.



# ೧೮ನೆಯ ಪ್ರಕರಣ

## ಉಪಸಂಹಾರ

ಇನ್ನುಳಿಯಿತು, ಸಿಂಹಾವಲೋಕನ ನ್ಯಾಯದಿಂದ ಉಪಸಂಹಾರ ಮಾಡುವದೊಂದು. ಅದನ್ನು ಈ ಪ್ರಕರಣದಲ್ಲಿ ಮಾಡುವೆ.

ಕರ್ನಾಟಕತ್ವದ ಕಲ್ಪನೆಯು ನನ್ನಲ್ಲಿಯೇ ಪ್ರಥಮತಃ ಉದಯವಾಗಿ ನನ್ನಿಂದಲೇ ಬರಬರುತ್ತ ವಿಕಾಸಹೊಂದಿ ನಾನೇ ಅದರ ಹೊಳವನ್ನು ಕಾಣುವ ಸುದೈವವು ಹೇಗೆ ಉಂಟಾಯಿತು ಎಂಬುದನ್ನು ಹೇಳಿಯೇ ಇರುವೆ. ಅದರ ಪುನರುಚ್ಚಾರಣೆ ಅವಶ್ಯವಿಲ್ಲ. ಒಂದೇ ಮಾತಿನಲ್ಲಿ ಹೇಳುವದಾದಲ್ಲಿ ರಾಜ ಕಾರಣ, ಸಾಹಿತ್ಯ ಮುಂತಾದ ಒಂದೊಂದೇ ಕ್ಷೇತ್ರದಲ್ಲಿ ನನ್ನನ್ನು ಮೆಟ್ಟಿ ಹಾರುವಂಥವರು ಇದ್ದರು ; ಇದ್ದಾರೆ. ಕರ್ನಾಟಕತ್ವದ ಕಲ್ಪನೆಗೆ ಅಂಟಿ ಕೊಂಡವರು ಮಾತ್ರ ಇದ್ದಿಲ್ಲ. ಅಂತೇ, ಅದು ಕೂಡ ನನ್ನ ಸಣ್ಣ ಬಾಯಿಗೆ ಮೀರಿದ ತುತ್ತೇ ಎಂಬುದು ಗೊತ್ತಿದ್ದರೂ ನನ್ನ ಬುದ್ಧಿಸರ್ವಸ್ವವನ್ನೂ, ಉತ್ಸಾಹವನ್ನೂ ವೆಚ್ಚಮಾಡಿ ಅದನ್ನು ಬಾಯಿಯಲ್ಲಿ ತುರುಕಿಕೊಳ್ಳಲಿಕ್ಕೆ ಹೋದೆ; ಒದ್ದಾಡಿದೆ. ನನ್ನ ಜೀವನವೆಂಬ ಗಡಿಯಾಳದ ಹೊರಮುಳ್ಳು ಗಳು ತಿರುಗುವದನ್ನು ಮಾತ್ರವೇ ಜನರು ಕಾಂಬರು. ಒಳಯಂತ್ರಗಳ ತಿರುಗುವಿಕೆಯನ್ನು ನನ್ನ ಹೊರತು ಯಾರು ಹೇಳಬಲ್ಲರು? ತನ್ನ ಮೋರೆ ಯನ್ನು ಅನ್ಯರು ನೋಡಬಲ್ಲರು. ಒಳ ಎದೆಯನ್ನು ಮಾತ್ರ ಅವರು ನೋಡ ಲಾರರು. ತಮ್ಮ ಚರಿತ್ರೆಯನ್ನು ಅನ್ಯರು ಬರೆಯುವದರಲ್ಲಿ ಕೆಲವು ಗುಣ ಗಳಿದ್ದರೆ ತಾವೇ ಬರೆಯುವದರಲ್ಲಿಯೂ ಕೆಲವು ಗುಣಗಳಿವೆ. ಆದ ಕಾರಣ ನಾನು ನನ್ನ ಜೀವನದಲ್ಲಿ ಇಟ್ಟುಕೊಂಡಿರುವ ಕೆಲವು ವಿಶಿಷ್ಟ ಮತ್ತು ವಿಕ್ಷಿಪ್ತ ವಾಗಿ ತೋರುವ ತತ್ವಗಳನ್ನೂ ಅವುಗಳ ಸೂತ್ರಗಳನ್ನೂ ಇದರಲ್ಲಿ ಹೇಳಿರು ವದರಿಂದ ನನ್ನ ಜೀವನದ ಒಗಟು ಬಿಡುವದಕ್ಕೂ ಸಹಾಯವಾಗುವದೆಂದು ನನ್ನ ನಂಬಿಗೆ. ಹೀಗೆ ತನ್ನ ಸ್ವಂತ ಚರಿತ್ರೆಯನ್ನು ತಾನು ಹೇಳುವದರಲ್ಲಿ

ಒಂದು ಗಂಡಾಂತರವು ಇದೆ. ಆಹಂಕಾರಕ್ಕೆ ಬಲಿಬಿದ್ದು ತನ್ನಲ್ಲಿದ್ದ ದೋಷಗಳನ್ನು ಮುಚ್ಚಿಕೊಂಡು ಇದ್ದ ಅಲ್ಪ ಸ್ವಲ್ಪ ಗುಣಗಳನ್ನು ಪರ್ವತಪ್ರಾಯವಾಗಿ ಬೆಳಿಸಿ ಹೇಳುವ ಪ್ರವೃತ್ತಿ ಉಂಟಾಗುವ ಅಂಜಿಕೆಯಿದೆ. ಅಂಥ ಅಹಂಕಾರವು ತಲೆಯೆತ್ತಿದ ಕೂಡಲೆ ಆದರ ಮೇಲೆ ಅಪ್ಪಳಿಸಲಿಕ್ಕೆ “ನಾಹಂ ಕರ್ತಾ ಹರಿಃ ಕರ್ತಾ ತತ್ಪೂಜಾ ಕರ್ಮಚಾಖಿಲಂ” ಎಂಬ ವಾಕ್ಯವು ಬಲವಾದ ಅಸ್ತ್ರ. ಆ ವಾಕ್ಯವನ್ನು ಜಪಿಸಿದ ಕೂಡಲೆ ತನ್ನಲ್ಲಿದ್ದ ಭೂತಗಳು ಓಡಿ ಹೋಗಲೇ ಬೇಕು. ಭೂತೋಚ್ಚಾಟನೆಗೆ ಅದು ಮಹಾಮಂತ್ರ ಎಂದು ನನ್ನ ಅನುಭವ. ಇದಂತೂ ಹೇಳಿಕೇಳಿ ನನ್ನ ಆತ್ಮದಲ್ಲಿ ಕರ್ನಾಟಕತ್ವದ ಕಲ್ಪನೆಯ. ವಿಕಾಸವು ಹೇಗೆ ಆಯಿತು ಎಂಬುದನ್ನು ಮುಖ್ಯವಾಗಿ ಹೇಳುವ ಪುಸ್ತಕ.

ಇಲ್ಲಿ ಆತ್ಮಶ್ಲಾಘನೆಯ ದೋಷಕ್ಕೆ ಹೆಚ್ಚು ಆಸ್ಪದ ಇರುತ್ತದೆ. ಆದ ಕಾರಣ ಆದರ ಮೂಲಕವಾಗಿಯಾಗಲಿ ಅಥವಾ ಪ್ರಕೃತಿ ದೋಷದ ಮೂಲಕವಾಗಿಯಾಗಲಿ, ಎಲ್ಲೆಯನ್ನು ಮೀರಿ ದೋಷಗಳು ನನಗೂ ಕೂಡ ತಿಳಿಯದಂತೆ ಸುಳಿದಿದ್ದರೆ ಆ ಬಗ್ಗೆ ವಾಚಕರು ನನ್ನನ್ನು ಕ್ಷಮಿಸಬೇಕೆಂದು ಬೇಡಿಕೊಳ್ಳುತ್ತೇನೆ.

ಜಯಕರ್ನಾಟಕವು ಮಾಡಿದ ಕಾರ್ಯವೂ ಕೂಡ ತಳಗಟ್ಟನ್ನು ಕಟ್ಟುವುದಷ್ಟೇ. ಕೊನೆಗೆ, ಆ ತಳಗಟ್ಟು ಅದೃಶ್ಯವಾಗಿಯೇ ಉಳಿವುದು. ಅಖಂಡ ಕರ್ನಾಟಕದ ಸುಂದರವಾದ ಭವ್ಯವಾದ ಕಟ್ಟಡವನ್ನು ಹೊರುವಷ್ಟು ಗಟ್ಟಿಮುಟ್ಟಾದ ಮತ್ತು ಶಾಶ್ವತವಾದ ತಳಹದಿಯನ್ನು ಹಾಕುವುದೇ ಅದರ ಉದ್ದೇಶ. ಅನೇಕ ಸಾಹಿತಿಗಳಿಗೆ, ಕವಿಗಳಿಗೆ, ಲೇಖಕರಿಗೆ ಅದು ಹುಟ್ಟುವುದಕ್ಕೆ ಅವಕಾಶ ಕೊಟ್ಟಿದೆ. ನನ್ನ ಜಯಕರ್ನಾಟಕ ಮಾಸಪತ್ರಿಕೆಯನ್ನು ೧೯೩೦ರಲ್ಲಿ ಶ್ರೀ. ಬೇಂದ್ರೆಯವರ ಗೆಳೆಯರ ಗುಂಪಿಗೆ ಒಪ್ಪಿಸಿದೆ. ಗೆಳೆಯರ ಗುಂಪಿನ ನನ್ನ ಕಲ್ಪನೆ ಹೀಗಿತ್ತು. ಕರ್ನಾಟಕತ್ವದ ಪ್ರಸಾರವೇ ಆದರ ಧ್ಯೇಯ. ಅದಕ್ಕಾಗಿ ಭಿನ್ನ ಭಿನ್ನ ವಿಷಯಗಳಲ್ಲಿ ಅಭಿರುಚಿಯುಳ್ಳ ಕೆಲವರನ್ನು ಕಲೆ ಹಾಕಿ, ಒಬ್ಬೊಬ್ಬರಿಗೆ ತಮ್ಮ ತಮ್ಮ ವಿಷಯದಲ್ಲಿ ಆಳವಾದ ಅಭ್ಯಾಸ ಮಾಡಹಚ್ಚುವದು. ಸರ್ವಾಂಗೀಣ ಉನ್ನತಿಗೆ ಆ ಪೂರ್ಣ ದೃಷ್ಟಿ ಆವಶ್ಯಕ. ಸಂಗೀತಕಲೆ, ವ್ಯಾಪಾರ, ಉದ್ಯೋಗ ಮುಂತಾದ ಅನೇಕ ಕ್ಷೇತ್ರಗಳಲ್ಲಿ ಇನ್ನೂ ಕರ್ನಾಟಕವು ಸಾಧಿಸ

ತಕ್ಕ ಕಾರ್ಯ ವಿಪುಲವಾಗಿದೆ. ಆಯಾ ಕ್ಷೇತ್ರಗಳಲ್ಲಿ ನುರಿತವರು ಬೇಕು, ಸಂಸ್ಥೆಗಳನ್ನು ಕಟ್ಟಬೇಕು.

ಕೇವಲ "ಜಯಕರ್ನಾಟಕ" ಎಂಬ ಅಕ್ಷರಗಳ ಹಣೆಪಟ್ಟಿ ಹಚ್ಚಿಕೊಂಡ ಮಾಸಪತ್ರಿಕೆ ಅದು ಅಲ್ಲ. ಅಥವಾ ಯಾವದೊಂದು ಧರ್ಮ, ಪಂಥ, ಪ್ರದೇಶ ಗಳ ಪಕ್ಷಪಾತವನ್ನಿಟ್ಟುಕೊಂಡು ತೆಗೆದ ಮಾಸಪತ್ರಿಕೆ ಅದು ಅಲ್ಲ. ಯಾವ ಪಕ್ಷ ಅಥವಾ ಪಂಥದಲ್ಲಿ ಕೈ ಹಾಕದೆ ಸರ್ವಗಳಿಗೂ ಸಮಾನ ಸ್ಥಾನ ಕೊಡುವದೇ ನನ್ನ ಉದ್ದೇಶವಾಗಿತ್ತು. ಅದು ಆಳವಾದ ಪತ್ರಿಕೆಯಲ್ಲ; ಅಗಲ ವಾದ ಪತ್ರಿಕೆ. ಸ್ವತಃ ನಾನೇ ಯಾವುದರಲ್ಲಿಯೂ ಆಳವಾದ ಮನುಷ್ಯನಲ್ಲ. ಅಂತೇ ದೇವರು ಆಗಿನ ಕಾಲಕ್ಕೆ ಆ ಕಾಲದ ಮಟ್ಟಿಗಾದರೂ ಅವಶ್ಯವಿದ್ದ, ನನ್ನಂಥವನನ್ನೇ ತನ್ನ ಕಾರ್ಯಕ್ಕಾಗಿ ಕಾರಣ ಪುರುಷನನ್ನು ಮಾಡಿ ಮುಂದೆ ತಂದನು. ರಾಜಪುರೋಹಿತರಂತೂ ೧೯೦೭ರಿಂದಲೇ ನನ್ನೊಡನೆ ಕೆಲಸ ಮಾಡಿ, ಇತಿಹಾಸದಲ್ಲಿ ತನ್ಮಯರಾದವರು; ಕರ್ನಾಟಕತ್ವದ ಕಲ್ಪನೆಯನ್ನು ಆಕಲನ ಮಾಡಿಕೊಂಡವರು. ಹಾಗೆಯೇ ಶ್ರೀ. ಬೇಂದ್ರೆಯವರು ಅವರಿಗಿಂತ ಚಿಕ್ಕವರಾದರೂ ಕವಿತ್ವದಲ್ಲಿ ತನ್ಮಯರು. ಸಾಹಿತ್ಯದ ಕಡೆಗೇನೇ ಸಂಪೂರ್ಣ ಒಲವಿದ್ದವರು. ಶ್ರೀ. ಶಂ. ಬಾ. ಜೋಶಿಯವರು, ನಾನು ಕರ್ಮವೀರ ಪತ್ರಕ್ಕೆ ಸಂಪಾದಕನಾದಾಗ ಅದರಲ್ಲಿ ಅವರು ಲೇಖಗಳನ್ನು ಬರೆಯುತ್ತಿದ್ದದರಿಂದ ಅವರ ಸಂಪಾದಕತ್ವದ ಅರಿವು ನನಗಾಗಿತ್ತು. ಇತ್ತೀಚೆಗಂತೂ ಸಂಶೋಧನೆ ಯಲ್ಲಿಯೇ ಪೂರ್ಣ ನಿಷ್ಣಾತರಾಗಿದ್ದಾರೆ. ಇವರಲ್ಲದೆ ಶ್ರೀ. ಬೇಂದ್ರೆಯವರಲ್ಲಿ ಆದರವುಳ್ಳ ಕೆಲ ವಿದ್ಯಾರ್ಥಿಗಳು ಆಗ ಗೆಳೆಯರ ಗುಂಪಿನಲ್ಲಿ ಸೇರಿದ್ದರು. ಆದುದ ರಿಂದ ಅವರೆಲ್ಲರಿಗೆ ನನ್ನ ವ್ಯಾಪಕವಾದ ಉದ್ದೇಶವನ್ನು ತಿಳಿಹೇಳಿ, ಕೊನೆಗೆ ಆ ಗುಂಪಿಗೇನೇ ಜಯಕರ್ನಾಟಕ ಮಂಡಲವೆಂದು ಹೆಸರಿಟ್ಟು ನನ್ನ ಮೂಲ ಉದ್ದೇಶದ ಪ್ರಕಾರ ನಡೆಸಲು ಹೇಳಿ ಅದನ್ನು ಅವರಿಗೆ ಒಪ್ಪಿಸಿದೆ.

ಸಾರಾಂಶ, ಜಯಕರ್ನಾಟಕವು ಕರ್ನಾಟಕದಲ್ಲಿಯ ಅತಿ ದೊಡ್ಡ ಮಾಸ ಪತ್ರಿಕೆ. ಆ ನನ್ನ ಉದ್ದೇಶದಂತೆ ನಡಿಸಿದ ಮಾದರಿಯ ದೊಡ್ಡ ಮಾಸ ಪತ್ರಿಕೆಯು ಇನ್ನೂ ಹೊರಟಿಲ್ಲ ಎಂಬುದು ದುರ್ದೈವ. ಈಗಂತೂ ಕರ್ನಾ ಟಕ ರಾಜ್ಯ ನಿರ್ಮಾಣವಾಗಿದೆ. ಕರ್ನಾಟಕತ್ವದ ಬಹುಮುಖ ವಿಕಾಸಕ್ಕೆ

ಮತ್ತಿಷ್ಟು ಹೆಚ್ಚಿಗೆ ಅವಕಾಶವಿದೆ. ನಿಷ್ಣಾತರಾದ ನುರಿತ .ಲೇಖಕರನ್ನೂ ಸಂಪಾದಕರು ಹುಟ್ಟಿಸಬಹುದು.

ಜಯಕರ್ನಾಟಕವನ್ನು ಆಗಿನ ಕಾಲಕ್ಕೆ ಮಹಾರಾಷ್ಟ್ರದ ಪ್ರಸಿದ್ಧ ಪುರುಷರೂ ಮರಾಠಿ ವಿಶ್ವಕೋಶದ ಸಂಪಾದಕರೂ ಆದ ಡಾ. ಕೇತಕರರೇ ಮುಂತಾದವರು ನನ್ನ ಕಡೆಗೆ ಮುದ್ದಾಂ ಬಂದು ಅದರಂಥ ಮಾಸಪತ್ರಿಕೆಯು ಮಹಾರಾಷ್ಟ್ರದಲ್ಲಿಯೇ ಇಲ್ಲವೆಂದು ಹೊಗಳಿ, ಕನ್ನಡದಲ್ಲಿ ತಮ್ಮ ಮರಾಠಿ ವಿಶ್ವಕೋಶವನ್ನು ಕನ್ನಡಿಸಲಿಕ್ಕೆ ನನಗೆ ಒಪ್ಪಿಸುವವರಿದ್ದರು. ಅದು ಆಕಸ್ಮಿಕ ಘಟನೆಯಿಂದ ಆಗ ತಪ್ಪಿತು. ಮುಂದೆ ಅವರು ನನಗೆ ಒಪ್ಪಿಸಬೇಕೆನ್ನುವಷ್ಟರಲ್ಲಿ ನಾನು ಕಲಘಟಗಿಯೊಳಗೆ ಬಂಧನದಲ್ಲಿಡಲ್ಪಟ್ಟಿದ್ದರಿಂದ ಆ ಸಂಧಿಯೂ ಹೋಯಿತು. ಇರಲಿ, ಇಲ್ಲಿ ಮುಖ್ಯವಾಗಿ ಹೇಳತಕ್ಕ ಮಾತೆಂದರೆ, ಮಾದರಿಯ ಮಾಸಪತ್ರಿಕೆಯ ದೃಷ್ಟಿಯಿಂದ ನೋಡಲು ಅದರಲ್ಲಿ ಅನೇಕ ದೋಷಗಳು ಕಂಡುಬರುವವು. ಕಚ್ಚಾ ಲೇಖಕರಿಗೂ, ಕಚ್ಚಾ ಕವಿಗಳಿಗೂ ಅಶುದ್ಧ. ಬರೆಹಗಳಿಗೂ ಆಸ್ಪದ ಕೊಟ್ಟಿರುವೆ. ಕರ್ನಾಟಕದ ಸಕಲ ಭಾಗಗಳಲ್ಲಿಯೂ ಲೇಖಕರೂ, ಕವಿಗಳೂ ಹುಟ್ಟಬೇಕೆಂಬುದೇ ನನ್ನ ಉದ್ದೇಶ. ನಾನು ಸ್ವತಃ ಮಾಧ್ವನಾಗಿ ಅದರಲ್ಲಿ ವಿಶ್ವಾಸವುಳ್ಳವನಾಗಿದ್ದರೂ ಜನರಿಗೆ ಅದೊಂದು ಪಂಥದ ಪತ್ರಿಕೆಯೆಂಬ ತಪ್ಪು ಕಲ್ಪನೆಯು ಆಗಬಾರದೆಂದೇ, ಲಿಂಗಾಯತ, ಕ್ರಿಶ್ಚನ್ ಮುಂತಾದ ಮಿಕ್ಕ ಧರ್ಮ-ಪಂಥಗಳಿಗೇನೇ ಹೆಚ್ಚು ಅವಕಾಶ ಕೊಟ್ಟಿರುವೆ. ಸಾರಾಂಶ, ಕವಿವರ್ಯ ಬೇಂದ್ರೆಯವರು ನನ್ನನ್ನು ಉದ್ದೇಶಿಸಿ, "ಆಡು ಮುಟ್ಟದ ಗಿಡವಿಲ್ಲ ವೆಂಕಟರಾಯರು ತೆಗೆದುಕೊಳ್ಳದ ಕಾರ್ಯವಿಲ್ಲ" ಎಂದು ಹೇಳಿದ್ದು ನಿಜವು. ಅಷ್ಟೊತ್ತಿಗೆ ಪೂರ್ಣವಾಗಿ ವಿಕಾಸವಾಗಿದ್ದ ಕರ್ನಾಟಕತ್ವದ ಕಲ್ಪನೆಗೆ ವಿಶಾಲತೆಯನ್ನು ತಂದುಕೊಡುವುದೇ ಜಯಕರ್ನಾಟಕದ ಮುಖ್ಯ ಕಾರ್ಯ.

ಕೊನೆಗೆ, ನನ್ನ ಪತ್ನಿಯನ್ನು ಈ ಪ್ರಸಂಗದಲ್ಲಿ ಸ್ಮರಿಸುವೆ. ನನ್ನ ಜೀವನದಲ್ಲಿ, ನನಗೆ ನನ್ನ ಧರ್ಮಪತ್ನಿಯಾದ ಲಕ್ಷ್ಮೀಬಾಯಿ ಇವಳ ನೆರವಿಲ್ಲದಿದ್ದರೆ, ನನ್ನಿಂದ ಇಷ್ಟೊಂದು ಕಾರ್ಯವಾಗುತ್ತಿತ್ತೆಂದು ಹೇಳಲಾರೆ. ಅವಳು ತೀರಿಕೊಂಡು ಸುಮಾರು ಏಳು ವರ್ಷಗಳಾದವು. ಕೊನೆಯ ವರೆಗೆ ಅವಳು

ನನಗೆ ಸದ್ದಿಲ್ಲದೆ ಸಹಾಯ ಮಾಡುವ ಸಹಕಾರಿಯಾಗಿದ್ದಳು. ಅವಳು ಅಷ್ಟೊಂದು ಕಲಿತವಳಲ್ಲ. ಹಳೆಯ ಕಾಲದ ಮಿಕ್ಕ ಹೆಂಗಸರಂತೆ ಹುಟ್ಟಾ ಧರ್ಮದ ಕಡೆಗೇ ಪ್ರವೃತ್ತಿ. ಅವಳಿಗೆ ಒಂದೇ ಒಂದು ಮಾತು ಗೊತ್ತು. ಅದೆಂದರೆ, ಎಂಥ ಸ್ಥಿತಿಯಲ್ಲಿಯೂ ಅನುಕೂಲವಾಗಿ ಆನಂದದಿಂದ ಇರುವುದು. ಮೊದಲನೆಯ ಸಲ ನಾನು ವಕೀಲಿ ಬಿಟ್ಟಾಗ ಅವಳು ಚಿಕ್ಕವಳು. ಅಲ್ಲದೆ ನಮ್ಮ ಮನೆತನ ಮಧ್ಯಮ ವರ್ಗದ ಕುಟುಂಬ; ಹೊಟ್ಟೆ-ಬಟ್ಟೆಗೆ ತಾಪತ್ರಯ ವಿರಲಿಲ್ಲ. ಆಗ, ನಾನು ದಾರಿದ್ರ್ಯದೀಕ್ಷೆ ತಕ್ಕೊಂಡದ್ದೇನೂ ದೊಡ್ಡ ಮಾತಲ್ಲ. ಆದರೆ, ಮುಂದೆ ದೇವರು ನನಗೂ ಅವಳಿಗೂ ಅನೇಕ ಸಲ ಪರೀಕ್ಷೆಯ ಕಾಲ ತಂದ! ನನ್ನಿಬ್ಬರು ತಮ್ಮಂದಿರು ತೀರಿಕೊಂಡು, ಅವರಿಬ್ಬರು ನಡೆಯಿಸಿದ ಎರಡು ಅಂಗಡಿಗಳು, ಒಂದು ಅಡತಿ ಅಂಗಡಿ, ಮತ್ತೊಂದು ಅರಿವೆಯ ಅಂಗಡಿ ಇವೆರಡೂ ಮುಳುಗಿ ಸುಮಾರು ೨೦ ಸಾವಿರ ರೂಪಾಯಿಗಳ ಸಾಲ ಹೊರ ಬೇಕಾಯಿತು. ಆಗ ವಕೀಲಿ ಬಿಟ್ಟಿದ್ದೆ. ಅಂಗಡಿಗಳನ್ನು ನಡಿಸಬಹುದಾಗಿತ್ತು. ಆದರೆ, ಹಾಗೆ ಮಾಡಿದ್ದರೆ, ದೇಶಸೇವೆ ಬಿಡಬೇಕಾಗುತ್ತಿತ್ತು! ಆಗ, ನನ್ನದೂ ಪರೀಕ್ಷೆಯ ಕಾಲ. ದೇವರು ಹೇಗೋ ಅವಳಿಗೂ ಬುದ್ಧಿ ಕೊಟ್ಟ, ನನಗೂ ಬುದ್ಧಿ ಕೊಟ್ಟ! ಅವಳು ನನ್ನನ್ನು ದೇಶಕಾರ್ಯಕ್ಕೆ ಮೀಸಲಾಗಿ ಬಿಟ್ಟು, ತಾನೇ ಬಡತನದಿಂದ ಸಂಸಾರ ಸಾಗಿಸುವ ಭಾರ ಹೊತ್ತಳು! ಹೊಲ ಮಾರಿ ಮಕ್ಕಳಿಗೆ ಕಲಿಸಿದೆ. ಅವಳಿಗೆ ನಿಜವಾಗಿ ರಾಷ್ಟ್ರ ಗೊತ್ತಿದ್ದಿಲ್ಲ, ಕರ್ನಾಟಕ ಗೊತ್ತಿದ್ದಿಲ್ಲ. ಮುಂದೆ ೧೯೩೦ರ ಸುಮಾರಕ್ಕೆ ಜಯಕರ್ನಾಟಕ ಬೇಂದ್ರೆಯವರಿಗೆ ಒಪ್ಪಿಸಿ, ಆಧ್ಯಾತ್ಮ ಜೀವನವನ್ನು ಕೈಕೊಂಡಾಗ ಮತ್ತೆ ಅವಳಿಗೆ ಪರೀಕ್ಷೆ ಕಾಲ ಬಂದಿತು! ರಾಜಕೀಯ ಚಳವಳಿಗೆ ಗುಪ್ತ ರೀತಿಯಿಂದ ಸಹಾಯ ಮಾಡುತ್ತಿದ್ದುದು ಗೊತ್ತಿದ್ದ ಸರಕಾರವು ಆಕಸ್ಮಿಕವಾಗಿ ನನ್ನನ್ನು ಸೆರೆಹಿಡಿದು ಬಂಧಿಸಿ, ಒಂದು ಕುಗ್ರಾಮದಲ್ಲಿ ದಿಗ್ಬಂಧನದಲ್ಲಿ ಇಟ್ಟಿತು! ಈಗಿರುವ ಐದು ಮಕ್ಕಳು ಆಗ ತೀರ ಚಿಕ್ಕವರು. ನನ್ನನ್ನು ಬಂಧಿಸಿ ಒಯ್ದಾಗ, ಮನೆಯಲ್ಲಿ ಅವಳೂ ನನ್ನ ಚಿಕ್ಕಮಕ್ಕಳೂ ಇಷ್ಟೇ ಮಂದಿ. ನಾನು ನನ್ನ ಹತ್ತರದಲ್ಲಿದ್ದ ಹೇಜೀಬ ರಾಮಚಂದ್ರ, ಕಡ್ಲೇಬಾಳ ಪ್ರಲ್ಹಾದ ಮತ್ತು ಶ್ರೀನಿವಾಸ ಕುಲಕರ್ಣಿ ಎಂಬ ವಿದ್ಯಾರ್ಥಿಗಳ ಕಡೆಗೆ ಮನೆ ಒಪ್ಪಿಸಿ ಹೋದೆ. ಅವಳು ಆಗ ತಿಲಪ್ರಾಯವೂ ಧೃತಿಗೆಡಲಿಲ್ಲ! ಕೆಲವರು ಸರಕಾರದವರಿಗೆ ಮಾಫೀ ಬೇಡಿಕೊಂಡು ಬಿಡ

ಲ್ಪಟ್ಟಿದ್ದರು. ಆಗ, ನನ್ನ ಹೆಂಡತಿ, ತನ್ನ ಕಷ್ಟಗಳಿಗಾಗಿ, ಯಾವ ಕಾರಣ ದಿಂದಲೂ ಕ್ಷಮೆ ಬೇಡಬಾರದೆಂದು ನಿಕ್ಷುಣ್ಣವಾಗಿ ಹೇಳಿಕಳಿಸಿದಳು ! ಮುಂದೆ 'ಚಲೇಜಾವ' ಚಳವಳಿಯಲ್ಲಿ ಸೇರಿದ ನನ್ನ ಹಿರಿಯ ಮಗ ಚಿ|| ಭೀಮು (ಈಗ ಖಾನಾಪುರದ ಸರಕಾರೀ ಪಿಂಗಾಣಿ ಕೇಂದ್ರಕ್ಕೆ ಮುಖ್ಯಾಧಿಕಾರಿ) ಇವನ ಮೇಲೆ ಪ್ರಸಂಗ ಬಂದಾಗ ಅವಳು ಡಗಮುಗಿಸಲಿಲ್ಲ! ನನ್ನ ಮೇಲೆ ಅನೇಕ ವರ್ಷ ಗುಪ್ತ ಪೋಲೀಸರಂತೂ ಇದ್ದೇ ಇದ್ದರು. ೨–೩ ಸಲ, ನನ್ನ ಗೈರ ಹಾಜರಿಯಲ್ಲಿ, ಪೋಲೀಸ ಪಡೆಯನ್ನು ತಂದು ನನ್ನ ಬಂಗ್ಲೆ ಶೋಧ (Search) ಮಾಡಿದರು. ಆದರೆ ಅದೆಲ್ಲ ಅವಳಿಗೆ ರೂಢಿಯಾಗಿ ಹೋಗಿತ್ತು !

ಇವೆಲ್ಲಕ್ಕೂ ಅವಳ ಮುಖ್ಯ ಬಂಡವಲವೆಂದರೆ, ಅವಳ ಧಾರ್ಮಿಕ ಪ್ರವೃತ್ತಿ ಮತ್ತು ಹಳೆಯ ಹೆಂಗಸರಿಗೆ ಇರುವ, ಪತಿಗೆ ಅನುಕೂಲವಾಗಿರ ಬೇಕೆಂಬ ಸಾಮಾನ್ಯ ಪ್ರವೃತ್ತಿ ! ಅಂತೇ ಸಾಲ ತೀರಿಸಿ ಬಿಡಿರೆಂದು ಹೇಳಿ, ಮೈಮೇಲಿದ್ದ ಆಭರಣಗಳೆಲ್ಲವನ್ನೂ ಮಾರಲಿಕ್ಕೆ ಕೊಟ್ಟುಬಿಟ್ಟಳು ! ಮಾರಿ ಸಾಲ ತೀರಿಸಿದೆ. ಇರಲಿ, ಆಗ, ನನಗೆ ಅರ್ಥವಾಯಿತು, ಗಂಡನು ಮಾಡಿದ ಪುಣ್ಯದಲ್ಲಿ, ಅರ್ಧ ಪಾಲು ತಾನಾಗಿಯೇ ಹೆಂಡತಿಗೆ ಏಕೆ ಹೋಗುತ್ತದೆಂಬುದು ! ಗಂಡನಿಗೆ ದೇಶಸೇವೆ ಮಾಡಿದೆನೆಂಬ ಸಮಾ ಧಾನವಾದರೂ ಇರುತ್ತದೆ. ಹೆಂಡತಿಗೆ ? ನಿಃಸ್ವಾರ್ಥ ಸೇವೆಯ ಪುಣ ವೊಂದೇ ! ಇರಲಿ, ಪುಸ್ತಕ ಮುಗಿಸುವೆ.

ಇತ್ತೀಚೆಗೆ, " ಹೆಸರಿನಲ್ಲೇನಿದೆ? ಕರ್ನಾಟಕವೆಂದರೂ ಅಷ್ಟೇ, ಮೈಸೂರು ಅಂದರೂ ಅಷ್ಟೇ "ಎಂದು ಕೆಲವರು ಆತ್ಮವಂಚನೆಯನ್ನು ಮಾಡಿಕೊಂಡು, ಪರ ವಂಚನೆ ಮಾಡುತ್ತಿರುವರು. ಆ ಬಗ್ಗೆ ತುಸು ಹೇಳುವೆ. ಅಂಥವರ ಮಾತಿಗೆ ಕಿವಿ ಜೋಲಬಾರದು. ಆಹುದು, ಹೆಸರಿನಲ್ಲಿಯೂ ಒಂದು ದೊಡ್ಡ ಜಾದು ಅದೆ! ಹೆಸರಿನಲ್ಲೇನಿದೆ ಎಂದು ಉಪದೇಶ ಮಾಡುವವರಿಗೆ, ನಾನು, ಕಾಂಗ್ರೆಸ್ಸಿಗರ ಕಡೆಗೆ ಬೊಟ್ಟು ಮಾಡಿ ತೋರಿಸುತ್ತೇನೆ. " ಕಾಂಗ್ರೆಸ್ಸು " ಇಂಗ್ಲಿಷ ಶಬ್ದ. ಅದು, ಜಾತಿ-ಮತ-ಪಂಥಗಳಂತೆ ಒಂದು ಪಕ್ಷದ ಶಬ್ದ! ಅದಕ್ಕೆ ಪ್ರತಿಯಾಗಿ ತಮ್ಮದೊಂದು ಬೇರೆ ಶಬ್ದವನ್ನುಪಯೋಗಿಸದೆ 'ಕಾಂಗ್ರೆಸ್ಸು' 'ಕಾಂಗ್ರೆಸ್ಸು' ಎಂದು

ಏಕೆ ಕೂಗಿಕೊಳ್ಳುತ್ತಾರೆ! ನನ್ನ ಅಭಿಪ್ರಾಯದಂತೆ, ಶಬ್ದಗಳಲ್ಲಿಯೂ ಮೋಹಿನೀ ಶಕ್ತಿ ಇರುತ್ತದೆ! ನಿನ್ನೆ ಹುಟ್ಟಿ, ಇಂದು ಕಣ್ಣು ತೆಗೆದ ಕಾಂಗ್ರೆಸ್ಸಿಗೇನೇ ಹೆಸರಿನ ಇಷ್ಟೊಂದು ಮೋಹ! ಅಂದಬಳಿಕ ಎರಡು ಸಾವಿರ ವರ್ಷಗಳಿಂದ ಬಂದ 'ಕರ್ನಾಟಕ'ದ ಹೆಸರಿನಲ್ಲಿ ಕೂಡ ಅದ್ಭುತ ಶಕ್ತಿ ಇದ್ದೇ ಇದೆ! ಆದಕಾರಣ, "**ಕರ್ನಾಟಕ**" ಹೆಸರನ್ನು ಹಾರಿಹೊಡೆಯಲಿಕ್ಕೆ ಯಾರೂ ಪ್ರಯತ್ನಿಸಬಾರದೆಂದು ವಿನಯಪೂರ್ವಕವಾಗಿ ಸೂಚಿಸುತ್ತೇನೆ. ಇರಲಿ, ಕರ್ನಾಟಕತ್ವದ ಕಲ್ಪನೆಯ ವಿಕಾಸವನ್ನಷ್ಟೇ ಹೇಳುವದು ಈ ಚಿಕ್ಕ ಗ್ರಂಥದ ಉದ್ದೇಶವಾದ್ದರಿಂದ ಈ ಗತವೈಭವಕ್ಕೆ ಇಲ್ಲಿಗೇ—

ಶ್ರೀಕೃಷ್ಣಾರ್ಪಣಮಸ್ತು



೧ನೆಯ ಅನುಬಂಧ

## ಕರ್ನಾಟಕತ್ವಕ್ಕೆ ನನ್ನ ಕೊನೆಯ ಕಾಣಿಕೆ

'ಗತವೈಭವ'ವು ಉದಯರಾಗ, ವೇದಘೋಷ, ಪಾತರ್ಯಜ್ಞ; ಭಾರತೀ ದೇವಿ-ಕರ್ನಾಟಕ ದೇವಿಯರಿಗೆ ಆಗ ನನ್ನ ಕಕ್ಕಡಾರತಿ, ಹೊಂಗಿರಣಗಳ ಹರವು ಆಗ! ಅದು ಕರ್ನಾಟಕಕ್ಕೆ ಕಹಳೆಯ ಕೂಗು! 'ಜಯಕರ್ನಾಟಕ' ಮಂತ್ರ; ಅದು ಮಧ್ಯಾಹ್ನ ಹೋಮ; ಪ್ರಜ್ವಲಿಪ ಜ್ವಾಲೆ; ಬೆಂಗಿರಣಗಳ ಪ್ರಸಾರ ಆಗ! ಅದರ ತೇಜಸ್ಸೂ ಅಡಗಿದೆ. ಇದೀಗ ಸಾಯಂ-ಸಂಧ್ಯಾ; ಈ **ಕರ್ನಾಟಕತ್ವದ ಸೂತ್ರಗಳು** ಎಂಬುದು ನನ್ನ 'ಸೂತ್ರಯಜ್ಞ!' ಈ ಪತ್ರಪುಷ್ಪಮಾಲೆಯಿಂದಲೇ ದೇವಿ ಸಂತುಷ್ಟಳಾಗಲಿ, ಈ ನನ್ನ ಪೂಜೆಯಿಂದ ಕರ್ನಾಟಕಕ್ಕೆ ಪ್ರಸನ್ನಳಾಗಲಿ!

ಕರ್ನಾಟಕತ್ವದ ಮತ್ತು ರಾಷ್ಟ್ರೀಯತ್ವದ ಬಗ್ಗೆ ಇದೀಗ ಭ್ರಾಮಕ ಕಲ್ಪನೆಗಳುಂಟಾಗಿ, ಕರ್ನಾಟಕತ್ವವು ಬರ್ಷಣಪಾಗುವಷ್ಟು ಹೀನಸ್ಥಿತಿಗೆ ಬಂದಿದೆ! ಅಲ್ಪಸಂಖ್ಯಾಕರ ಅಂಜಿಕೆ, ಬಹುಸಂಖ್ಯಾಕರ ಬೆದರಿಕೆ, ಜಾತೀಯತೆ-ಪ್ರಾಂತೀಯತೆಯ ಬಗ್ಗೆ ಮುಖಂಡರ ತಪ್ಪು ಕಲ್ಪನೆ, ಮೈಸೂರು ಮುಂತಾದ ಭಾಗಗಳ ಒಡಕು ಬುದ್ಧಿ—ಇವೇ ಮುಂತಾದ ಅನೇಕ ಭೂತಗಳು ಈಗ ಎದ್ದಿವೆ. ತಪಸ್ಸಿಗೆ ಕುಳಿತಾಗ ಮುಂಚೆ ಭೂತಗಳೇಳುತ್ತವೆ! ಇದೀಗ ಕರ್ನಾಟಕರ ತಪಸ್ಸಿಗೆ ಪ್ರಾರಂಭ! ಆದಕಾರಣ, ಕರ್ನಾಟಕತ್ವದ ನಿಜವಾದ ಭೂಮಿಕೆ ಮತ್ತೊಮ್ಮೆ ಸ್ಪಷ್ಟಪಡಿಸುವುದು ನನಗೆ ಅವಶ್ಯವೆನಿಸಿ, ಈ ಸೂತ್ರಗಳನ್ನು ರಚಿಸಿರುವೆ. ಇವು 'ಕರ್ನಾಟಕ'ಕ್ಕೆ ಮಾತ್ರ ಅನ್ವಯಿಸದೆ, ತಕ್ಕ ಆದಲುಬದಲುಗಳಿಂದ ಮಿಕ್ಕ ಪ್ರಾಂತಗಳಿಗೂ ಅನ್ವಯಿಸುವವು ಎಲ್ಲ ಪ್ರಾಂತಗಳೂ ಕೂಡಿ ಒಟ್ಟಾರೆ ಪ್ರಯತ್ನಿಸಬೇಕೆಂಬುದೇ ನನ್ನ ಉದ್ದೇಶ.

೧೨-೧೦-೫೦ **ಆಲೂರ ವೆಂಕಟರಾಯರು**

# ಕರ್ನಾಟಕತ್ವದ ಸೂತ್ರಗಳು

" ವ್ಯಹ ರಶ್ಮಿನ್ ಸಮೂಹ ತೇಜಃ " ( ಈಶ. ಉ. )
ಜ್ಞಾನಕಿರಣಗಳನ್ನು ವಿಸ್ತರಿಸು, ತೇಜಸ್ಸನ್ನು ವೃದ್ಧಿಗೊಳಿಸು.

—ಕರ್ನಾಟಕಾಂತರ್ಯಾಮಿಯಾದ ಭಾರತದೇವಿಗೆ ನಮೋ.
—ಭಾರತಾಂತರ್ಯಾಮಿಯಾದ ಭೂದೇವಿಗೆ ನಮೋ.

## ವಿಶ್ವಬಂಧುತ್ವ

—ಸರ್ವದೇಶವು ಪುಣ್ಯದೇಶವು। ಸರ್ವಕಾಲವು ಪರ್ವಕಾಲವು। ಸರ್ವಜೀವರು ದಾನಪಾತ್ರರು....ಮೂರು ಲೋಕದೊಳು ವಿಮಲಮೂರ್ತಿ ಧ್ಯಾನ ಉಳ್ಳವಗೆ.

—ಆವ ಕುಲದವನಾದಡೇನಿ। ನ್ಯಾವ ದೇಶದೊಳಿದ್ದಡೇನಿ। ನ್ಯಾವ ಕಾಲದಲಿ॥ ಶ್ರೀವರನ ಸರ್ವತ್ರದಲಿ ಸಂ। ಭಾವಿಸುತ ಪೂಜಿಸುತ ಮೋದಿಪ। ಕೋವಿದರಿಗುಂಟೇನೊ ಭಯ ದುಃಖಾದಿ ದೋಷಗಳು॥

—ಇಂಥ ವ್ಯಾಪ್ತ್ಯೋಪಾಸಕತ್ವವನ್ನು ಸಂಪಾದಿಸುವುದೇ ಸಾಧಕನ ಕೊನೆಯ ಧ್ಯೇಯ. ಅವನೇ ಜೀವನ್ಮುಕ್ತ, ಅಂಥವನಿಗೆ ದೇಶಾಭಿಮಾನ, ಪ್ರಾಂತಾಭಿಮಾನ, ಜಾತ್ಯಭಿಮಾನ ಮುಂತಾದ ಯಾವ ಕಟ್ಟುಗಳೂ ಇಲ್ಲ. ಓಂ ಶಾಂತಿಃ ಶಾಂತಿಃ ಶಾಂತಿಃ ಎಂದು ಅವುಗಳ ನಿತ್ಯ ಜಪ ಮಾಡಬೇಕು ಮತ್ತು ಆ ಧ್ಯೇಯವನ್ನು ಸಾಕ್ಷಾತ್ಕರಿಸುವದಕ್ಕೆ ಪ್ರಯತ್ನ ಮಾಡಬೇಕು.

—ವ್ಯಕ್ತಿ, ಸಮಾಜ, ಜನಾಂಗ, ರಾಷ್ಟ್ರ, ಜಾತಿ, ಮತ, ಪಂಥ, ಪಕ್ಷ ಇವೇ ಮುಂತಾದವುಗಳೆಲ್ಲ ವಿಶ್ವಭೂತಹಿತತ್ವಕ್ಕೆ ಸಾಧನಗಳು.

—ವಿಶ್ವ ಬಂಧುವು ಇವು ಯಾವುಗಳನ್ನೂ ನಷ್ಟ ಮಾಡಹೋಗುವದಿಲ್ಲ. ಅವೆಲ್ಲಕ್ಕೂ ವಿಶಾಲರೂಪವನ್ನು ಕೊಡುತ್ತಾನೆ.

—ಅವೆಲ್ಲವುಗಳಿಗೂ ಮರ್ಯಾದೆ ಇದೆ. ಅನಿರ್ಬಂಧ ಸ್ವಾತಂತ್ರ್ಯವಿಲ್ಲ.

## ಭಾರತೀಯ ಸಂಸ್ಕೃತಿ

—ವಿಶ್ವ ಸಂಸ್ಕೃತಿಯೇ ಸನಾತನ ಸಂಸ್ಕೃತಿ ಅಂದರೆ ನಿತ್ಯ ಸಂಸ್ಕೃತಿ.

—ಸನಾತನ ಸಂಸ್ಕೃತಿಗೆ ಎರಡು ರೂಪಗಳು-ಒಂದು ವ್ಯಾಪ್ತರೂಪ; ಎರಡನೆಯದು ವಿಶಿಷ್ಟರೂಪ.

—ನಮ್ಮ ಋಷಿಗಳು ಇವೆರಡೂ ರೂಪಗಳ ಉಪಾಸಕರು, ಪ್ರಚಾರಕರು. ನಮ್ಮ ಭಾರತದೇಶದಲ್ಲಿ ಇವೆರಡೂ ರೂಪಗಳು ಕಂಡುಬರುತ್ತವೆ.

—ಜಾತಿ, ಮತ, ಪಂಥ, ದೇಶ, ಜನಾಂಗ ಮುಂತಾದ ಯಾವ ವಿಧದ ಭೇದಭಾವವು ಇಲ್ಲದೆ ನಮ್ಮ ಭಾರತ ದೇಶವು ಎಲ್ಲರಿಗೂ ಇಂಬು ಗೊಟ್ಟದ್ದು ಈ ವ್ಯಾಪ್ತರೂಪದ ಚಿನ್ಹ.

—ಈ ಸನಾತನ ಧರ್ಮಕ್ಕೆ ಮತಾಂತರ ಕಾರಣವಿಲ್ಲ. ದೇಶಾಂತರ ವಿಲ್ಲ. ಇದಕ್ಕೆ ಎಲ್ಲರೂ ಸಮಾನ ಅಧಿಕಾರಿಗಳು. ಎಲ್ಲರಿಗೂ ಮುಕ್ತಿ-ಮುಕ್ತದ್ವಾರ.

—ಇದೇ ಸನಾತನ ಧರ್ಮದ ವೈಶಿಷ್ಟ್ಯ.

—ಈ ವ್ಯಾಪ್ತರೂಪವಲ್ಲದೆ ವಿಶಿಷ್ಟ ಧರ್ಮ, ವಿಶಿಷ್ಟ ಸಂಸ್ಕಾರ, ವಿಶಿಷ್ಟ ಆಚಾರ ಇವುಗಳ ಎರಕದಲ್ಲಿ ಆ ವ್ಯಾಪ್ತ ರೂಪವನ್ನು ಹೊಯ್ದು ಅದಕ್ಕೆ ನಮ್ಮ ಋಷಿಗಳು ವಿಶಿಷ್ಟ ರೂಪವನ್ನೂ ಕೊಟ್ಟಿರುವರು.

—ಆ ಸನಾತನ ಸಂಸ್ಕೃತಿಯ ವಿಶಿಷ್ಟ ರೂಪವನ್ನೂ ಸಂರಕ್ಷಿಸುವದು ಭಾರತೀಯರ ಕರ್ತವ್ಯ.

—ಈ ವಿಶಿಷ್ಟ ರೂಪವೇ ಜಗತ್ತು ಕೂಡ ಅನುಸರಿಸಬಹುದಾದ ಮಾದರಿಯ ಸಮಾಜದ ರೂಪ.

—ವ್ಯಾಪ್ತರೂಪಕ್ಕೆ ವಿರೋಧಿಗಳಿದ್ದವರು ಮಾತ್ರವೇ ನಮ್ಮ ಶತ್ರುಗಳು.

—"ವಿಶಿಷ್ಟ ರೂಪ"ವನ್ನು ಒಪ್ಪದಿದ್ದವರು ಶತ್ರುಗಳಲ್ಲ. "ಭಾರತೀಯ ಸಂಸ್ಕೃತಿ"ಯೆಂದರೆ ಸನಾತನ ಸಂಸ್ಕೃತಿ. ಅದಕ್ಕೆ ಹಿಂದುತ್ವವೆನ್ನಬಹುದು; ಹಿಂದಿತ್ವವೆನ್ನಲೂಬಹುದು; ಇಲ್ಲಿ ಹೆಸರು ಮುಖ್ಯವಲ್ಲ-ಅರ್ಥ ಮುಖ್ಯ.

## ರಾಷ್ಟ್ರೀಯತ್ವ

—ರಾಷ್ಟ್ರವೆಂದರೆ ಸಮಷ್ಟಿಜೀವ.

—ರಾಷ್ಟ್ರೀಯತ್ವವೆಂದರೆ " ನಮ್ಮದೀ ನಮ್ಮದೀ ಭರತ ಭೂಮಿ " ಎಂಬ ಅಭಿಮಾನ.

—ರಾಷ್ಟ್ರವೆಂದರೆ ಕೇವಲ ಪರ್ವತ, ಭೂಮಿ, ನದಿ, ಹಳ್ಳಕೊಳ್ಳಗಳಲ್ಲ. ಅಚೇತನ ಪದಾರ್ಥಗಳನ್ನು ಪೂಜಿಸುವದು ಪೂಜೆಯೂ ಅಲ್ಲ.

—ರಾಷ್ಟ್ರಕ್ಕೂ ವ್ಯಕ್ತಿಗಿದ್ದಂತೆ ದೇಹ–ಮನಸ್ಸು–ಆತ್ಮಗಳಿವೆ. ಅವೆಲ್ಲವುಗಳ ಪೂರ್ಣ ವಿಕಾಸವೇ ರಾಷ್ಟ್ರೀಯತ್ವದ ಧ್ಯೇಯ.

—ನಮ್ಮ ರಾಷ್ಟ್ರ ಜಾತ್ಯತೀತ ರಾಷ್ಟ್ರ. ಇಲ್ಲಿ ಎಲ್ಲ ಧರ್ಮ, ಪಂಥ, ಮತ, ಜಾತಿ, ಜನಾಂಗ, ಪಕ್ಷ, ಪಂಗಡಗಳಿಗೂ ಇಂಬು ಇದೆ. ಸಮಾನ ಹಕ್ಕುಗಳು ಅವೆ.

—ಜಾತ್ಯತೀತತ್ವದ ನಿಜವಾದ ಅರ್ಥ ಇದೇ. ಇವೆಲ್ಲವುಗಳ ನಾಶವೆಂದರ್ಥವಲ್ಲ.

—ಧರ್ಮರಕ್ಷಣೆ, ಸಂಸ್ಕೃತಿಸಂವರ್ಧನಗಳು ಆಗದ ರಾಷ್ಟ್ರೀಯತ್ವವು ನಿಜವಾದ ರಾಷ್ಟ್ರೀಯತ್ವವೇ ಅಲ್ಲ.

—ನಿಜವಾದ ರಾಷ್ಟ್ರೀಯತ್ವವನ್ನು ಪೋಷಿಸುವದಕ್ಕಾಗಿಯೇ ಸರಕಾರ.

—ಋಷಿಗಳು ಧ್ಯೇಯದರ್ಶಕರು, ಸರಕಾರವು—ಅದು ಪ್ರಜಾಪ್ರಭುತ್ವದ್ದೇ ಇರಲಿ, ಇಲ್ಲವೆ ಯಾವದೇ ಇರಲಿ,—ಧ್ಯೇಯ ರಕ್ಷಕವು.

—ಧರ್ಮ ಮತ್ತು ಕ್ಷಾತ್ರ ಇವುಗಳ ಅನ್ಯೋನ್ಯದಿಂದಲೇ ರಾಷ್ಟ್ರಕ್ಕೆ ನೆಮ್ಮದಿ. ಒಬ್ಬರು ಮತ್ತೊಬ್ಬರ ಕ್ಷೇತ್ರ ಆಕ್ರಮಿಸಬಾರದು.

—ಧರ್ಮದಲ್ಲಿ ವಿಶ್ವಾಸ–ಜ್ಞಾನಗಳಿಲ್ಲದವರು ಸರಕಾರದಲ್ಲಿ 'ಧರ್ಮ'ಕ್ಕೆ ಪ್ರತಿನಿಧಿಗಳಾಗಲಾರರು.

—ಭಾರತೀಯ ಸಂಸ್ಕೃತಿಯ ಅಭಿಮಾನವನ್ನು ತಾಳದವ ರಾಷ್ಟ್ರೀಯನಲ್ಲ. ಒಂದು ದೇಶದಲ್ಲಿ ಹುಟ್ಟಿದ ಮಾತ್ರಕ್ಕೆ ರಾಷ್ಟ್ರೀಯನಾಗುವದಿಲ್ಲ. ತದ್ವಿರುದ್ಧವಾಗಿ ಹಾಗೆ ಅಭಿಮಾನ ತಾಳಿದವ ಪರದೇಶದಲ್ಲಿ ವಾಸಿಸಿದರೂ ಭಾರತೀಯನೇ.

—ರಾಮರಾಜ್ಯದಲ್ಲಿ ಸೀತೆಯನ್ನು ರಾವಣನು ಕದ್ದೊಯ್ದನು. ಆದರೆ ಅವಳನ್ನು ಅಶೋಕವನದಲ್ಲಿ ಇಟ್ಟನಲ್ಲದೆ ಅವಳ ಮಾನಭಂಗ ಮಾಡಲಿಲ್ಲ. ದ್ವಾಪರದಲ್ಲಿ ರಾವಣನಿಗಿಂತ ನೀಚನಾದ ದುರ್ಯೋಧನನು ದ್ರೌಪದಿಯ ಸೀರೆ

ಸೆಳೆಯಲೆತ್ನಿಸಿದನು, ಆದರೆ ಸೆಳೆಯಲಿಲ್ಲ. ಕಲಿಯುಗದಲ್ಲಿ ಅವರಿಗಿಂತ ನೀಚರು ಹುಟ್ಟುತ್ತಿರುವದು ಕಲಿಮಹಾತ್ಮೆ!

—ಸೀತೆಯನ್ನು ತರುವದಕ್ಕೆ ಹನುಮಂತನು ಮಂಗಗಳಂತಹ ಬಡ ಪ್ರಾಣಿಗಳ ಸೈನ್ಯವನ್ನೂ ಕಟ್ಟಿ ಅವಳನ್ನು ತಂದನು. ದ್ವಾಪರದಲ್ಲಿ ಕಲಿ ಭೀಮನು ಯೋಧರನ್ನು ಕಲೆ ಹಾಕಿ ಭಗವತ್ಕಾರ್ಯವನ್ನು ಸಾಧಿಸಿದನು.

—ಇದೀಗ ಜಗತ್ತಿನಲ್ಲಿ ಮತ್ತೆ ದೇವದಾನವರ ಯುದ್ಧ, ಇದು ಪುನಃ ಹೆಚ್ಚಿನ ಕೌರವರೊಡನೆ ಕಾಳಗ! ದೇವ-ದಾನವ ಯುದ್ಧದಲ್ಲಿ ದೇವತೆಗಳಿಗೆ ಮೊದಲು ಅಪಜಯ; ಕೊನೆಗೆ ಜಯ. ಶ್ರೀಕೃಷ್ಣ ಪರಮಾತ್ಮನ ಬೆಂಬಲ ಉಳ್ಳವರಿಗೆ ಕೊನೆಗೆ ಜಯವು ಕಟ್ಟಿಟ್ಟದ್ದೇ; ಶ್ರೀ, ವಿಜಯ, ಭೂತಿ, ಮುಂತಾದವುಗಳು ನಮ್ಮ ವಶವಾಗುವವು.

—ಭರತಖಂಡಕ್ಕೆ ಈಗ ನಾಲ್ಕೂ ದಿಕ್ಕಿನಿಂದ ಪ್ರಳಯಾನಲನ ಮುಸುಕು ಬೀಳಹತ್ತಿದೆ. ಜಗತ್ತಿನಲ್ಲಿ ಎಲ್ಲಿ ನೋಡಿದಲ್ಲಿ ರಾಕ್ಷಸೀ ಸಂಪತ್ತಿನ ಹುತು ಹುತು ಆಟವೇ ಆಟ; ಮಾನವನ ಒಳಗೂ ಅದೇ ಆಟ; ಹೊರಗೂ ಅದೇ ಆಟ; ಆಸುರೀ ಸಂಪತ್ತು ಪರಮಾವಧಿಗೆ ಮುಟ್ಟಿದೆ!

—ದೈವೀ ಸಂಪತ್ತಿಗೆ ಜಯವಾಗಲಿ. ಆಸುರೀಸಂಪತ್ತು ನಾಶವಾಗಲಿ!

—ಇದು ಬುದ್ಧಾವತಾರ ಕಾಲ. ಇದರಲ್ಲಿ ಬುದ್ಧಿಗೆ ಪ್ರಾಧಾನ್ಯ; ಬುದ್ಧಿ ಬಲದಿಂದಲೇ ಬುದ್ಧನು ಜಗತ್ತನ್ನು ಆಕ್ರಮಿಸಿದನು. ನಾವೂ ಬುದ್ಧಿಬಲ ದಿಂದಲೇ ಜಗತ್ತನ್ನು ನಮ್ಮ ತತ್ವಕ್ಕೆ ವಶಮಾಡಿಕೊಂಡು, ವಿಶ್ವಶಾಂತಿಗಾಗಿ ಹುಟ್ಟಿದ " ವಿಶ್ವಸಂಸ್ಥೆಗೆ " ( U. N. O. ) ಸನಾತನದ ವಿಶ್ವರೂಪವನ್ನು ಕೊಡೋಣ.

—ಪ್ರಜಾರಾಜ್ಯದ ಬಹುಮತವೆಂದರೆ ಕೇವಲ ಸಂಖ್ಯಾಕ ಬಹುಮತ ವಲ್ಲ; ಬಹುಶ್ರುತರ ಮತ. ವಿದ್ವಾಂಸರ ಬಹುಮತ.

## ಕರ್ನಾಟಕತ್ವ

—ಕನಾಟಕವು ನಮ್ಮ ಕನ್ನಡಿಗರ **ಕುರು** ಕ್ಷೇತ್ರ; ಭಾರತವು ನಮ್ಮ **ಧರ್ಮ**ಕ್ಷೇತ್ರ.

—ಕನ್ನಡ ನುಡಿಯೂ ನಾಡೂ ನಮ್ಮ ನಡು-ಮನೆಯಾದರೂ ವಿಶ್ವ ವೆಂಬೀ ಪಗಡೀಪಟದಲ್ಲಿ ಭರತಭೂಮಿಯೇ ನಮ್ಮ ಕಟ್ಟೆಯ ಮನೆ.

–ಭಾರತೀದೇವಿಯು ವಿಶ್ವದ ಉತ್ಸವಮೂರ್ತಿಯು. ಕರ್ನಾಟಕದೇವಿಯು ಭಾರತೀದೇವಿಯ ಉತ್ಸವಮೂರ್ತಿಯು.

—ರಾಸಕ್ರೀಡೆಯಲ್ಲಿ ಗೋಪಿಕಾ ಸ್ತ್ರೀಯರು ಕೋಲಾಟವನ್ನಾಡುವಾಗ ಹೇಗೆ ಒಬ್ಬನೇ ಕೃಷ್ಣನನ್ನು ತಮ್ಮ ಹತ್ತಿರ ಕಾಣುತ್ತಿದ್ದರೋ ಹಾಗೆ ' ರಾಷ್ಟ್ರೀಯತ್ವ 'ವನ್ನು ' ಕರ್ನಾಟಕ ' ಸದಾ ಕಾಣಬೇಕು.

—ಭಾರತಾಂಬೆಯ " ಜಯಕರ್ನಾಟಕ "ವೆಂಬ ಕೊಳಲಿನಲ್ಲಿ ಕನ್ನಡಿಗರು ಸಪ್ತಸ್ವರಗಳನ್ನು ನುಡಿಸಿ ವೇಣುವಾದನಂಗೈಯಲಿ.

—ಕರ್ನಾಟಕತ್ವವು ಅತ್ಯಂತ ಪರಿಶುದ್ಧವಾದ ಭಾವನೆ ಅತ್ಯಂತ ವಿಶಾಲವಾದ ಭಾವನೆ. ಅದು ಕರ್ನಾಟಕದ ಹಿತಗಳೆಲ್ಲವನ್ನೂ ತನ್ನಲ್ಲಿ ಅಡಗಿಸಿಕೊಂಡಿದೆ.

—ಕನ್ನಡನುಡಿ ಬಹುಜನರ ಭಾಷೆಯಾಗಿರುವ ಪ್ರದೇಶ, ಕರ್ನಾಟಕ.

—ಕರ್ನಾಟಕದಲ್ಲಿ ಹುಟ್ಟಿದವ ಅಥವಾ ಶಾಶ್ವತ ವಾಸಿಯಾದವನು ಯಾವ ಉಪಭಾಷೆಯವನೇ ಇರಲಿ, ಯಾವ ಭಾಷೆಯವನೇ ಇರಲಿ, ಯಾವ ಜಾತಿಯವನೆ ಇರಲಿ, ಯಾವ ಪಂಥದವನೇ ಇರಲಿ, ಸಾತ್ವಿಕನೇ ಇರಲಿ, ತಾಮಸಿಯೇ ಇರಲಿ, ಹುಚ್ಚನೇ ಇರಲಿ, ಹೆಡ್ಡನೇ ಇರಲಿ, ಅವನು ಶೂನ್ಯವಾದಿಯೇ ಇರಲಿ, ಪಾಖಂಡಿಯೇ ಇರಲಿ, ಸೌವ್ಯವಾದಿಯೇ ಇರಲಿ ಅವರೆಲ್ಲರೂ ಕರ್ನಾಟಕರು.

—ಕರ್ನಾಟಕವು ಭಾರತದ ಒಂದು ಸಜೀವ ಭಾಗ. ಭಾರತೀದೇವಿಯ ಮಗಳು ಕರ್ನಾಟಕ ದೇವಿ. ಭಾರತವು ದೇಹ. ಕರ್ನಾಟಕವು ಅವಯವ ಮಾತ್ರ.

—ಭೂದೇವಿಗೂ ಭಾರತೀದೇವಿಗೂ ಇನ್ನೂ ಸಾಕಷ್ಟು ಬಾಂಧವ್ಯ ಬೆಳೆದಿಲ್ಲ. ಭಾರತವು ಇನ್ನೂ ವಿಶ್ವದ ಸಜೀವ ಭಾಗವಾಗಿಲ್ಲ. ಕರ್ನಾಟಕ ದೇವಿಯದು ಹಾಗಲ್ಲ. ಅವರಿಬ್ಬರಲ್ಲಿ ಬಾಂಧವ್ಯ ಅತಿ ಪುರಾತನ ಕಾಲದಿಂದಲೂ ಬೆಳೆದು ಬಂದಿದೆ.

—ಭಾರತೀಯ ಸಂಸ್ಕೃತಿಯೂ ಕರ್ನಾಟಕ ಸಂಸ್ಕೃತಿ.

—ಅಲ್ಲದೆ ಕರ್ನಾಟಕ ಸಂಸ್ಕೃತಿ ಭಾರತೀಯ ಸಂಸ್ಕೃತಿಯನ್ನು ತನ್ನದೇ ಆದ ವಿಶಿಷ್ಟ ರೀತಿಯಲ್ಲಿ ಬೆಳೆಸಿ ಪೋಷಿಸುತ್ತ ಬಂದಿದೆ. ಅದೇ ಕರ್ನಾ

